श्रीः

# सहस्रयोगः

(585)

(लघुदीपिकाव्याख्यासहितः)

---

# ಸಹಸ್ರಯೋಗಃ

---

**ವೈದ್ಯಗುರು ಡಾಕ್ಟರ್ ಎಂ. ಆರ್. ಭಟ್,** ಪಿ. ಎಚ್. ಡಿ.

ಆಯುರ್ವೇದ ಮಹೋಪಾಧ್ಯಾಯ

ಮತ್ತು

**ವೈದ್ಯ ಎಂ. ಎಂ. ಆಳ್ವ,** ಆಯುರ್ವೇದ ಶಾಸ್ತ್ರಿ,

ಇವರಿಂದ ಭಾಷಾಂತರಿಸಿ

ಸುಪ್ರಸಿದ್ಧ ಗೋಂಡಲ ಸಂಸ್ಥಾನದ

**ರಾಜವೈದ್ಯ ಜೀವರಾಮ ಕಾಳಿದಾಸ ಶಾಸ್ತ್ರಿಯವರ**

**ಮುನ್ನುಡಿ ಸಮೇತ**

ಪ್ರಕಾಶಿಸಲ್ಪಟ್ಟಿತು.

---

PUBLISHED BY:

**DR. M. R. BHAT,**

JEPPU, MANGALORE

~~AND~~

~~VAIDYA M. M. ALVA~~,

~~MANGALORE.~~

---

ಬೆಲೆ: ರೂ. 2.

# FOREWORD

THE morbid disorganisation of process and function in the body, known as disease, provides a constant problem that must ever loom large on the mental horizon of mankind. Although disease is always more or less definitely associated with certain physiological departures from the normal, its real significance is rarely or never wholly understood. Still less is the fact appreciated that specific forms of pathological derangement co-exist with equally distinctive types of character and temperament which, therefore, must be taken into account, in any scientific treatment of disease.

AYURVEDA makes an honest attempt to understand this and asserts that 'Man cannot be treated without a thorough knowledge of the forces that have made him Man'. Hence is the medical science in India—Ayurveda—the "Sumum Sonarum of all life"--the knowledge of life as a whole.

The method of treatment advocated by the unknown author of this work in his various recipes is one, the greater part of which I have seen in operation. I can, therefore, confidently assert that the various methods advocated herein, do attain in practice, in certain diseases especially, a measure of success not achieved by any other system known to me.

I am not in the least to claim finality for this work; but the results, in brief, are a matter of fact.

This work must have been the outcome of wide clinical experience and a close study of the therapeutic value of plants. The author believes it is sufficiently well founded on observed facts to warrant its presentation.

Essentially a book like this needs no foreword; for it will not only serve a useful purpose in the treatment of diseases by professional persons, but it is also hoped that it will be of considerable help to any reader who might be interested in the Ancient Science of Ayurveda, as well as to all students of that Science.

20th April '37.

*Jeevaram Kalidas Shastri,*
RAJAVAIDYA,
GONDAL. (*Kathiawar*)



# ಉ ಪೋ ದ್ಘಾ ತ

ಜ್ವರರೋಗ ನಿವಾರಕನಾದ ಶ್ರೀ ಕೃಷ್ಣನೇ ದುಃಖೋಪಶಮನಕರನೂ ಆಯುರ್ವೇದ ಮೂಲನೂ ಆಗಿರುವ ಧನ್ವಂತರಿ ರೂಪದಿಂದ ಭಗವದ್ಗೀತಾ ಮೂಲಕವೂ ಅಗಾಧ ವೈದ್ಯಶಾಸ್ತ್ರಗಳ ಮೂಲಕವೂ ಪುರೋಗಾಮಿಯಾಗಿ ಪ್ರಜಾಕ್ಷೇಮನಿಧಿಯಾಗಿರುವನು.

ಹಿಂದುಸ್ಥಾನದ ಮುಕುಟಮಣಿಯೆನಿಸಿರುವ ಜವಾಹಿರಲಾಲರು ತಮ್ಮ ಅನುಪಮವಾದ ಆತ್ಮಕಥೆಯಲ್ಲಿ "ಹಿಂದುಗಳ ಆಯುರ್ವೇದ ಚಿಕಿತ್ಸಾ ಪದ್ಧತಿಯು ಹಿಂದೂ ಧರ್ಮದ ಗೋವಿನಂತೆ ಶಾಂತವಾಗಿಯೂ ಅಹಿಂಸಾತ್ಮಕವಾಗಿಯೂ ಇದೆ. ಅದು ಬರೆ ಹುಲ್ಲನ್ನು ತಿಂದು ಅದಕ್ಕೆ ಬದಲಾಗಿ ಆರೋಗ್ಯ ಮತ್ತು ಪಥ್ಯಕ್ಕಾಗಿ ಬೇಕಾಗುವ ಅಮೃತದಂತಹ ಹಾಲನ್ನು ಸೂರೆಗೊಡುವುದು" ಎಂದು ಉಪದೇಶಿಸಿರುವರು. ಆಯುರ್ವೇದವು ಅನ್ಯ ವೇದಗಳಂತೆ ಅಪೌರುಷೇಯವೆಂದು ಶಾಸ್ತ್ರಪ್ರತೀತಿ ಇದೆ. ಯಾವ ವಿದ್ಯೆಯಿಂದ ಸ್ವಸ್ಥರಿಗೆ ಸ್ವಾಸ್ಥ್ಯರಕ್ಷಣೆಯೂ ಆತುರರಿಗೆ ರೋಗ ಮುಕ್ತತೆಯೂ ದೊರಕುವುದೋ ಅದೇ ಆಯುರ್ವೇದವು. ಆಯುರ್ವೇದ ಚಿಕಿತ್ಸಾ ಪದ್ಧತಿಯು ಶಸ್ತ್ರಾದಿ ಚಿಕಿತ್ಸೆಯೆಂದೂ ಔಷಧ ಚಿಕಿತ್ಸೆಯೆಂದೂ ಎರಡು ಬಗೆಯಾಗಿದೆ. ಅದರಲ್ಲಿ ಶಸ್ತ್ರಾದಿ ಚಿಕಿತ್ಸೆಯು ಬೀಭತ್ಸ ರಾಜಕೀಯಾಶ್ರಯಾಭಾವ, ಕಾಲ ಮಾಹಾತ್ಮ್ಯಾದಿ ಕಾರಣಗಳಿಂದ ವೈದ್ಯ ಪಂಡಿತರಿಂದ ಉಪಯೋಗಿಸಲ್ಪಡುವುದಿಲ್ಲ. ತದ್ವಿಷಯಗಳನ್ನು ಕೂಲಂಕುಷವಾಗಿ ಬೋಧಿಸುವ ಶಲ್ಯ, ಶಾಲಾಕ್ಯ, ಸುಶ್ರುತಾದಿ ಆರ್ಷಗ್ರಂಥಗಳು ಮುದ್ರಿಸಲ್ಪಟ್ಟರೂ ತತ್ಪಠನ ಪಾಠನ ಅಭ್ಯಸನಾದಿ ಗುರುಶಿಷ್ಯ ಪರಂಪರೆಯು ಲೋಪವಾಗಿದೆ ಎಂದರೂ ಮಿಥ್ಯಾರೋಪವಾಗದು.

"ನಾತ್ಮಾರ್ಥಂ ನಾಪಿ ಕಾಮಾರ್ಥಂ ಅಥ ಭೂತದಯಾಂಪ್ರತಿ" ಎಂಬ ವೈದ್ಯ ಶಾಸ್ತ್ರ ನೀತಿಯಂತೆ ತ್ರಿಕಾಲಜ್ಞಾನಿಗಳಾದ ಮುನಿಪುಂಗವರು, ಪರಹಿತಪರರಾಗಿ ಔಷಧಿಗಳ ಗುಣ, ವೀರ್ಯ, ವಿಪಾಕ, ಪ್ರಭಾವಗಳಿಂದ ಗುರುತಿಸಿ ತತ್ತ್ವತ್ವವನ್ನು ನಿಶ್ಚೈಸಿದ ಪಿಯೂಷ ಸದೃಶಗಳಾದ ಧಾತು ಸಸ್ಯಾದಿ ಪದಾರ್ಥಗಳ ಪ್ರಸಿದ್ಧಯೋಗಗಳನ್ನು ಪರಾಂಬರಿಸದೆ ಕೆಲವೇ ಜನರು ಸ್ವಾನುಭವ ಯುಕ್ತಿಯುಕ್ತಗಳೆಂದು ಕಲ್ಪಿಸಿ ನಾನಾ ವಿಧದ ವಿಚಿತ್ರ ನಾಮಧೇಯಗಳಿಂದ ಆಚ್ಛಾದಿಸಿ, "ಯಸ್ಯ ಕಸ್ಯ ತರೋ-ರ್ಮೂಲಂ ಯೇನ ಕೇನಾಪಿ ಭಾವಿತಂ। ಯಸ್ಮೈ ಕಸ್ಮೈ ಪ್ರದಾತವ್ಯಂ ಯದ್ವಾ ತದ್ವಾ ಭವಿಷ್ಯತಿ" ಎಂದಂತೆ ಪ್ರಸ್ತುತ ಪ್ರಚಲಿತ ಆಯುರ್ವೇದ ಪದ್ಧತಿಗೆ ತುಂಬಾ ಹಾನಿ ಉಂಟಾಗಿದೆ.

ಆಯುರ್ವೇದ ವೈದ್ಯನಿಗೆ ತಾನು ಜನಿಸಿದ ಭೂಮಿಯಲ್ಲಿಯೇ ಬೇಕಾದ ಗಿಡ ಮೂಲಿಕೆ, ನಾರು, ಬೇರು, ಚೆಕ್ಕೆ, ಕಾಯಿ, ಹಣ್ಣು, ಚಿಗುರು, ಹೂ, ಸೊಪ್ಪುಗಳು ಉಪಯೋಗಕ್ಕೆ ಬೀಳುವಂತಾಗಲಿ. ವೈದ್ಯಕಲ್ಪಗಳ ಮೂಲಕ ಸ್ವರಸ, ಹಿಮ, ಕ್ವಾಥ, ಕಲ್ಕ, ಕಷಾಯ, ಚೂರ್ಣ, ಗುಟಿಕೆಗಳೇ ಮೊದಲಾದ ಸುಲಭದಿಂದ ಕಷ್ಟ, ಕಷ್ಟಸಾಧ್ಯವರೆಗಿನ, ಹಾಗೂ ಕಾಸಿನ ವ್ಯಯವಿಲ್ಲದೆ ಪ್ರಾರಂಭಿಸಿ ಬಹು ಬೆಲೆಯ ವರೆಗಿನ

ಮದ್ದುಗಳನ್ನು ಕೂಡಾ ಹಳ್ಳಿಹಳ್ಳಿ ಊರುಕೇರಿಗಳಿಗೆ ಒದಗಿಸಿ ಕೊಡುವಷ್ಟು ವಿದೇಶಿಯ ವೈದ್ಯದಿಂದಾಗಲಿ ವೈದ್ಯರಿಂದಾಗಲಿ ಸಾಧ್ಯವಿಲ್ಲ. ಯಾವ ಮನುಷ್ಯನು ಎಲ್ಲಿ ಹುಟ್ಟಿ ಬೆಳೆದು ಯಾವ ಆಹಾರ ವಿಹಾರಗಳಿಂದ ದೇಹಧಾರಣೆಯನ್ನು ಮಾಡಿ ಕೊಂಡು ಜೀವಿಸುತ್ತಾನೊ, ಆ ದೇಶಕಾಲಜ ವಿದ್ಯಮಾನಗಳಿಗನುಸರಿಸಿ ಆಯಾಯ ಊರಿನ ಮದ್ದು, ಹವೆ, ನೀರು, ಚಿಕಿತ್ಸಾಕ್ರಮಗಳೇ ಕ್ರಮದಂತಾಗಲಿ, ಬದಲಾವಣೆ ಯಿಂದಾಗಲಿ, ಅವರವರಿಗೆ ಮೇಲಾದದ್ದು ಮತ್ತು ದೇಶೀಯವಾದದ್ದು.

ನಮ್ಮ ಕುಲಸೊತ್ತಾದ ಅಷ್ಟಾಂಗ ಹೃದಯ, ಚರಕ, ಸುಶ್ರುತ ಸಂಹಿತಾದಿ ಗ್ರಂಥಗಳಲ್ಲಿ ಮಥಿಸಿ ಲಬ್ಧವಾದ ಸಹಸ್ರಯೋಗಾಮೃತಗಳಲ್ಲದೆ, ಮಲೆಯಾಳಿ ಭಾಷೆ ಯಿಂದ ವ್ಯಾಖ್ಯಾನಿಸಲ್ಪಟ್ಟ ಗ್ರಂಥಗಳಿಂದ ಭಾಷಾಂತರಿಸಲ್ಪಟ್ಟ ಬಹು ಕಲ್ಪಗಳುಳ್ಳ ಯೋಗ್ಯೌಷಧ ಯೋಗಗಳಿಂದ, ಈ ಸಹಸ್ರಯೋಗ ದರ್ಪಣವು ಪ್ರಕಾಶಿಸಲ್ಪಟ್ಟಿದೆ.

ಇದರಲ್ಲಿ, ಕಷಾಯ, ಘೃತ, ತೈಲ, ಚೂರ್ಣ, ಗುಟಿಕಾ, ಅವಲೇಹ, ಧಾರಾ, ತಕ್ರಧಾರ, ಮಾನ, ಪರಿಭಾಷಾ, ಪ್ರತ್ಯಾಷಧವಿಧಿ ಪ್ರಕರಣಗಳನ್ನೊಳಗೊಂಡು ಸರ್ವ ಜನ ಸೌಲಭ್ಯವಾಗುವಂತೆ ಮೂಲ ಸಂಸ್ಕೃತ ಶ್ಲೋಕಗಳನ್ನು ಕರ್ಣಾಟಕ ಭಾಷೆ ಯಿಂದ ರೂಪಾಂತರಗೊಳಿಸಿಯದೆ. ಮತ್ತು ಧಾರೆಯಿಂದಿರುವ ಗುಣ, ಧಾರಾಪಾತಿ ಇದಕ್ಕೆ ಬೇಕಾಗುವ ಮರಗಳು, ಪ್ರಮಾಣ, ಧಾರಾಪಾತ್ರದ ಸ್ವಭಾವ, ಪರಿಚಾರಕರ ಲಕ್ಷಣ, ಧಾರಾ ಮಾಡುವ ಕ್ರಮ, ರೋಗಿಯ ಅನುಸರಿಸತಕ್ಕ ಪಥ್ಯಾಪಥ್ಯ ವಿಚಾರ, ಅದಲ್ಲದೆ ನಮ್ಮ ಪ್ರತಿನಿತ್ಯದ ಭಕ್ಷಣ ಸಾಧನಗಳ ಮಿತ್ರ ಶತ್ರು ಭಾವಗಳಿಂದೊದಗುವ ಪರಸ್ಪರ ವೈಷಮ್ಯ ನಿವೃತ್ತಿಗಿರುವ ಪ್ರತ್ಯೌಷಧ ವಿಧಿಯನ್ನೂ ಮಾನಪರಿಭಾಷೆ ಗಳನ್ನೂ ವಿಷದೀಕರಿಸಿ ಉಲ್ಲೇಖಿಸಲ್ಪಟ್ಟಿವೆ.

ಈ ಗ್ರಂಥವು ವೈದ್ಯರಿಗೆ, ವೈದ್ಯವಿದ್ಯಾರ್ಥಿಗಳಿಗೆನ್ನದೆ ಸರ್ವಜನೋಪಕಾರಿ ಯಾಗಿ ಗೃಹವೈದ್ಯನಂತಿದ್ದು ಪರಾಶ್ರಯವಿಲ್ಲದೆ ತಮಗೊದಗಿದ ಕ್ಷುದ್ರ ವಿಪ ತ್ಪರಂಪರೆಗಳನ್ನೂ, ತನ್ಮೂಲಕ ಸಂಭವಿಸುವ ಅನಾವಶ್ಯಕವಾದ ದ್ರವ್ಯಹಾನಿಯನ್ನೂ ನೀಗಾಡಿಸಲನುಕೂಲವಾಗುವಂತೆ, "ಲಘುದೀಪಿಕಾ" ಎಂಬ ಕರ್ಣಾಟಕ ಟೀಕೆ ಯಿಂದಲೂ, ಅಲಂಕರಿಸಲ್ಪಟ್ಟಿದೆ.

ಇದರ ಮುದ್ರಣ ಸಂಶೋಧನಾದಿ ಕಾರ್ಯಗಳಲ್ಲಿ ಶ್ರಮ ವಹಿಸಿ ತಕ್ಕ ಕಾಲದಲ್ಲಿ ಒದಗಿಸಿ ಕೊಟ್ಟ ಮಂಗಳೂರು ಸಿಟಿಪ್ರೆಸ್ಸಿನ ಶ್ರೀಮಾನ್ ಉದ್ಯಾವರ ಕೇಶವಾಚಾರ್ಯ ರನ್ನು ನಾವು ಹೃತ್ಪೂರ್ವಕವಾಗಿ ವಂದಿಸುತ್ತೇವೆ.

ಇದರಲ್ಲಿರುವ ನ್ಯೂನಾತಿರೇಕಗಳನ್ನು ಕ್ಷಮಿಸಿ ತಕ್ಕ ಸಲಹೆಗಳನ್ನಿತ್ತು ಪ್ರೋತ್ಸಾಹಿಸಬೇಕಾಗಿ ಅಪೇಕ್ಷಿಸುವ,

ಎಂ. ಆರ್. ಭಟ್.
ಎಂ. ಎಂ. ಆಳ್ವ.

---

॥ धन्वन्तरये नमः ॥

# ॥ सहस्रयोगदर्पणम् ॥

लघुदीपिकाव्याख्यासमेतम्.

# ಸಹಸ್ರಯೋಗಃ

ಲಘುದೀಪಿಕಾ ವ್ಯಾಖ್ಯೆಯಿಂದ ಕೂಡಿದ ಸಹಸ್ರಯೋಗದರ್ಪಣವು.

---

॥ मंगलाचरणम् ॥

शंखं चक्रं जलूकं धृतममृतघटं चारुदोर्भिश्चतुर्भिः

सूक्ष्मस्वच्छातिहृद्यांशुकपरिविलसन्मौलिमम्भोजनेत्रम् ॥

एकं नित्यं विमलमचलं सर्वधीः साक्षिभूतं

वन्दे धन्वन्तरिं तं सकलगदवनप्रौढदावाग्निलीलम् ॥

## ಕಷಾಯಯೋಗಗಳು

घनचन्दनशुण्ठ्यम्बुपर्पटोशीरसाधितम् ।

शीतं तेभ्यो हितं तोयं पाचनं तृड्ज्वरापहम् ॥ १ ॥

ಭದ್ರಮುಷ್ಟಿ, ಚಂದನ, ಒಣಶುಂಠಿ, ಇರಿವೇರಿದಂಡು, ಪರ್ಪಟಕ, ಲಾಮಂಚ ಈ ಔಷಧಿಗಳ ಶೀತಕಷಾಯವು ಪಿತ್ತೋದ್ರೇಕವನ್ನೂ, ದಾಹ ಜ್ವರವನ್ನೂ ನಿವೃತ್ತಿಪಡಿಸಿ ಪಾಚನವನ್ನು ಉಂಟುಮಾಡುತ್ತದೆ.

तोयतोयदभूनिम्बपाठाधान्यमहौषधैः ।

कृतः कषायस्सर्वेषां ज्वराणां पाचनः परम् ॥ २ ॥

ಇರಿವೇರಿದಂಡು, ಭದ್ರಮುಷ್ಟಿ, ಪುತ್ತರಿಚ್ಚುಂಡಬೇರಿನ ತೊಗಟು, ಹಾಡೆಗಡ್ಡೆ, ಕೊತ್ತಂಬರಿಬೀಜ, ಒಣಶುಂಠಿ ಈ ಕಷಾಯವು ಎಲ್ಲಾ ಜ್ವರ ಗಳಿಗೂ ಪಾಚನವನ್ನುಂಟುಮಾಡುತ್ತದೆ.

पाठाग्निमन्थवृहतीद्वयनागराणाम् ।
छिन्नोद्भवामगधमूलकलिङ्गकानाम् ॥
वासामृताम्बुदपटोलमहौषधानाम् ।
क्वाथं पिबेदिह मरुत्प्रभवे ज्वरे तु ॥ ३ ॥

ಹಾಡೆಗಡ್ಡೆ, ನರ್ವೊಗಳುಬೇರು, ಸಣ್ಣಕುದನೆಬೇರು, ಕಂಟಕಾರಿ ಬೇರು, ಒಣಶುಂಠಿ (೧) ಅಮೃತಬಳ್ಳಿ, ಹಿಪ್ಪಲಿಮೂಲ, ಕೊಡಗಪಾಲರಿ (೨) ಆಡ್ಸೋಗೆಬೇರು, ಅಮೃತಬಳ್ಳಿ ಭದ್ರಮುಷ್ಟಿ, ಕಾಟುಪಟವಲಬಳ್ಳಿ, ಶುಂಠಿ (೩) ಈ ಮೂರು ಬಗೆಯ ಕಷಾಯಗಳು ವಾತಜ್ವರ ಶಮನ.

गोपाङ्गनाकमलचन्दनसेव्याविश्व ।
यष्टीजलोत्पलमधूकशतावरीभिः ॥
सिद्धं सुशीतमनुमाक्षिकशर्कराढ्यम् ।
पित्तज्वरं जयति दाहतृडाढ्यमम्बु ॥ ४ ॥

ನಾಮದಬೇರಿನಸಿಪ್ಪೆ, ತಾವರೆವಳಯು, ಚಂದನ, ಲಾಮಂಚ, ಒಣ ಶುಂಠಿ, ಜ್ಯೇಷ್ಠಮಧು, ಇರುವೇರಿದಂಡು, ನೆಲಸಂಪಿಗೆಗೆಡ್ಡೆ ಇಪ್ಪೆತಿರುಳು, ಶತಾವರಿಬೇರು, ಇದರ ಶೀತಳಕಷಾಯಕ್ಕೆ ಜೇನುತುಪ್ಪ, ಸಕ್ಕರೆ ಮೇಲ್ಪುಡಿ ಸೇರಿಸಿ ಸೇವಿಸಿದರೆ ಪಿತ್ತಜ್ವರ ಶಮನ.

पथ्याकटफलनागराम्बुदवाचाभूनिम्बधान्यद्रुमैः ।
भार्ङ्गीपर्पटकान्वितैः श्रुतमिदं तोयं सुशीतं पुनः ॥
मध्वाढ्यं परमाणुरामठयुतं श्लेष्मज्वरं नाशयेत् ।
कोष्ठार्तिश्वसनाग्निसादकसनारुच्यास्यशोषान्वितम् ॥ ५ ॥

ಅಣಿಲೆಕಾಯಿಸಿಪ್ಪೆ, ಕುಂಬುಳುಬೇರು, ಒಣಶುಂಠಿ, ಭದ್ರಮುಷ್ಟಿ, ಬಜೆ, ಪುತ್ತರಿಚ್ಚುಂಡಬೇರಿನಸಿಪ್ಪೆ, ಕೊತ್ತಂಬರಿಬೀಜ, ದೇವದಾರು ಕಿರು ತೇಗಿನಬೇರು, ಪರ್ಪಟ ಹುಲ್ಲು ಸೇರಿಸಿ ಕಷಾಯ ಮಾಡಿ ಜೇನು, ಹಿಂಗು

ಪುಡಿ ಮೇಲ್ಪುಡಿ ಸೇರಿಸಿ ಸೇವಿಸಿದರೆ ಕಫಜ್ವರ, ಆಮಾಶಯದ ನೋವು, ವಾಯು, ಅಗ್ನಿಮಾಂದ್ಯ, ಕೆಮ್ಮು, ಅರುಚಿ, ಮುಖಬೀಗು ಶಮನ.

द्राक्षामधूकमधुकलोध्रकाश्मर्यसारिवाः ।
मुस्तामलकह्रीबेरपद्मकेसरपद्मकम् ॥ ६ ॥
मृणालचन्दनोशीरनीलोत्पलपरूषकम् ।
फाण्टो हिमो वा द्राक्षादिर्जातीकुसुमवासितः ॥ ७ ॥
युक्तो मधुसितालाजैर्जयत्यनिलपित्तजम् ।
ज्वरं मदात्ययं छर्दिं मूर्छां दाहं श्रमं भ्रमम् ॥ ८ ॥
ऊर्ध्वगं रक्तपित्तं च पिपासां कामिलामपि ।

ದ್ರಾಕ್ಷೆ, ಇಪ್ಪೆತಿರುಳು, ಜ್ಯೇಷ್ಠಮಧು, ಪಾಚೋಟ ಕೆತ್ತೆ, ಕುಂಬುಡು ಮರದ ಬೇರು, ನಾಮದಬೇರಿನ ಸಿಪ್ಪೆ, ಭದ್ರಮುಷ್ಟಿ, ನೆಲ್ಲಿಕಾಯಿಸಿಪ್ಪೆ, ಇರಿವೇರಿದಂಡು, ತಾವರೆಕುಸುಮ, ಪದ್ಮಕಾಷ್ಟ, ತಾವರೆವಳಯ, ಚಂದನ, ಲಾಮಂಚ, ನೆಲಸಂಪಿಗೆ ಗೆಡ್ಡೆ, ಪರೂಷಕ ಇವುಗಳ ಕಷಾಯ ವನ್ನು ಜಾಜಿಮಲ್ಲಿಗೆಯ ಕುಸುಮದಿಂದ ಪರಿಮಳಿಸಿ, ಜೇನುತುಪ್ಪ, ಸಕ್ಕರೆ, ಹೊದಳು ಇವುಗಳನ್ನು ಮೇಲ್ಪುಡಿ ಸೇರಿಸಿಕೊಡುವುದರಿಂದ ವಾತಪಿತ್ತಜ್ವರ ಮದಾತ್ಯಯ, ವಾಂತಿಯಾಗೋಣ, ಸ್ಮೃತಿತಪ್ಪುವಿಕೆ, ದಾಹ, ಆಯಾಸ, ತಲೆತಿರುಗುವಿಕೆ, ಮೇಲ್ಭಾಗದಲ್ಲಿ ಉಂಟಾಗುವ ರಕ್ತಪಿತ್ತ, ಬಾಯಾರಿಕೆ ಯಾಗೋಣ, ಕಾಮಿಲಾರೋಗ ಇವು ಶಮನ.

नागरामृतहरीतकी क्रमान्नागहस्तनयनांघ्रि भागशः ॥ ९ ॥
साधुसिद्धमुदकं सशर्करं नाशयत्यखिलदोषजं ज्वरम् ॥

ಒಣಶುಂಠಿ, (ಇದು ೨ ಕೈಂಜಿ, ವ ಎರಡುತಾರ ತೂಕ) ಅಮೃತ ಬಳ್ಳಿ (ಇದು ೬ ಕೈಂಜಿ ತೂಕ) ಅಣಿಲೆಕಾಯಿ ಸಿಪ್ಪೆ (ಇದು ೪ ಕೈಂಜಿ ತೂಕ) ಇವುಗಳ ಕಷಾಯಕ್ಕೆ ಸಕ್ಕರೆ ಮೇಲ್ಪುಡಿ ಸೇರಿಸಿ, ತ್ರಿದೋಷ ಜ್ವರಕ್ಕೆ ಕೊಡುವುದು.

पत्रं वेणुभवं दळं च तुळसीजातं हरिक्रान्तिजम् ।
पत्रं वा सुनिषण्डजं बदरजं पत्रं च वाडंदलम् ॥
पत्रं चोत्तमकन्यकाख्यसुषवीनारङ्गपत्रं पृथक् ।
सर्वं नागरपादिकं प्रहरति प्राग्रूपशीतं ज्वरम् ॥ १० ॥

ಬಿದಿರಎಲೆ, ತುಳಸೀ ಎಲೆ, ವಿಷ್ಣುಕ್ರಾಂತಿ ಎಲೆ, ನೀರಾರಿ ಎಲೆ, ಬುಗರಿ ಎಲೆ, ಗೋಳಿವೊಗ್ಗೆ, ಸಹದೇವಿ ಎಲೆ, ಪುಲ್ಲಾನಿ ಎಲೆ, ನಾರಂಗ ಎಲೆ, ನಾಲ್ಕನೇ ಒಂದು ಅಂಶ ಒಣಶುಂಠಿ ಇವುಗಳ ಕಷಾಯವು ಶೀತಜ್ವರ ಶಮನ ಮಾಡುವುದು.

द्राकनागरभूनिम्बधान्यवासाकलिङ्गकैः ।
गजाह्वादशमूलाब्दैर्मृत्युकल्पं ज्वरं जयेत् ॥ ११ ॥

ದೇವದಾರು, ಒಣಶುಂಠಿ, ಪುತ್ತರಿಚ್ಚುಂಡಬೇರಿನಸಿಪ್ಪೆ, ಕೊತ್ತಂಬರಿ ಬೀಜ, ಆಡ್ಸೋಗೆಬೇರು, ಕೊಡಗಪಾಲಯರಿ, ಗಜಹಿಪ್ಪಲಿ, ಬಿಲ್ವಪತ್ರೆ ಬೇರು, ನವೋಗಳುಬೇರು, ಆನೆಮುಂಗುಬೇರು, ಕುಂಬುಡುಮರದ ಬೇರು, ಪಾದಿರಿಬೇರು ಇವುಗಳ ಬೇರಿನಸಿಪ್ಪೆ ತೆಗೆದು ಒಳಗಿನ ತಿರುಳು ತೆಗೆದುಕೊಳ್ಳುವುದು. ಓರೆಲೆಬೇರು, ಮೂರೆಲೆಬೇರು, ಸಣ್ಣಕುದನೆ ಬೇರು, ಕಂಟಕಾರಿಬೇರು, ನೆಗ್ಗಿನಮುಳ್ಳು, ಭದ್ರಮುಷ್ಟಿ ಇವುಗಳ ಕಷಾಯವು ಮೃತ್ಯುಸದೃಶವಾದ ಜ್ವರವನ್ನು ಶಮಿಸುವುದು.

महाबलामूलमहौषधानां क्वाथो निहन्याद्विषमज्वरं च ।
शीतं सुकम्पं परिदाहयुक्तं मारीचकं राघवसायको यथा ॥ १२ ॥

ಕಡಿರಬೇರು, ಒಣಶುಂಠಿ ಇವುಗಳ ಕಷಾಯವು ವಿಷಮಜ್ವರ, ನಡುಗಿಬರುವ ಜ್ವರ, ದಾಹಜ್ವರ ಶಮನ.

छिन्नोद्भवावृषकिरातकपर्पटानां ।
शुंब्ध्याबलाहकयवाषकयोः क्रमेण ॥

एकद्वयात्रितयभागकृतः कषायः ।
सम्मूर्च्छितं ज्वरमपोहति सान्निपातम् ॥ १३ ॥

ಅಮೃತಬಳ್ಳಿ, ಆಡ್ಸೋಗೆಬೇರು, ಪುತ್ತರಿಚ್ಚುಂಡಬೇರಿನ ಸಿಪ್ಪೆ, ಪರ್ಪಟ ಇವು ನಾಲ್ಕು ಬಗೆ (ಒಂದು ಕೈಂಜಿ ತೂಕ) ಒಣಶುಂಠಿ ಇದು (ಎರಡು ಕೈಂಜಿ) ಭದ್ರಮುಷ್ಟಿ, ಬಳ್ಳಿಉರುಸಣಿಗೆಬೇರು, (ಇವು ಮೂರು ಕೈಂಜಿ) ಕೆಲವರು ಪ್ರಥಮತಃ ಹೇಳಿದ 4 ಬಗೆಯೂ ಒಂದೂವರೆ ಕೈಂಜಿಯಂತೆಯೂ ಮತ್ತೆ ಹೇಳಿದ ಮೂರು ಬಗೆಯು 2 ಕೈಂಜಿಗಳಂತೆಯೂ ಸೇರಿಸುವರು. ಈ ಕಷಾಯವು ಸನ್ನಿಪಾತಜ್ವರಹರ.

केवलेनाजमोजेन कषायो विधिना श्रृतः ।
चातुर्थिकं ज्वरं हन्ति रोहिण्या समलङ्कृतः ॥ १४ ॥

ಅಯಮೋದಕ, (ಓಮುಕಾಳು) ಕಟುಕರೋಹಿಣಿ ಇವುಗಳ ಕಷಾಯವು ಚಾತುರ್ಥಿಕ ಜ್ವರ ಹರ.

मृद्वीकनागमधुकोत्पलसारिवाभि- ।
र्मुद्गेक्षुकाण्डहिमसारिववायुशीरैः ॥
यष्टीमधुप्रवरगोस्तनसारिवाभि- ।
स्तोयं श्रृतं जयति पित्तभवं ज्वरं हि ॥ १५ ॥

ದ್ರಾಕ್ಷೆ, ನಾಗಕೇಸರ, ಜ್ಯೇಷ್ಠಮಧು, ನೆಲಸಂಪಿಗೆ, ನಾಮದ ಬೇರಿನ ಸಿಪ್ಪೆ (೧) ಸಣ್ಣಹೆಸರುಬೇರು, ಕಬ್ಬಿನಬೇರು, ಚಂದನ, ನಾಮದ ಬೇರಿನ ಸಿಪ್ಪೆ, ಇರುವೇರಿದಂಡು, ಲಾಮಂಚ (೨) ಜ್ಯೇಷ್ಠಮಧು, ಜೇನು, ದ್ರಾಕ್ಷೆ, ನಾಮದಬೇರಿನ ಸಿಪ್ಪೆ (೩) ಈ ಮೂರು ಬಗೆಯ ಕಷಾಯವು ಪಿತ್ತಜ್ವರ ಶಮನ.

भार्ग्यब्दपर्पटकधन्वयवासविश्व ।
भूनिम्बकुष्टकणासिंह्यमृताकषायः ॥

जीर्णज्वरं सततसन्ततकाक्षिहन्त्या ।
द्न्येद्युष्कं सहतृतीय चतुर्थकाभ्याम् ॥ १६ ॥

ಕಿರುತೆಕ್ಕಿನ ಬೇರು, ಭದ್ರಮುಷ್ಟಿ, ಪರ್ಪಟಕ, ಬಳ್ಳಿಉರುಸಣಿಗೆ ಬೇರು, ಒಣಶುಂಠಿ, ಪುತ್ತುರಿಚ್ಚುಂಡಬೇರಿನ ಮೇಲಿನ ಸಿಪ್ಪೆ, ಕಂಕುಷ್ಟ, ಹಿಪ್ಪಲಿ, ಸಣ್ಣ ಕುದನೆ ಬೇರು, ಅಮೃತಬಳ್ಳಿ ಈ ಕಷಾಯವು ಸತತಸಂತತ ಅನ್ಯೇದ್ಯುಕ, ತೃತೀಯಕ, ಚಾತುರ್ಥಿಕ ಈ ಜ್ವರಗಳನ್ನೆಲ್ಲಾ ಹರಣ ಮಾಡುವುದು.

शतावरीगोपकन्याचन्दनोशीरवालकैः ।
सतण्डुलीयकद्राक्षासमंगोत्पलयष्टिभिः ॥ १७ ॥
साधितः साधयत्याशु निर्यूहः ससितामधु ।
ऊर्ध्वगं रक्तपित्तं चोभयायनमेव वा ॥ १८ ॥
तथा प्रदरमुन्मादं सदाहं विषमं ज्वरम् ।

ಶತಾವರಿಬೇರು, ನಾಮುದಬೇರಿನಸಿಪ್ಪೆ, ಚಂದನ, ಲಾಮಂಚ, ಇರುವೇರಿದಂಡು, ಸಣ್ಣಅರಿವೆ, ದ್ರಾಕ್ಷೆ, ಪರಚ್ಚುಂಡಬೇರು, ನೆಲಸಂಪಿಗೆ ಗಡ್ಡೆ, ಜ್ಯೇಷ್ಠಮಧು ಇವುಗಳ ಕಷಾಯವು ಊರ್ಧ್ವಗ ರಕ್ತಪಿತ್ತ, ಅಧೋ ರಕ್ತಪಿತ್ತ, ಪ್ರದರ, ಉನ್ಮಾದ, ದಾಹವುಳ್ಳ ವಿಷಮಜ್ವರ ಶಮನ.

वटशृङ्गाटरूषाभ्यां पाक्यं क्षीरयुतं तथा ॥ १९ ॥

ಗೋಳಿಮೊಗ್ಗೆ, ಆಡ್ಸೋಗೆಬೇರು ಇವುಗಳ ಹಾಲು ಕಷಾಯವು ಮುಂಚೆ ಹೇಳಿದ ರೋಗಗಳಿಗೆ ಫಲದಾಯಕವು.

चन्दनोशीरजलदलाजमुद्गकणायवैः ।
बलाजले पर्युषितैः कषायो रक्तपित्तहा ॥ २० ॥

ಚಂದನ, ಲಾಮಂಚ, ಭದ್ರಮುಷ್ಟಿ, ಹೊದಳು, ಸಣ್ಣಹೆಸರು, ಹಿಪ್ಪಲಿ, ಯವಧಾನ್ಯ ಇವುಗಳನ್ನು ಜಜ್ಜಿ ಕಡಿರಬೇರಿನ ಕಷಾಯದಲ್ಲಿಟ್ಟು ಮರುದಿನ ಪ್ರಾತಃಕಾಲ ಸೇವಿಸುವುದು. ರಕ್ತಪಿತ್ತಹರ.

खदिरशीतबलासनासारिबा
वृषजपाम्बुद्मोदकवल्कलैः ॥
जयति सामलकैः श्रतमम्बु यत्
प्रदरमाशु सितामधुसंयुतं ॥ २१ ॥

ಕಾಚಿತಿರುಳು, ಚಂದನ, ಕಡಿರಬೇರು, ಬೇಂಗತಿರುಳು, ನಾಮದ ಬೇರಿನ ಸಿಪ್ಪೆ, ಆಡ್ಸೋಗೆ ಬೇರು, ಬಿಳಿ ದಾಸಾನುಬೇರು, ಭದ್ರಮುಷ್ಟಿ, ಕಂಗಿಗಾರ ಕೆತ್ತೆ, ನೆಲ್ಲಿಕಾಯಿ ಸಿಪ್ಪೆ. ಇವುಗಳ ಕಷಾಯಕ್ಕೆ ಜೇನುತುಪ್ಪ, ಸಕ್ಕರೆ, ಮೋಲ್ಪುಡಿ ಸೇರಿಸಿ ಸೇವಿಸಲು ಪ್ರದರರೋಗ ಶಮನ.

अमृतोशीरवासाब्दविश्वभूनिम्बवाळकैः ।
सपर्पटकधान्याकधन्वयासैर्विपाचितं ॥ २२ ॥

ಅಮೃತಬಳ್ಳಿ, ಲಾಮಂಚ, ಆಡ್ಸೋಗೆಬೇರು, ಭದ್ರಮುಷ್ಟಿ, ಪುತ್ತರಿಚ್ಚುಂಡ ಬೇರಿನ ಸಿಪ್ಪೆ, ಇರುವೇರಿ ದಂಡು, ಪರ್ಪಟಕ, ಕೊತ್ತಂಬರಿ, ಬಳ್ಳಿಉರುಸಣಿಗೆ ಬೇರು, ಎಲ್ಲಾ ಜ್ವರಗಳಿಗೂ ಪಾಚನವು. ಆದ್ದರಿಂದ ಪಾಚನಾಮೃತವೆನ್ನಲ್ಪಡುವುದು.

भार्ङ्गी पुष्करमूलं च पथ्यापर्पटतोयदं ।
नागरं दशमूलं च पिप्पलीं चाप्सुसाधयेत् ॥ १३ ॥
सन्निपातज्वरं हन्ति विषमं शीतिकांस्तथा ।
कासश्वासाग्नि सदनहृत्पार्श्वार्ति शिरोग्रहं ॥ २४ ॥
जीर्णज्वरं सश्वयथुं सन्ततादींश्च नाशयेत् ॥

ಕಿರುತೆಕ್ಕಿನ ಬೇರು, ಪುಷ್ಕರಮೂಲ, ಅಣಿಲೆಕಾಯಿ ಸಿಪ್ಪೆ, ಪರ್ಪಟಕ, ಭದ್ರಮುಷ್ಟಿ, ಒಣಶುಂಠಿ, ದಶಮೂಲಗಳು, ಹಿಪ್ಪಲಿ, ಇವುಗಳ ಕಷಾಯವು ಸನ್ನಿಪಾತಜ್ವರ, ವಿಷಮ ಜ್ವರ, ಶೀತ ಜ್ವರ, ಕೆಮ್ಮು, ಉಬ್ಬಸ, ಅಗ್ನಿ ಮಾಂದ್ಯ, ಪಾರ್ಶ್ವನೋವು, ತಲೆನೋವು, ಶೋಫವುಳ್ಳ ಜ್ವರ, ಜೀರ್ಣಜ್ವರ, ಸಂತತಾದಿ ಜ್ವರಗಳೂ ಶಮನ.

अरलातिविषामुस्ता शुण्ठी बिल्वं सदाडिमं ।
सर्वज्वरहरोयोगः सर्वातीसारनाशन ॥ २५ ॥

ಪೆರುಮರ ಕೆತ್ತೆ, ಅತಿವಿಡಯಂ, ಭದ್ರಮುಷ್ಟಿ, ಒಣಶುಂಠಿ, ಬಿಲ್ವಪತ್ರೆ ಬೇರು, ದಾಳಿಂಬ ಸಿಪ್ಪೆ ಇವುಗಳ ಕಷಾಯವು ಜ್ವರವೂ, ಅತಿಸಾರವೂ ಶಮನ.

पाठागुडूचीघनपर्पटाम्बुभूनिम्बबिल्वेन्द्रयवैः श्रुताम्भः ।
पेयं ज्वरार्तैरतिसारिभिश्च यथामृतं स्वार्गिभिरादरेण ॥ २६ ॥

ಹಾಡೆಗೆಡ್ಡೆ, ಅಮೃತ ಬಳ್ಳಿ, ಭದ್ರಮುಷ್ಟಿ, ಪರ್ಪಟಕ, ಇರುವೇರಿ ದಂಡು. ಪುತ್ತುರಿಚ್ಛಂಡ ಬೇರಿನ ಸಿಪ್ಪೆ, ಬಿಲ್ವಪತ್ರೆ ಬೇರು, ಕೊಡಸಿನ ಬೀಜ, ಈ ಕಷಾಯವು ಜ್ವರವನ್ನೂ, ಅತಿಸಾರವನ್ನೂ ಶಮನ ಮಾಡುವುದು.

व्याघ्रीशुण्ठ्यमृताक्वाथः पिप्पलीचूर्णसंयुतः ।
वातश्लेष्मज्वरश्वासकासपीनसशूलजित् ॥ २७ ॥

ಸಣ್ಣ ಕುದನೆ ಬೇರು, ಒಣಶುಂಠಿ. ಅಮೃತ ಬಳ್ಳಿ ಇವುಗಳ ಕಷಾಯವು ಪಿಪ್ಪಲಿ ಚೂರ್ಣ ಮೇಲ್ಪುಡಿ ಸೇರಿಸಿ ವಾತಜ್ವರ, ಕಫಜ್ವರ, ಉಬ್ಬಸ, ಕೆಮ್ಮು, ಪೀನಸ, ಶೂಲ, ಇವುಗಳಿಗೆ ಕೊಟ್ಟರೆ ಶಮನ.

छिन्नोद्भवाम्बुधरधन्वयवासविश्वैः दुस्पर्शपर्पटकमेघकिराततिक्तैः ।
मुस्ताटरूषकमहौषधधन्वयासैः क्वाथान् पिबेदनिलपित्तकफज्वरेषु ॥ २८ ॥

ಅಮೃತ ಬಳ್ಳಿ, ಭದ್ರಮುಷ್ಟಿ, ಬಳ್ಳಿ ಉರುಸಣಿಗೆ ಬೇರು, ಒಣಶುಂಠಿ (೧) ಬಳ್ಳಿ ಉರುಸಣಿಗೆ ಬೇರು, ಪರ್ಪಟಕ, ಭದ್ರಮುಷ್ಟಿ, ಕಿರಾತ ಕಡ್ಡಿ, (೨) ಭದ್ರಮುಷ್ಟಿ, ಆಡುಸೋಗೆ ಬೇರು, ಒಣಶುಂಠಿ, ಬಳ್ಳಿ ಉರುಸಣಿಗೆ ಬೇರು, (೩) ಇವು ಮೂರು ಬಗೆಯ ಕಷಾಯಗಳು ಕ್ರಮವಾಗಿ ವಾತ, ಪಿತ್ತ, ಕಫ, ಜ್ವರಗಳಿಗೆ ಶಮನ.

 3563 LB N 37

श्वदंष्ट्राम्बुदभूनिम्बबलानागरपर्पटैः ।
क्वाथं प्रशमयेत्पीतं वातपित्तकृतं ज्वरं ॥ २९ ॥

ನ್ಯಾಸೊಣಗುಬೇರು, ಭದ್ರಮುಷ್ಟಿ, ಪುತ್ತರಿಚ್ಚುಂಡಬೇರು, ಕಡಿರಬೇರು, ಒಣಶುಂಠಿ, ಪರ್ಪಟಕ ಇವುಗಳ ಕಷಾಯುವು ವಾತ ಪಿತ್ತ ಜ್ವರ ಹರ.

पर्पटकाब्दसुरद्रुमभार्ङ्गीमागधिकौषधधन्वयवासैः
क्वाथमिदं विनिहन्ति नराणां वातकफज्वरजं परितापं ॥ ३० ॥

ಪರ್ಪಟಕ, ಭದ್ರಮುಷ್ಟಿ, ದೇವದಾರು, ಕಿರುತೇಗುಬೇರು, ಪಿಪ್ಪಲಿ, ಒಣಶುಂಠಿ, ಬಳ್ಳಿಉರಸಣಿಗೆಬೇರು ಇವುಗಳ ಕಷಾಯುವು ವಾತ ಕಫ ಜ್ವರ ಹರ.

कटुकाविजयाद्राक्षामुस्तापर्पटकौषधैः ॥
कषायो नाशयेत्पीतः कफपित्तभवं ज्वरम् ॥ ३१ ॥

ಕಟುಕರೋಹಿಣೀ, ಅಣಿಲೆಕಾಯಿ ಸಿಪ್ಪೆ, ದ್ರಾಕ್ಷೆ, ಭದ್ರಮುಷ್ಟಿ, ಪರ್ಪಟಕ, ಒಣಶುಂಠಿ ಇವುಗಳ ಕಷಾಯುವು ಕಫ ಪಿತ್ತ ಜ್ವರ ಶಮನ.

लकुचदलबिल्वलशुनैर्नारङ्गशलाटुपल्लवाभ्यां ॥
क्काथौ जयतः पीतौ कफाढ्यां शीतिकां त्रिदिनात् ॥ ३२ ॥

ಅಯುನಿ ಪ್ಲಾವಿಲಯೆಲೆ, ಬಿಲ್ವಪತ್ರೆ ಬೇರು, ಬೆಳ್ಳುಳ್ಳಿ (೧) ನಾರಂಗ ಚಿಗುರೂ, ಎಲೆಯೂ, (೨) ಇವುಗಳ ಕಷಾಯುವು ಶೀತಜ್ವರ ಶಮನ.

विष्णुक्रान्त्यमृतामुस्ताचन्दनोशीरसारिवाः ॥
सहदेवीकणासिद्धः कषायश्शीतिकापहः ॥ ३३ ॥

ವಿಷ್ಣುಕ್ರಾಂತಿ, ಅಮೃತ ಬಳ್ಳಿ, ಭದ್ರಮುಷ್ಟಿ, ಚಂದನ, ಲಾಮಂಚ, ನನ್ನಾರಿ ಬೇರಿನ ಸಿಪ್ಪೆ, ಸಹದೇವಿ, ಹಿಪ್ಪಲಿ ಇವುಗಳ ಕಷಾಯುವು ಶೀತ ಜ್ವರ ಹರ.

अरण्यतुलसीमूलं विष्णुक्रान्तिमहौषधैः ॥
क्काथोऽयं निर्हरेच्छीघ्रं शीतिकां विषमज्वरं ॥ २४ ॥

ಕಾಡುತುಳಸಿಯಬೇರು, ವಿಷ್ಣುಕ್ರಾಂತಿ, ಒಣಶುಂಠಿ ಇವುಗಳ ಕಷಾಯವು ಶೀತ ಮತ್ತು ವಿಷಮಜ್ವರ ಹರ.

मुस्तामृतामधुकचन्दनसेव्यविश्व
माषाग्निमन्थकणमुद्गकुलत्थचित्रैः ॥
सिद्धाम्बुमाक्षिकयुतं पिबतां वधूनां
नश्यत्यसृग्दरगदाः सहसैव लोके ॥ २५ ॥

ಭದ್ರಮುಷ್ಟಿ, ಅಮೃತಬಳ್ಳಿ, ಜ್ಯೇಷ್ಟಮಧು, ಚಂದನ, ಲಾಮಂಚ, ಒಣಶುಂಠಿ, ಉದ್ದು, ನರುವಲಬೇರು, ಹಿಪ್ಪಿಲಿ, ಸಣ್ಣಹೆಸರುಬೇರು, ಹುರುಳಿ, ಸಣ್ಣಹರಳುಬೇರು, ಇವುಗಳ ಕಷಾಯಕ್ಕೆ ಜೇನು ಮೇಲ್ಪುಡಿ ಸೇರಿಸಿ ಸೇವಿಸಲು, ಅಸೃಗ್ದರ ರಕ್ತಸ್ರಾವ ಶಮನ.

मुसलीखदिरामलकत्रिकण्टुजम्बूवरीक्वाथः ।
सास्थिस्रावं प्रदरं प्रमाष्टी मधुमान् प्रगे पीतः ॥ २६ ॥

ನೆಲತಾಳಿ ಗಡ್ಡೆ, ಕಾಚುತಿರುಳು, ನೆಲ್ಲಿಕಾಯಿ ಸಿಪ್ಪೆ, ನೆಗ್ಗಿನ ಮುಳ್ಳು, ನೇರಳೆಕೆತ್ತೆ, ಶತಾವರಿಬೇರು, ಇವುಗಳ ಕಷಾಯವು ಅಸ್ಥಿಸ್ರಾವ, ಅಸೃಗ್ದರ ಶಮನ.

दशमूलकटुत्रयैः कषायः सवृषैरेषसमाक्षिकः प्रपीतः ।
श्वसनानिलकासपार्श्वपृष्ठत्रिकमूर्धा सरुजासु सम्प्रदिष्टः ॥ २७ ॥

ದಶಮೂಲಂಗಳು, ಕರಿಮೆಣಸು, ಹಿಪ್ಪಿಲಿ, ಶುಂಠಿ, ಆಡ್ಸೋಗೆ ಬೇರು ಇವುಗಳ ಕಷಾಯಕ್ಕೆ ಜೇನುತುಪ್ಪ ಸೇರಿಸಿ ಸೇವಿಸಲು, ಶ್ವಾಸ ರೋಧ, ವಾತ, ಕೆಮ್ಮು, ಪಾರ್ಶ್ವ ನೋವು, ಬೆನ್ನುನೋವು, ತಲೆನೋವು ಇವು ಶಮನವಾಗುವುವು.

बलाजीरकविश्वाब्दवृषबिल्वसुरद्रुमैः ॥
गृहेक्षुलाजसहितैर्निष्क्वाथः श्वासकासहा ॥ ३८ ॥

ಕಡಿರಬೇರು, ಜೀರಿಗೆ, ಒಣಶುಂಠಿ, ಭದ್ರಮುಷ್ಠಿ, ಆಡ್ಸೋಗೆ ಬೇರು, ಬಿಲ್ವಪತ್ರೆಬೇರು, ದೇವದಾರು, ಮೂರೆಲೆಬೇರು, ಕಬ್ಬು, ಹೊದಳು ಇವುಗಳ ಕಷಾಯವು ಶ್ವಾಸರೋಗ, ಕೆಮ್ಮು ಶಮನ.

कासमर्दकवार्ताकवृषबिल्वैश्च तद्गुणः ॥

ಪೊನ್ನಾವೀರಬೇರು, ತರ್ಕಾರಿಬೇರು (ಸಣ್ಣಕುದನೆಬೇರು, ಕಂಟಕಾರಿ ಬೇರು), ಪಕ್ಷಾಂತರ, ಆಡ್ಸೋಗೆ ಬೇರು, ಬಿಲ್ವಪತ್ರೆ ಬೇರು, ಇವುಗಳ ಕಷಾಯದಿಂದ ಹಿಂದೆ ಹೇಳಿದ ಗುಣಗಳೆಲ್ಲಾ ಫಲಿಸುವದು.

भार्ङ्गीकणाकासहरीहरिद्रा ।
वासामृतानागरधान्यकानाम् ॥
क्वाथो जयेच्छ्वासमति प्रवृद्धम् ॥
क्षणेन तीक्ष्णेत्थपरागमिश्रः ॥ ३९ ॥

ಸಣ್ಣ ತೆಕ್ಕಿನಬೇರು, ಹಿಪ್ಪಲಿ, ಪೊನ್ನಾವೀರ ಬೇರು, ಮರದರಸಿನ ಸಿಪ್ಪೆ, ಆಡ್ಸೋಗೆ ಬೇರು, ಅಮೃತ ಬಳ್ಳಿ, ಒಣಶುಂಠಿ, ಕೊತ್ತಂಬರಿ ಇವುಗಳ ಕಷಾಯಕ್ಕೆ ಕರಿಮೆಣಸುಪುಡಿ ಸೇರಿಸಿ ಶ್ವಾಸರೋಗಕ್ಕೆ ಉಪಯೋಗಿಸುವದು.

विदारिपञ्चाङ्गलवृश्चिकाली ।
वृश्चीवदेवाह्वयशूर्पपर्ण्यः ॥
कण्डूकरी जीवनह्रस्वसंज्ञे ।
द्वे पञ्चके गोपसुता त्रिपादी ॥ ४० ॥
विदार्यादिरयं हृद्यो बृंहणो वातपित्तहा ।
शोषगुल्माङ्गमर्दोर्ध्वश्वासकासहरो गणः ॥ ४१ ॥

ನೆಲಕುಂಬಳಗಡ್ಡೆ, ಸಣ್ಣಹರಳುಬೇರು, ತೇಲ್ಗಡೆಬೇರು, ಪುನರ್ನವೆ ಬೇರು, ದೇವದಾರು, ಕಾಟುದ್ಸು ಬೇರು, ಕಾಡುಹೆಸರು ಬೇರು, ನಾಯಿ ಸೋಣಗಿನ ಬೇರು, ಜೀವನಪಂಚಮೂಲವೂ, ಹ್ರಸ್ವಪಂಚಮೂಲವೂ (ತೊಂಡೆ ಬೇರು, ಶತಾವರಿ ಬೇರು, ಬುಗುಡಿ ಹೂವಿನ ಗಡ್ಡೆ, ನೆಲತಾಳಿ ಗಡ್ಡೆ, ವಿದಾರಿ ಗಡ್ಡೆ, ಜೀವನ ಪಂಚಮೂಲ), (ಓರಲೆ ಬೇರು, ಮೂರೆಲೆ, ಸಣ್ಣ ಕುದನೆ ಬೇರು, ಕಂಟಕಾರಿ ಬೇರು, ನೆಗ್ಗಿನಮುಳ್ಳು, ಹ್ರಸ್ವಪಂಚ ಮೂಲ), ನಾಮದ ಬೇರಿನ ಸಿಪ್ಪೆ, ನೆಲಪ್ಪರಂಡೆ ಬೇರು ಇವುಗಳ ಕಷಾ ಯವು ವಾತರೋಗ, ಪಿತ್ತರೋಗ, ವಾತಪಿತ್ತರೋಗ, ಶೋಫ, ಗುಲ್ಮ ರೋಗ, ಅಂಗಮರ್ದ, ಶ್ವಾಸರೋಗ, ಕೆಮ್ಮು, ಇವುಗಳಿಗೆ ಹಿತ, ಹೃದ್ಯ ಬೃಂಹಣ ಮತ್ತು ಶರೀರ ಪುಷ್ಟಿಕರ.

**अग्निमन्थबलैरण्डभार्ङ्गीकुष्ठमहौषधैः**
**पिबेत् प्रक्वथितं तोयं हिध्मारुक् श्वासकासवान् ॥ ४२ ॥**

ನರ್ವೊಳು ಬೇರು, ಕಡಿರಬೇರು, ಕಿರುತೇಗು ಬೇರು, ಸಣ್ಣ ಹರಳು, ಬೇರು, ಕಂಕುಷ್ಠ, ಒಣಶುಂಠಿ ಇವುಗಳ ಕಷಾಯವು ಹಿಕ್ಕಾ ರೋಗ, ಶ್ವಾಸರೋಗ, ಕೆಮ್ಮು ಇವುಗಳನ್ನು ಹೋಗಲಾಡಿಸುವುದು.

**दशमूलविश्वलशुनैः क्वाथं च क्षीरसंयुतम् ॥**

ದಶಮೂಲ, ಒಣಶುಂಠಿ, ಬೆಳ್ಳುಳ್ಳಿ, ಇವುಗಳ ಹಾಲು ಕಷಾಯವು ಹಿಂದೆ ಹೇಳಿದ ರೋಗಗಳಿಗೆ ಹಿತಕರವು.

**आवीरवचाभार्ङ्गीयष्टीधनपाचितेन तोयेन ॥ ४३ ॥**
**पाल्कर्मीयक्ष्माविहितां हिक्कामचिरेण जयति तीव्रतराम् ॥**

ಆವೀರಕ್ಕುರು, ಬಜೆ, ಕಿರುತೇಗು ಬೇರು, ಜ್ಯೇಷ್ಠಮಧು, ಭದ್ರ ಮುಷ್ಟಿ, ಇವುಗಳ ಕಷಾಯವು ರಾಜಯಕ್ಷ್ಮ ರೋಗದಿಂದುಂಟಾದ ಹಿಕ್ಕಾ ರೋಗಗಳಿಗೆ ಹಿತಕಾರಿಯು.

पुनर्नवाबलाचव्यस्थिरापिप्पलिगोक्षुरैः ॥ ॥ ४४ ॥
जीवन्त्या च श्रतं तोयं पुष्टिकृत् क्षयनाशनम् ॥

ಪುನರ್ನವೆ ಬೇರು, ಕಡಿರ ಬೇರು, ಕಾಡು ಹಿಪ್ಪಲಿ ಬೇರು, ಓರೆಲೆ ಬೇರು, ಪಿಪ್ಪಲಿ, ನೆಗ್ಗಿನ ಮುಳ್ಳು, ಬುಗುಡಿ ಹೂವಿನ ಗಡ್ಡೆ ಇವುಗಳ ಕ್ವಾಥವು ಕ್ಷಯುವನ್ನು ನಿವೃತ್ತಿ ಪಡಿಸಿ ಪುಷ್ಟಿಯನ್ನುಂಟುಮಾಡುವುದು.

अमृतादृशमूलदारुभार्गी
वृषवृश्चीवपयोदधन्वयाषैः
सबलाचिरिबिल्वपञ्चकोलैः
मधुना हन्ति नृपामयं कषायः ॥ ४५ ॥

ಅಮೃತ ಬಳ್ಳಿ, ದಶಮೂಲಂಗಳು, ದೇವದಾರು, ಕಿರುತೇಗು ಬೇರು, ಆಡ್ಸೋಗೆ ಬೇರು, ಪುನರ್ನವೆ ಬೇರು, ಭದ್ರಮುಷ್ಟಿ, ಬಳ್ಳಿ ಉರುಸಣಿಗೆ ಬೇರು, ಕಡಿರಬೇರು, ಚಿರಬಿಲ್ವ ಬೇರು, ಪಂಚಕೋಲಂಗಳು, (ಒಣಶುಂಠಿ, ಹಿಪ್ಪಲಿ, ಕಾಡು ಹಿಪ್ಪಲಿ ಬೇರು, ಕಾಡು ಮೆಣಸಿನ ಬೇರು, ಚಿತ್ರಮೂಲ) ಇವುಗಳ ಕಷಾಯಕ್ಕೆ ಜೇನುತುಪ್ಪ, ಮೇಲ್ಪುಡಿ ಸೇರಿಸಿ ಸೇವಿಸಲು ರಾಜ ಯಕ್ಷ್ಮ ರೋಗ ಶಮನ.

एलाकणामधुकनागरकाब्दवासा
निम्बामृताम्बुदशमूलशृतः कषायः
लाक्षासितामधुकजीरकसम्प्रयुक्तो
यक्ष्माणमाशु विनिहन्ति मधुप्रगाढः ॥ ४६ ॥

ಏಲಕ್ಕಿ, ಹಿಪ್ಪಲಿ, ಜೇಷ್ಠಮಧು, ಒಣಶುಂಠಿ, ಭದ್ರಮುಷ್ಟಿ, ಆಡ್ಸೋಗೆ ಬೇರು, ಬೇವಿನ ಕೆತ್ತೆ, ಅಮೃತ ಬಳ್ಳಿ, ಇರುವೇರಿ ದಂಡು, ದಶ ಮೂಲಂಗಳು ಇವುಗಳ ಕಷಾಯಕ್ಕೆ ಕೋಲರಗು, ಜ್ಯೇಷ್ಠಮಧು, ಜೀರಿಗೆ, ಸಕ್ಕರೆ, ಜೇನುತುಪ್ಪ ಇವುಗಳ ಚೂರ್ಣ ಸೇರಿಸಿ ಸೇವಿಸಲು ರಾಜಯಕ್ಷ್ಮ ರೋಗವು ಉಪಶಮನ ಹೊಂದುತ್ತದೆ.

शुण्ठीरास्नाकणाजोंगवासाक्वाथो घृतान्वितः
सकणं दशमूलं वा स्वरभेदेऽनिलोत्थिते ॥ ४७ ॥

ಒಣಶುಂಠಿ, ಕೆಂಪರತ್ತೆ, ಹಿಪ್ಪಲಿ, ಅಗಿಲುಗಂಧ, ಆಡ್ಸೋಗೆ ಬೇರು ಇವುಗಳ ಕಷಾಯಕ್ಕೆ ತುಪ್ಪ ಮೇಲ್ಪುಡಿ (೧) ಹಿಪ್ಪಲಿ, ದಶಮೂಲಂಗಳು ಈ ಎರಡು ವಿಧದ ಕಷಾಯಗಳು ವಾತೋಲ್ಬಣ ಸ್ವರ ಭೇದಕ್ಕೆ ಹಿತವು.

त्रिजातत्रिकटुव्याघ्रीभार्गी क्वाथो मधूत्कटः ।
कफजारुचिहृल्लासप्रसेकस्वरभेदनुत् ॥ ४८ ॥

ಏಲಕ್ಕಿ, ಲವಂಗಚೆಕ್ಕೆ, ತಮಾಲ ಪತ್ರೆ, ಕರಿಮೆಣಸು, ಹಿಪ್ಪಲಿ, ಶುಂಠಿ, ಸಣ್ಣ ಕುದನೆ ಬೇರು, ಕಿರುತೇಗು ಬೇರು, ಇವುಗಳ ಕಷಾಯಕ್ಕೆ ಜೇನು ಮೇಲ್ಪುಡಿ ಸೇರಿಸಿ ನೇವಿಸಲು ಕಫಾಧಿಕ್ಯದಿಂದುಂಟಾದ ಅರುಚಿ, ಬಾಯಿಯಲ್ಲಿ ನೀರು ಹೆಚ್ಚಾಗೋಣ, ಪ್ರಸೇಕ ಸ್ವರಭೇದ, ಇವುಗಳನ್ನು ಹೋಗಲಾಡಿಸುವುದು.

द्राक्षाकृष्णावृषैरम्बुपित्तजस्वरसादनुत् ॥

ದ್ರಾಕ್ಷೆ, ಹಿಪ್ಪಲಿ, ಆಡ್ಸೋಗೆ, ಇರುವೇರಿ ದಂಡು ಇವುಗಳ ಕಷಾಯವು ಪಿತ್ತೋಲ್ಬಣ, ಸ್ವರ ಭೇದಕ್ಕೆ ಹಿತಕಾರಿಯು.

आम्रपल्लवतद्वृन्तबिल्वकाजार्द्रकेक्षुभिः
केसरैर्मातुलुंगस्य युक्तः क्वाथोऽरुचिं हरेत् ॥ ४९ ॥

ಮಾವಿನ ಚಿಗುರು, ಅದರ ದಂಡು, ಬಿಲ್ವಪತ್ರೆ ಬೇರು, ಹೊದಳು, ಹಸಿಶುಂಠಿ, ಕಬ್ಬು, ಮಾದಳನಾರಂಗದ ಕೇಸರ ಇವುಗಳ ಕಷಾಯವು ಅರುಚಿಯನ್ನು ಹೋಗಲಾಡಿಸುವದು.

विश्वाब्दलाक्षातिबलाबलाक्वाथः समाक्षिकः
रास्नाकणाचूर्णयुक्तो भक्तरोधनिरोधकः ॥ ५० ॥

ಒಣಶುಂಠಿ, ಭದ್ರಮುಷ್ಟಿ, ಕೋಲರಗು, ದೊಡ್ಡ ಕಡಿರಬೇರು, ಕಡಿರ ಬೇರು ಇವುಗಳ ಕಷಾಯಕ್ಕೆ ಕೆಂಪರತ್ತೆ, ಹಿಪ್ಪಿಲಿ ಇವು ಚೂರ್ಣಿಸಿ, ಮೇಲ್ಪುಡಿ ಸೇರಿಸಿ ಸೇವಿಸಿದರೆ ಅನ್ನ ಮೆಚ್ಚದಿರುವಿಕೆಯು ನಿವೃತ್ತಿ ಯಾಗುವುದು.

**बलाशतावरीद्राक्षाबिल्वमूलत्रिकण्टकैः**
**सदाडिमं कृतं तोयं भक्तद्वेषनिवारणम् ॥ ५१ ॥**

ಕಡಿರ ಬೇರು, ಶತಾವರಿ ಬೇರು, ದ್ರಾಕ್ಷೆ, ಬಿಲ್ವಪತ್ರೆ ಬೇರು, ನೆಗ್ಗಿನ ಮುಳ್ಳು, ದಾಳಿಂಬ ಸಿಪ್ಪೆ ಇವುಗಳ ಕಷಾಯವು ಅನ್ನವು ಹಿತವಾಗದಿರು ವಿಕೆಯನ್ನು ಹೋಗಲಾಡಿಸುವುದು.

**पञ्चानां पञ्चमूलानां कषायेण शृतं पयः**
**आजं मधुसितायुक्तं भक्तरोधनिरोधनम् ॥ ५२ ॥**

ಬೃಹತ್ಪಂಚಮೂಲ, ಹ್ರಸ್ವಪಂಚಮೂಲ, ಮಧ್ಯಮ ಪಂಚಮೂಲ, ಜೀವನಪಂಚಮೂಲ, ತೃಣ ಪಂಚಮೂಲ (ಬೃಹತ್ಪಂಚಮೂಲ=ಬಿಲ್ವ ಪತ್ರೆ ಬೇರು, ನರ್ವೊಳು ಬೇರು, ಆನೆಮುಂಗು, ಕುಂಬುಡು ಮರದ ಬೇರು, ಪಾದಿರಿಬೇರು,) (ಹ್ರಸ್ವಪಂಚಮೂಲ=ಓರೆಲೆ, ಮೂರೆಲೆ, ಸಣ್ಣ ಕುದನೆ, ಕಂಟಕಾರಿಬೇರು, ನೆಗ್ಗಿನಮುಳ್ಳು.) (ಮಧ್ಯಮಪಂಚಮೂಲ=ಕಡಿರ ಬೇರು, ತೆಗ್ಗಾಮೆಬೇರು, ಸಣ್ಣಹರಳುಬೇರು, ಕಾಟುದ್ದುಬೇರು, ಕಾಡುಹೆಸರುಬೇರು.) (ಜೀವನ ಪಂಚಮೂಲ=ತೊಂಡೆಬೇರು, ಶತಾವರಿ ಬೇರು, ಬುಗುಡಿ ಹೂವಿನ ಗಡ್ಡೆ, ಜೀವಕ, ಎಡವಕ.) (ತೃಣಪಂಚಮೂಲ ದರ್ಬೆಬೇರು, ಕುಶದರ್ಬೆಬೇರು, ಕಬ್ಬಿನಬೇರು, ನೆಲನೆಲ್ಲಿಬೇರು, ಆಮುಬೇರು.) ಇವುಗಳ ಕಷಾಯಕ್ಕೆ ಆಡಿನ ಹಾಲು ಸೇರಿಸಿ ಜೇನು ತುಪ್ಪ, ಸಕ್ಕರೆ ಮೇಲ್ಪುಡಿ ಸೇರಿಸಿ ಸೇವಿಸಲು ಅನ್ನವು ಮೆಚ್ಚದಿರುವಿಕೆ ಯುನ್ನು ನಿವಾರಿಸುವುದು.

**पुनर्नवैरण्डबलाशुण्ठीगोक्षुरसाधिता**
**अजाक्षीरान्विता पेया भक्तरोधनिरोधनी ॥ ५३ ॥**

ತೆಗ್ಗಾಮೆ ಬೇರು, ಕಡಿರ ಬೇರು, ಸಣ್ಣ ಹರಳು ಬೇರು, ಒಣ ಶುಂಠಿ, ನೆಗ್ಗಿನ ಮುಳ್ಳು ಇವುಗಳ ಕಷಾಯಕ್ಕೆ ಆಡಿನ ಹಾಲು ಸೇರಿಸಿ ಮಾಡಿದ ಪೇಯುವು ಭಕ್ತರೋಧ ನಿರೋಧಕವು.

बिल्वधान्याकबलामहौषधै
र्लाजमुद्गसहितैः शृतं जलम् ।
छर्दिसाशुपिबतः सशर्करम्
हन्ति वातकफपित्तजामपि ॥ ५४ ॥

ಬಿಲ್ವಪತ್ರೆ ಬೇರು, ಕೊತ್ತಂಬರಿ ಬೀಜ, ಕಡಿರ ಬೇರು, ಒಣ ಶುಂಠಿ, ಹೊದಳು, ಕಾಡುಹೆಸರುಬೇರು ಇವುಗಳ ಕಷಾಯಕ್ಕೆ ಸಕ್ಕರೆ ಸೇರಿಸಿ ಸೇವಿಸಲು ವಾತ, ಕಫ, ಪಿತ್ತ, ಈ ಮೂರು ದೋಷಗಳಿಂದುಂಟಾದ ವಾಂತಿಯನ್ನು ಹೋಗಲಾಡಿಸುವುದು.

लाजबिल्वौषधैः सिद्धः क्वाथः छर्द्यां हितं परम् ॥

ಹೊದಳು, ಬಿಲ್ವಪತ್ರೆ ಬೇರು, ಶುಂಠಿ, ಇವುಗಳ ಕಷಾಯವು ಛರ್ದಿ ರೋಗಕ್ಕೆ ಹಿತವು.

धान्याकशुण्ठीसुरदारुचित्रा
बलेक्षुबिल्वैः परिपक्वमम्भः ।
ससैन्धवो हृद्गदकोठगुल्म
वातप्लिहापार्श्वरुजासु शस्तः ॥ ५५ ॥

ಕೊತ್ತಂಬರಿ, ಒಣ ಶುಂಠಿ, ದೇವದಾರು, ಸಣ್ಣ ಹರಳು ಬೇರು, ಕಡಿರ ಬೇರು, ಕಬ್ಬಿನ ಬೇರು, ಬಿಲ್ವಪತ್ರೆ ಬೇರು ಇವುಗಳ ಕಷಾಯಕ್ಕೆ ಸೈಂದುಪ್ಪು ಪುಡಿ ಸೇರಿಸಿ ಸೇವಿಸಲು ಹೃದ್ರೋಗ, ವಾತ, ಗುಲ್ಮ, ಪ್ಲೀಹ, ಪಾರ್ಶ್ವ ನೋವು ಇವುಗಳಿಗೆ ಹಿತವನ್ನುಂಟುಮಾಡುವುದು.

माषदारुबलाक्वाथः सतैलैश्च हितस्तथा ॥

ಉದ್ದು, ದೇವದಾರು, ಕಡಿರಬೇರು, ಇವುಗಳ ಕಷಾಯವು ಹೃದ್ರೋಗ ಶಮನ.

पिबेत्ज्वरोक्तं द्राक्षादिसारिवादिगणाम्बु च ॥ ५६ ॥
विदार्यादिगणेनापि सिद्धं तृष्णाप्रपीडितः ।
सारिवोशीरकाष्मर्यमधूकशिशिरद्वयम् ॥ ५७ ॥
यष्टीपरूषकं हन्ति दाहपित्तास्रतृड्ज्वरान् ॥

ನಾಮದ ಬೇರು, ಲಾಮಂಚ, ಕುಂಬುಡು ಮರದ ಬೇರು, ಇಪ್ಪೆ ತಿರುಳು, ಚಂದನ, ರಕ್ತ ಚಂದನ, ಜ್ಯೇಷ್ಠಮಧು, ಇವುಗಳ ಕಷಾಯವು ಪರೂಷಕ, ದಾಹ, ರಕ್ತ ಪಿತ್ತ, ಬಾಯಾರಿಕೆಯುಳ್ಳ ಜ್ವರ ಹರ.

धान्याककृष्णातृणपञ्चमूलम्
शतावरीकोलयवासकानाम्
सुशीतलंवार्यनिवार्यवीर्यं
निवारयेत्पित्ततृषं सिताढ्यम् ॥ ५८ ॥

ಕೊತ್ತಂಬರಿ, ಹಿಪ್ಪಲಿ, ತೃಣಪಂಚಮೂಲಂಗಳು, ಶತಾವರಿ ಬೇರು, ಬುಗರಿ ಹಣ್ಣು, ಬಳ್ಳಿ ಉರುಸಣಿಗೆ ಬೇರು, ಇವುಗಳ ಕಷಾಯಕ್ಕೆ ಸಕ್ಕರೆ ಸೇರಿಸಿ ಸೇವಿಸಲು ಪಿತ್ತೋಲ್ಬಣ, ತೃಷ್ಣಾ ರೋಗ ಹರ.

मृद्विकामधुकमधूकपिप्पलीभिः
खर्जूरैर्मलयजसारिवाब्दलाजैः
सोशीरैः शृतमथवा सुशीतमम्भः
तृण्मूर्छामदमतिविभ्रमान्निरस्येत् ॥ ५९ ॥

ದ್ರಾಕ್ಷೆ, ಜ್ಯೇಷ್ಠಮಧು, ಇಪ್ಪೆ ತಿರುಳು, ಹಿಪ್ಪಿಲಿ, ಖರ್ಜೂರ, ಚಂದನ, ನಾಮದಬೇರಿನಸಿಪ್ಪೆ, ಭದ್ರಮುಷ್ಟಿ, ಹೊದಳು, ಲಾಮಂಚ ಈ ಔಷಧಿಗಳನ್ನು ಕಷಾಯಮಾಡಿ, ಶೀತಳಮಾಡಿ, ಸೇವಿಸಿದರೆ ತೃಷ್ಣಾ, ರೋಗ, ಮೋಹವಾಗೋಣ, ಆಲಸ್ಯ ಬುದ್ಧಿ ಭ್ರಮ ಇವುಗಳನ್ನು ಹೋಗ ಲಾಡಿಸುತ್ತದೆ.

दुस्पर्शकेन बिल्वेन यवान्या नागरेण वा
केवलेतष्षिसंयुक्तोपाठाहन्त्यर्शसांरूजम् ॥ ६० ॥

ಬಳ್ಳಿ ಉರುಸಣಿಗೆ ಬೇರು, ಬಿಲ್ವಪತ್ರೆ ಬೇರು, ಜೀರಿಗೆ, ಒಣಶುಂಠಿ ಇವು ನಾಲ್ಕು ಕೂಡಿ ಒಂದು ಭಾಗ. ಹಾಡೆಗಡ್ಡೆ, ಆರು ಕೆಂಜಿ (ತಾರ ತೂಕ) ಇದರ ಸಂಪ್ರದಾಯ ಅರ್ಶಸ್ಸಿಗೆ ಹಿತವು.

चिरिबिल्वपुनर्नवावह्न्यभया
कणासैन्धवनागरपक्कजलम् ॥
गुदकीलभगंन्दरगुल्महरम्
जठराग्निविवर्धनमाशु नृणाम् ॥ ६१ ॥

ಚಿರಿಬಿಲ್ವ ಬೇರು, ಪುನರ್ನವ ಬೇರು, ಚಿತ್ರಮೂಲ ಬೇರು, ಅಣಲೆ ಕಾಯಿ ಸಿಪ್ಪೆ, ಹಿಪ್ಲಿ, ಒಣಶುಂಠಿ, ಇಂದುಪ್ಪು, ಇವುಗಳ ಕಷಾಯವು ಭಗಂದರ, ಗುಲ್ಮ ಇವುಗಳನ್ನು ಶಮಿಸಿ ಜಠರಾಗ್ನಿಯನ್ನು ವರ್ಧಿಸು ವದು.

वर्षाभूनागराग्नीनां क्राथसिद्धं पयस्तथा ॥

ತೆಗ್ಲಾಮೆಬೇರು, ಒಣಶುಂಠಿ ಚಿತ್ರಮೂಲ, ಇವುಗಳ ಕಷಾಯವು ಅರ್ಶಸ್ಸು ಹರ.

चन्दनकिराततिक्तकधन्वयवाषाः
सवत्सकाः क्रथिताः ॥ ६२ ॥
रक्तार्शसां प्रशमनाः दार्वीत्वगुशीरनिम्बाश्च ॥

ಚಂದನ, ಪುತ್ತರಿಚ್ಚುಂಡ ಬೇರು, ಬಳ್ಳಿ ಉರುಸಣಿಗೆ ಬೇರು, ಕೊಡಗಪಾಲರಿ, ಮರದರಸಿನ, ಲಾಮಂಚ, ಬೇವಿನ ಕೆತ್ತೆ, ಇವುಗಳ ಕಷಾಯ ಕೊಟ್ಟಲ್ಲಿ ರಕ್ತಾರ್ಶಸ್ಸು ಶಮನ.

उशीरकिञ्जल्कमृणालशीत
शतावरीवत्सबृषाम्बुदोत्थः
रक्तार्शसां हन्तिबलंकषायः
कालारिमेदोत्थमभीरुजंवा ॥ ६३ ॥

ಲಾಮಂಚ, ತಾವರೆ ಕುಸುಮ, ತಾವರೆ ನಾಳ, ಚಂದನ, ಶತಾವರಿ, ಕೊಡಸಿಗನ ಬೀಜ, ಆಡ್ಸೋಗೆ ಬೇರು, ಬದ್ರಮುಷ್ಟಿ (೧). ಕಪ್ಪುಕರಿವೇಲ ತೊಗಟನ ಕಷಾಯ (೨). ಶತಾವರೀ ಕಷಾಯ (೩). ಈ ಮೂರು ಬಗೆಯ ಕಷಾಯವೂ ರಕ್ತಾರ್ಶನ್ನು ಶಮನ ಮಾಡುವುದು.

कुलत्थलशुनैरंडपाठाग्रन्थिकनागरैः ।
कषायः सयवक्षारः शूलोदावर्तनाशनः ॥ ६४ ॥

ಹುರುಳಿ, ಬೆಳ್ಳುಳ್ಳಿ, ಸಣ್ಣಹರಳು, ಹಾಡೆಗೆಡ್ಡೆ, ಕಾಡು ಹಿಪ್ಪಲಿ ಬೇರು, ಒಣಶುಂಠಿ ಇವುಗಳ ಕಷಾಯಕ್ಕೆ ಯವಕ್ಷಾರ ಮೇಲ್ಪುಡಿ ಸೇರಿಸಿ ಸೇವಿಸಲು ಶೂಲ, ಹೊಟ್ಟೆ ಉಬ್ಬರಿಸುವಿಕೆ ಇವುಗಳಿಗೆ ಹಿತಕರವು.

देवदारुवचामुस्तैर्नागरातिविषान्वितैः
आमातिसारनाशायक्वाथमेभिः पिबेन्नरः ॥ ६५ ॥

ದೇವದಾರು, ಬಜೆ, ಬದ್ರಮುಷ್ಟಿ ಒಣಶುಂಠಿ, ಅತಿವಿಡಯ ಇವುಗಳ ಕಷಾಯವು ಅತಿಸಾರಕ್ಕೆ ಹಿತಕರವು.

मुस्ताकरञ्जातिविषाग्निबिल्व ।
महौषधग्रन्थिकवत्सकानाम् ॥

क्वाथो रूणध्याममथोनिरामम् ।
प्रवृद्धशूलान्वितसारमुग्रम् ॥ ६६ ॥

ಭದ್ರಮುಷ್ಟಿ, ರಾಹು ಬೀಜ ಮರದ ಕೆತ್ತೆ, ಅತಿವಿಡಯ, ಚಿತ್ರಮೂಲ ಶುದ್ಧಿ, ಬಿಲ್ವಪತ್ರೆ ಬೇರು, ಒಣಶುಂಠಿ, ಹಿಪ್ಲಿಮೂಲ, ಕೊಡಸಿಗನ ಬೀಜ ಇವುಗಳ ಕಷಾಯವು ಹೆಚ್ಚು ಹೊಟ್ಟೆನೋವು ಉಳ್ಳ ಅತಿಸಾರ, ಆಮ್ಲ ವಿಲ್ಲದ ಅತಿಸಾರ ಶಮನ.

सातन्तातिविषाकुमिघ्नहुतभुक् पाठावचाधातकी ।
लोध्राम्बंष्ठवटाङ्कुरो भयनिशापद्मासमंगाभया ॥
एलामोचरसाजमोदचपला मूलारलुतन्त्र्यूषणाम् ॥
बिल्वं चेतिबहुप्रकारविहितां कुक्ष्यामयोघ्नो गणः ॥ ६७ ॥

ಬಳ್ಳಿ ಉರುಸಣಿಗೆ ಬೇರು, ಅತಿವಿಡಯ, ವಿಶಾಲರಿ, ಶುದ್ಧ ಮಾಡಿದ ಚಿತ್ರಮೂಲ, ಹಾಡೆಗಡ್ಡೆ, ಬಜೆ, ಧಾತಕೀ ಕುಸುಮ, ಪಾಚೋಟ ಕೆತ್ತೆ, ಪಡವಳಿಬೇರು, ಗೋಳಿ ಮೊಗ್ಗೆ, ಅಣಿಲೆಕಾಯಿ ಸಿಪ್ಪೆ, ಅರಸಿನ, ಮರದರ ಸಿನ ಸಿಪ್ಪೆ, ಓರಿಲತ್ತಾಮರ, ಪರಚ್ಚುಂಡ ಬೇರು, ಏಲಕ್ಕಿ, ಮೋಚರಸ, ಓಮುಕಾಳು, ಕಾಡುಹಿಪ್ಪಿಲಿ ಬೇರು, ಅರಳುಬೇರು, ಒಳ್ಳೆಮೆಣಸು, ಹಿಪ್ಪಿಲಿ, ಶುಂಠಿ, ಬಿಲ್ವಪತ್ರೆ ಬೇರು ಇವುಗಳ ಕಷಾಯವು ಅತಿಸಾರ ಹರ.

पूतिकिबिल्वचव्याग्निकणामूलपुनर्नवैः ।
पथ्याशुण्ठीयुतैः क्वाथः पातव्योऽग्निविवर्धनः ॥ ६८ ॥

(ತುಳು) ರಾಹುಬೀಜದ ಕೆತ್ತೆ, ಬಿಲ್ವಪತ್ರೆ ಬೇರು, ಕಾಡುಮೆಣಸಿನ ಬೇರು, ಚಿತ್ರಮೂಲ, ಕಾಡುಹಿಪ್ಪಿಲಿ ಬೇರು, ಪುನರ್ನವೆ ಬೇರು, ಅಣಿಲೆ ಕಾಯಿ ಸಿಪ್ಪೆ, ಶುಂಠಿ ಇವುಗಳ ಕಷಾಯವು ಅಗ್ನಿಶಕ್ತಿಯನ್ನುಂಟು ಮಾಡುತ್ತದೆ.

पथ्याव्योषपुनर्नवाम्बुदनिशापूतीकयुग्माजडा
पाठाबिल्वघुणप्रियारलुकणामूलोग्रगंधाग्निभिः ।
चव्यादीप्यक बाणपुङ्खसहितै रेतैः प्रसिद्धजलम्
पेयं तद्वद्गुदोषजग्रहणिभिर्द्वैर्यथावामृतम् ॥ ६९ ॥

ಅಣಿಲೆಕಾಯಿ ಸಿಪ್ಪೆ, ಒಳ್ಳೆಮೆಣಸು, ಹಿಪ್ಪಲಿ, ಶುಂಠಿ, ತೆಗ್ಗಾಮೆ ಬೇರು, ಭದ್ರಮುಷ್ಟಿ, ಅರಸಿನ, ಕೊಂಗುಮರದ ಕೆತ್ತೆ, ರಾಹುಬೀಜದ ಕೆತ್ತೆ, ನೆಲನೆಲ್ಲಿ ಬೇರು, ಹಾಡೆಗೆಡ್ಡೆ ಬಿಲ್ವಪತ್ರೆ ಬೇರು, ಅತಿವಿಡಯು, ಅರಳು ಬೇರು, ಕಾಡುಹಿಪ್ಲಿ ಬೇರು, ಬಜೆ, ಚಿತ್ರಮೂಲ, ಕಾಡುಮೆಣಸಿನ, ಓಮು ಕಾಳು, ಶುರಪುಂಖಬೇರು, ಇವುಗಳ ಕಷಾಯದಿಂದ ಗ್ರಹಣಿರೋಗ ಶಮನ.

बिल्वाजमोदघननागरधान्यकोग्रा ।
पूतीकवालकशठीदहनैः श्रुताम्भः ॥
तृट्शूलवान्परि पिबेदथवाविषूच्याम् ।
कैठर्यसिद्धसलिलं शरपुङ्खजं वा ॥ ७० ॥

ಬಿಲ್ವಪತ್ರೆ ಬೇರು, ಓಮುಕಾಳು, ಭದ್ರಮುಷ್ಟಿ, ಒಣಶುಂಠಿ, ಕೊತ್ತಂಬರಿ, ಬಜೆ, ರಾಹುಬೀಜಮರದ ಕೆತ್ತೆ, ಇರುವೇರಿ ದಂಡು, ಕಚ್ಚೂರ, ಚಿತ್ರಮೂಲ ಇವು ಮತ್ತು ಕೈಬೇವು ಅಥವಾ ಶರಪುಂಖದಬೇರು ಇವುಗಳ ಕಷಾಯವು ವಿಸೂಚಿ ರೋಗದಲ್ಲಿಯೂ, ಅದರಿಂದುಂಟಾದ ಬಾಯಾರಿಕೆ, ನೋವು ಇವುಗಳಿಗೆ ಹಿತಕರ.

दशमूलं बलामूलं द्राक्षायष्ट्याह्वचन्दनम् ।
क्वाथयित्वापिबेदेतन्मूत्रकृच्छ्रस्य शान्तये ॥ ७१ ॥

ದಶಮೂಲಗಳು, ಕಡಿರಬೇರು, ದ್ರಾಕ್ಷೆ, ಜ್ಯೇಷ್ಠಮಧು, ಚಂದನ ಇವುಗಳ ಕಷಾಯವು ಮೂತ್ರಕೃಚ್ಛ್ರ ರೋಗ ಹರ.

वरीसिद्धं पिबेत् क्षीरं ससितांकृच्छ्रशान्तये ॥

ಶತಾವರೀ ರಸ ಅಥವಾ ಕಷಾಯಕ್ಕೆ ಹಾಲು ಸೇರಿಸಿ ಕಲ್ಲು ಸಕ್ಕರೆ ಮೇಲ್ಪುಡಿ ಹಾಕಿ ಸೇವಿಸಲು ಮೂತ್ರಕೃಚ್ಛ್ರ ಹರ.

व्याघ्रीगोक्षुरमत्स्याक्षीपद्मपाषाणभेदकैः ॥ ७२ ॥
कपोतवंगकतकवरीवसुकवालकैः ॥
शृतक्षीराद्विशिष्टयायं कषायः शर्करान्वितः ॥ ७३ ॥
मूत्रकृच्छ्राणि सर्वाणि रक्तस्रावं च नाशयेत् ॥

ಸಣ್ಣ ಕುದನೆ ಬೇರು, ನೆಗ್ಗಿನಮುಳ್ಳು, ವಿಾನಂಗಾಣಿ, ತಾವರೆಬೀಜ ಪಾಷಾಣಭೇದಿ, ಬೆಟ್ಟುಕರಂಡೆ ಬೇರು, ತೇಟಾಂಪರಳು, ಶತಾವರಿ ಬೇರು, ಕೆನ್ನೆಗಿಲು, ಇರುವೇರಿ ದಂಡು, ಇವುಗಳ ಕಷಾಯಕ್ಕೆ ಹಾಲು, ಸಕ್ಕರೆ ಮೇಲ್ಪುಡಿ ಸೇರಿಸಿ ಸೇವಿಸಲು ಮೂತ್ರಕೃಚ್ಛ್ರ, ರಕ್ತ ಸ್ರಾವ ಇವುಗಳಿಗೆ ಹಿತಕರ.

पथ्यागोक्षुरशम्याकधन्वयाषाक्षिभेषजैः
क्वाथं पिबेत् सरुग्दाहे कृच्छ्रे मधुसितायुतम् ॥ ७५ ॥

ಅಣಿಲೆಕಾಯಿ ಸಿಪ್ಪೆ, ನೆಗ್ಗಿನಮುಳ್ಳು, ಕೊಂದೆಮರದ ಕೆತ್ತೆ, ಬಳ್ಳಿ ಉರುಸಣಿಗೆ ಬೇರು, ಪಾಚೋಟ ಕೆತ್ತೆ, ಇವುಗಳ ಕಷಾಯಕ್ಕೆ ಜೇನು ತುಪ್ಪ, ಸಕ್ಕರೆ ಸೇರಿಸಿ ಸೇವಿಸಿದರೆ ಮೂತ್ರಕೃಚ್ಛ್ರ ರೋಗ ಹರ.

वरीविदारीगोकण्टमुस्तागोपिजलं तथा ।

ಶತಾವರಿ ಬೇರು, ನೆಲಕುಂಬಳ ಗಡ್ಡೆ, ನೆಗ್ಗಿನಮುಳ್ಳು, ಬದ್ರಮುಷ್ಟಿ, ನಾಮದ ಬೇರಿನ ಸಿಪ್ಪೆ ಇವುಗಳ ಕಷಾಯವು ಮೂತ್ರಕೃಚ್ಛ್ರ ರೋಗ ಹರ.

बृहत्यादिगणैः सिद्धं द्विगुणीकृतगोक्षुरैः ।
तोयं पयो वा सर्पिर्वा सर्वमूत्रविकारजित ॥ ७५ ॥

ಸಣ್ಣ ಕುದನೆ ಬೇರು, ಕಂಟಕಾರಿ ಬೇರು, ಓರೆಲೆ ಬೇರು, ಮೂರೆಲೆ ಬೇರು, ಎರಡುಪಾಲು ನೆಗ್ಗಿನ ಮುಳ್ಳು, ಇವುಗಳಿಂದ ಮಾಡಿದ

ಕಷಾಯವೋ, ಹಾಲೋ, ಘೃತವೋ, ಸರ್ವ ಮೂತ್ರ ವಿಕಾರಗಳನ್ನು ಹೋಗಲಾಡಿಸುವುದು.

आंकुल्याब्दफलत्रयाद्विरजनीजम्बवर्जुनक्षीरज ।
त्वक्पाठाकतकाग्निमन्थखदिराम्बष्ठासनेन्द्रद्रुमैः ॥
क्वाथोवारिधिकोठकिं । शुकसरवै रेभिः कृतः शीतलः ॥
सक्षौद्राद्रिजतूत्थचूर्णसहितः सर्वप्रमेहापहा ॥ ७६ ॥

ಅಂಕೋಲೆ ಬೇರು, ಭದ್ರಮುಷ್ಟಿ, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಅರಸಿನ, ಮರದರಸಿನ ಸಿಪ್ಪೆ, ನೇರಳೆ ಕೆತ್ತೆ, ಬಣುಪು ಕೆತ್ತೆ, ಅತ್ತಿಮರದ ಕೆತ್ತೆ, ಗೋಳಿಮರದ ಕೆತ್ತೆ, ಕಿನ್ನಿಗೋಳಿ ಮರದ ಕೆತ್ತೆ, ಅಶ್ವತ್ಥಮರದ ಕೆತ್ತೆ ಕಲ್ಲು ಅಶ್ವತ್ಥಮರದ ಕೆತ್ತೆ, ಹಾಡೆ ಗೆಡ್ಡೆ, ತೇಟಾಂಪರಳು, ನರ್ವೊಳು ಬೇರು, ಕಾಚಿತಿರುಳು, ಅಂಬಷ್ಠಾ, ಬೇಂಗಮರದ ತಿರುಳು, ದೇವದಾರು, ಕಡಲು ನುರೆ, ಇವುಗಳ ಶೀತಲ ಕಷಾಯವನ್ನು ಶಿಲಾಜತು, ಜೇನುತುಪ್ಪ, ಕಲ್ಮದ, ಇವುಗಳ ಚೂರ್ಣ ಸೇರಿಸಿ ಸೇವಿಸಿದರೆ ಸರ್ವ ವಿಧಗಳಾದ ಪ್ರಮೇಹರೋಗಗಳೂ ಹರವಾಗು ವುವು

कनकखदिरधात्रीवैरिदार्वीसमंगा ॥
विदुलरजनिपाठाचूतबीजाभयाब्दः ॥
प्रसवरससनाथं तोयमेभिः प्रसिद्धं ।
हरति सकलमेहान् सप्तरात्रप्रयोगात् ॥ ७७ ॥

ತೇಟಾಂಪರಳು, ಕಾಚಿ ತಿರುಳು, ನೆಲ್ಲಿಕಾಯಿ ಸಿಪ್ಪೆ, ಏಕನಾಯಕ ಬೇರು, ಮರದರಸಿನ ಸಿಪ್ಪೆ, ಪರಚ್ಚುಂಡ ಬೇರು, ಕಾನಾಂಚಿ, ಅರಸಿನ, ಹಾಡೆಗಡ್ಡೆ, ಮಾವಿನಬೀಜದ ತಿರುಳು, ಅಣಿಲೆಕಾಯಿ ಸಿಪ್ಪೆ, ಭದ್ರಮುಷ್ಟಿ ಇವುಗಳ ಕಷಾಯಕ್ಕೆ ಜೇನುತುಪ್ಪ ಮೇಲ್ಪುಡಿ ನೇರಿಸಿ ಸೇವಿಸಲು ಸಕಲ ಪ್ರಮೇಹ ರೋಗಗಳಿಗೂ ಹಿತಕರವು.

व्याघ्रीवरणतर्कारीशिग्रुविश्वपुनर्नवम्
श्रपयित्वा पिबेत्तोयं विद्रधावन्तराश्रये ॥ ७८ ॥

ಸಣ್ಣ ಕುದನೆ ಬೇರು, ನೀರ್ಮಾದಳ ಬೇರು, ನರ್ವೊಳು ಬೇರು, ನುಗ್ಗೆ ಬೇರು, ಒಣಶಂಠಿ, ಪುನರ್ನವೆ ಬೇರು, ಇವುಗಳ ಕಷಾಯವು ಅಂತವಿದ್ರಧಿ ರೋಗಕ್ಕೆ ಹಿತಕರ.

मुस्ताचन्दनदार्वीत्वक्भूनिम्बोशीरवत्सकैः
सक्षौद्रः शमनः क्वाथस्तथापूयविनाशनः ॥ ७९ ॥

ಭದ್ರಮುಷ್ಟಿ, ಚಂದನ, ಮರದರಸಿನ ಸಿಪ್ಪೆ, ಪುತ್ತುಂಚ್ಛುಂಡ ಬೇರು, ಲಾಮುಂಚ ಕೊಡಗಪಾಲರಿ, ಜೇನುತುಪ್ಪ, ಇವುಗಳ ಕಷಾಯವು ವಿದ್ರಧಿಗೆ ಹಿತವು.

वरणसैर्यकयुग्मशतावरी ।
दहनमोरटाबिल्वविषाणिका: ॥
द्विबृहतीद्विकरञ्ज जयाद्वयं
वहलपल्लवदर्भरुजाकरः ॥ ८० ॥
वरणादिः कफं मेदोमन्दाग्नित्वं नियच्छति
आढ्यवातंशिरःशूलं गुल्मं चान्तः सविद्रधिम् ॥ ८१ ॥

ನೀರ್ಮಾದಳ ಕೆತ್ತೆ, ಕರಿಕುರಿಂಞಾಯು ಬೇರು, ಬಿಳಿ ಕುರಿಂಞಾಯು ಬೇರು, ಶತಾವರಿ ಬೇರು, ಚಿತ್ರಮೂಲ ಬೇರು, ಪೆರುಂಕುರುಂಬ ಬೇರು, ಬಿಲ್ವಪತ್ರೆ ಬೇರು, ಇಟ್ಟ್ರೋಪು, ಚಿತ್ರಟೆ ಬೇರು, ಕಂಟಕಾರಿ ಬೇರು, ಕೊಂಗುರ್ನಮರದ ಕೆತ್ತೆ, ರಾಹುಬೀಜ ಮರದ ಕೆತ್ತೆ, ನರ್ವೊಳು ಬೇರು, ಆಣಿಲೆ ಕಾಯಿ ಸಿಪ್ಪೆ, ಬಹಳವಲ್ಲವ, ದರ್ಭೆ ಬೇರು. ಇವುಗಳ ಕಷಾಯವು ವಿದ್ರಧಿ ರೋಗ ಹರ.

लशुनवर्बरशक्रलताभया
हपुषयक्षद्रुगग्निकणौषधैः ॥ ८२ ॥
सहपुनर्नवमोरटशिग्रुभि
र्जयति वृद्ध्युदराणि शृतं जलम् ॥ ८३ ॥

ಬೆಳ್ಳುಳ್ಳಿ, ಕಿರುತೇಗು ಬೇರು, ಇಂದ್ರವಲ್ಲಿ, ಅಣಿಲೆಕಾಯಿಸಿಪ್ಪೆ, ಚಿತ್ರ ಮೂಲಬೇರು ಹಿಪ್ಪಿಲಿ, ಒಣಶುಂಠಿ, ತೆಗ್ಗಾಮೆ ಬೇರು, ಪೆರುಕುರುಂಬ ಬೇರು, ನುಗ್ಗೆ ಬೇರು ಇವುಗಳ ಕಷಾಯವು ವೃದ್ಧಿ, ಉದರ ರೋಗ ಇವು ಗಳಿಗೆ ಹಿತಕರವು.

लशुनैरण्डयक्षाक्षीवर्षाभूहपुषौषधैः ।
क्वथितं हिंगुमद्वृद्धिगुल्मानाहोदरापहम् ॥ ८४ ॥

ಬೆಳ್ಳುಳ್ಳಿ, ಸಣ್ಣಹರಳು ಬೇರು, ಯಕ್ಷಾಕ್ಷಿ ಬೇರು, ಪುನರ್ನವೆ ಬೇರು, ಬೆಟ್ಟುಕರಂಡೆ ಬೇರು, ಒಣಶುಂಠಿ, ಹಿಂಗು, ಇವುಗಳ ಕಷಾಯವು ವೃದ್ಧಿ, ಗುಲ್ಮ, ಹೊಟ್ಟೆ ಉಬ್ಬರಿಸುವಿಕೆ, ಉದರ ಇವುಗಳಿಗೆ ಹಿತಕರವು.

दशमूलविश्वदारुक्वथितं गुल्मजिज्जलम् ॥
चित्रकग्रन्थिकैरण्डशुण्ठीक्वाथं च तद्गुणः ॥ ८५ ॥

ದಶಮೂಲಂಗಳು, ಒಣಶುಂಠಿ, ದೇವದಾರು, (೧) ಚಿತ್ರಮೂಲ ಬೇರು, ಹಿಪ್ಪಿಮೂಲ, ಸಣ್ಣಹರಳು ಬೇರು, ಒಣಶುಂಠಿ, (೨) ಈ ಎರಡು ಬಗೆಯು ಕ್ವಾಥಗಳೂ ಗುಲ್ಮರೋಗಕ್ಕೆ ಹಿತಕರವು.

वर्षाभूबिल्वखल्वोरुपुसहचर शुण्ठ्यग्निमन्थैः कषायः ।
पातव्यः ससारो गुदलवणकणा हिंगुमिश्रो यथार्हम् ॥
विड्बन्धं वह्निमान्द्यं रुजमतिमहतीं योनिहृत्पार्श्वपृष्ठ ।
श्रोणीदेशेषु सद्यश्शमयति जठराष्ठीलगुल्मप्लीहांश्च ॥ ८६ ॥

ತೆಗ್ಗಾವೆ ಬೇರು, ಬಿಲ್ವಪತ್ರೆ ಬೇರು, ಹುರುಳಿ, ಸಣ್ಣಹರಳು ಬೇರು, ಕರಿಕುರಿಞ್ಜಾ ಬೇರು, ಒಣಶುಂಠಿ, ನವೊರ್ಗಳು ಬೇರು ಇವುಗಳ ಕಷಾಯಕ್ಕೆ ಬೆಲ್ಲ ಇಂದುಪ್ಪು, ಹಿಪ್ಪಲಿ ಚೂರ್ಣ, ಹಿಂಗು ಚೂರ್ಣ, ಮೇಲ್ಪುಡಿ ಸೇರಿಸಿ ಸೇವಿಸಲು ಮಲಬದ್ಧತೆ, ಅಗ್ನಿಮಾಂದ್ಯ, ಯೋನಿ, ಹೃದಯ, ಕುಕ್ಷಿ, ಬೆನ್ನು, ಪಾರ್ಶ್ವನೋವು, ಇವುಗಳಲ್ಲಿರುವ ವೇದನೆ, ಉದರ ಅಷ್ಠೀಲಾ, ಗುಲ್ಮರೋಗ, ಪ್ಲೀಹರೋಗ ಕೂಡ ಶಮನ.

कणाशताह्वाद्विकरञ्जदारु
भार्ङ्गीकुलत्थैः सतिलैर्विपक्वम् ।
तथारसोनेन च सिद्धमम्भः
सहिंगुकल्कं हितमस्रगुल्मे ॥ ८७ ॥

ಹಿಪ್ಪಲಿ, ಸತಾಪೆ, ಕೊಂಗುರ್ಮರದ ಕೆತ್ತೆ, ರಾವುಬೀಜ ಮರದ ಕೆತ್ತೆ, ದೇವದಾರು, ಕಿರುತೇಗು ಬೇರು, ಹುರುಳಿ, ಎಳ್ಳು ಕಾಳು, ಬೆಳ್ಳುಳ್ಳಿ ಕಾಳು, ಹಿಂಗು, ಇವುಗಳ ಕಷಾಯವು ರಕ್ತ ಗುಲ್ಮಹರ.

निर्गुण्ड्येरण्डकोरण्डगोक्षुराह्विपुनर्नवम् ।
पञ्चकोलाभयाशिग्रुकुलत्थस्तैः शृतं जलम् ॥ ८८ ॥
सक्षारं हिंगुलवणं सर्वशूलनिवारणम् ॥

ಕರಿನೆಕ್ಕಿ ಬೇರು, ಸಣ್ಣಹರಳುಬೇರು, ಕರಿಂಕುರಿಞ್ಜಾ ಬೇರು, ನೆಗ್ಗಿನ ಮುಳ್ಳು, ಪುನರ್ನವೆ ಬೇರು ಎರಡುಬಗೆ, ಒಣಶುಂಠಿ, ಹಿಪ್ಲಿ, ಕಾಡುಮೆಣಸು ಬೇರು, ಹಿಪ್ಲಿಮೂಲ, ಚಿತ್ರಮೂಲ ಬೇರು, ಅಣಿಲೆಕಾಯಿ ಸಿಪ್ಪೆ, ನುಗ್ಗೆ ಬೇರು, ಹುರುಳಿ ಕಾಳು, ಈ ಕಷಾಯಕ್ಕೆ ಯವಕ್ಷಾರ, ಹಿಂಗು, ಇಂದುಪ್ಪು ಮೇಲ್ಪುಡಿ ಸೇರಿಸಿ ಸೇವಿಸಲು, ಎಲ್ಲಾ ಬಗೆಯ ಶೂಲ ನಿವಾರಣೆಯಾಗುವುದು.

पथ्यापूतीकशुण्ठीदहनकणकणामूलचव्याजगन्धा
वर्षाभूविल्वखल्वोरुपुसहचरशुण्ठ्यग्निमन्थैः कषायः ।

सक्षारो हिंगुमिश्रः क्षपयति गुदजप्लीहगुल्माग्निमांद्यं ।
तून्यष्ठीलानाहवातप्रभवकफभवं शूलजालोदरं च ॥ ८९ ॥

ಅಣಲೆಕಾಯಿ ಸಿಪ್ಪೆ, ರಾವುಬೀಜ ಮರದ ಕೆತ್ತೆ, ಒಣಶುಂಠಿ, ಚಿತ್ರ ಮೂಲ, ಹಿಪ್ಪಲಿ, ಹಿಪ್ಪಲಿ ಮೂಲ, ಕಾಡುಮೆಣಸಿನ ಬೇರು, ಅಶ್ವಗಂಧಿ, ಪುನರ್ನವೆ ಬೇರು, ಬಿಲ್ವಪತ್ರೆ ಬೇರು, ಹುರುಳಿ, ಸಣ್ಣ ಹರಳುಬೇರು, ಕರಿಂಕುರಿಞ ಬೇರು, ಒಣಶುಂಠಿ, ನವ್ರೋಳು ಬೇರು ಇವುಗಳ ಕಷಾಯಕ್ಕೆ ಚವಲ್‌ಕ್ಷಾರ, ಹಿಂಗು ಚೂರ್ಣ ಮೇಲ್ಪುಡಿ ಸೇರಿಸಿ, ಸೇವಿಸಲು ಪ್ಲೀಹ, ಗುಲ್ಮ, ಅಗ್ನಿಮಾಂದ್ಯ, ಅಷ್ಠಿಲಾ, ಹೊಟ್ಟೆ ಉಬ್ಬರಿಸುವಿಕೆ, ವಾತ, ಕಫ, ಇವು ಅಧಿಕವಾಗಿ ಉಳ್ಳ ಶೂಲ, ಜಲೋದರ ರೋಗ ಇವುಗಳಿಗೆ ಹಿತಕರವು.

त्वचा पलाशवृक्षस्य कषायो विधिना श्रृतः ।
सनालिकेरजक्षीरः सद्यः शूलमपोहति ॥ ९० ॥

ಪಲಾಶಮರದ ಕೆತ್ತೆ, ವಿಧಿಪ್ರಕಾರ ಕಷಾಯಮಾಡಿ ತೆಂಗಿನಹಾಲು ಸೇರಿಸಿ ಸೇವಿಸಲು ಶೂಲ ಕೂಡಲೆ ನಿವೃತ್ತಿಯಾಗುವುದು.

दशमूलपञ्चकोलत्रिफलादन्तीत्रिवृत्सिद्धं ।
तोयमशेषं क्षपयेज्जठराण्यपिजातपभयांसि ॥ ९१ ॥

ದಶಮೂಲಂಗಳು, ಹಿಪ್ಪಲಿ, ಹಿಪ್ಪಲಿಮೂಲ, ಕಾಡುಮೆಣಸು ಬೇರು, ಚಿತ್ರಮೂಲ, ಒಣಶುಂಠಿ, ಅಣಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿ ಕಾಯಿ ಸಿಪ್ಪೆ, ನಾಗದಂತಿ ಬೇರು, ತ್ರಿಗಡೆ ಇವುಗಳ ಕಷಾಯವು ಮಹೋದರ ರೋಗಕ್ಕೆ ಹಿತಕರವು.

निकुम्भकुम्भात्रिफलागवाक्षीस्नुक्
तिल्वकैः कल्पितमम्बुपीतम् ।
सहेमदुग्धं सकणं बिरेकात्
जयन्युदावर्तमहोदराणि ॥ ९२ ॥

ನಾಗದಂತಿ ಬೇರು, ತ್ರಿಗಡೆ, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಕರಿಶಂಖಪುಷ್ಪ ಬೇರು, ಚತುರಕಳ್ಳಿ ಬೇರು, ಕವ್ಮಡಿ ಕೆತ್ತೆ, ಎಮ್ಮೆಕಳ್ಳಿಬೇರು, ಹಿಪ್ಪಲಿ ಇವುಗಳ ಕಷಾಯವು ಮಹೋದರಕ್ಕೆ ಉದಾವರ್ತ ರೋಗಕ್ಕೆ ಹಿತಕರವು.

पुनर्नवानिम्बपटोलशुण्ठी
तिक्तामृतादार्व्यभयाकषायः ।
सर्वाङ्गशोफं ज्वरकासशूल
श्वासान्वितं पाण्डुगदं निहन्ति ॥ ९३ ॥

ಪುನರ್ನವೆ ಬೇರು, ಕೈಬೇವಿನ ಕೆತ್ತೆ, ಕಾಡುಪಡುವಲ ಬಳ್ಳಿ, ಒಣ ಶುಂಠಿ, ಪುತ್ತುರಿಚುಂಡ ಬೇರಿನ ಸಿಪ್ಪೆ, ಅಮೃತಬಳ್ಳಿ, ಮರದರಸಿನ ಸಿಪ್ಪೆ, ಅಣಿಲೆಕಾಯಿ ಸಿಪ್ಪೆ, ಇವುಗಳ ಕಷಾಯವು ಸರ್ವಾಂಗ ಶೋಪ, ಜ್ವರ, ಕೆಮ್ಮು, ಶೂಲ, ಉಬ್ಬಸ, ಇವುಗಳುಳ್ಳ ಪಾಂಡುರೋಗಕ್ಕೆ ಹಿತಕರವು.

वासागुडूचीत्रिफलाखट्वीभूनिम्बनिम्बजः ।
क्वाथः क्षौद्रयुतो हन्ति पाण्डुपित्तास्रकामिलाः ॥ ९४ ॥

ಆಡ್ಸೋಗೆ ಬೇರು, ಅಮೃತಬಳ್ಳಿ, ತ್ರಿಫಲೆಗಳು, ಆನೆಮುಂಗು ಬೇರು, ಪುತ್ತುರಿಚುಂಡ ಬೇರಿನ ಸಿಪ್ಪೆ, ಬೇವಿನ ಕೆತ್ತೆ, ಇವುಗಳ ಕಷಾಯಕ್ಕೆ ಜೇನು ಮೇಲ್ಪುಡಿ ಸೇರಿಸಿ ಸೇವಿಸಲು ಪಿತ್ತಪಾಂಡುವಿಗೂ, ರಕ್ತಪಿತ್ತಕ್ಕೂ, ಪಿತ್ತ ಕಾಮಲೆಗೂ ಹಿತಕರವು.

तिन्त्रिणीतरुणपर्णशलाका ।
लोहपत्रविजयापुनर्नवैः ॥
इक्षुबिल्वसहितैः श्रतं जलम् ॥
पाण्डुमाशु सगुडं विनिहन्ति ॥ ९५ ॥

ಹುಣಸೆ ಎಲೆಯ ನರ, ಪುರಾಣ ಕಿಟ್ಟ, ಅಣಿಲೆಕಾಯಿ ಸಿಪ್ಪೆ, ತೆಗ್ಗಾವಿ ಬೇರು, ಕಬ್ಬಿನ ಬೇರು, ಬಿಲ್ವಪತ್ರೆ ಬೇರು, ಇವುಗಳ ಕಷಾಯವನ್ನು ಪಿತ್ತಪಾಂಡುವಿಗೆ ಬೆಲ್ಲ ಸೇರಿಸಿ ಸೇವಿಸುವದು.

वासुडूचीयष्टवाह्वकृतकामृतवाळकैः ।
सनिम्बैः कामिलां हन्यात् क्वाथः क्षौद्राज्यसंयुतः ॥ १६ ॥

ಆಡ್ಸೋಗೆ ಬೇರು, ಅಮೃತಬಳ್ಳಿ, ಜ್ಯೇಷ್ಠಮಧು, ತೇಟಾಂಫರಳು, ಇರಿವೇರಿ ದಂಡು, ಕೈಬೇವಿನ ಕೆತ್ತೆ ಇವುಗಳ ಕಷಾಯಕ್ಕೆ ಜೇನುತುಪ್ಪ, ತುಪ್ಪ ಸೇರಿಸಿ ಸೇವಿಸಲು ಪಿತ್ತಕಾಮಿಲಾರೋಗಕ್ಕೆ ಹಿತಕರವು.

निम्बत्वक्त्रिफलापटोलरजनीवासामृतासारिवा
श्यामातामलकीपलंकषबलानीलीस्थिरायष्टिभिः ।
सिद्धो माक्षिकपिप्पलीगिरिजतूप्रक्षेपणात्संस्कृतः
क्वाथः कुम्भहलीमकं प्रशमयेत् भिन्द्यन्दिनैः पंचपैः ॥ १७ ॥

ಕೈಬೇವಿನ ಕೆತ್ತೆ, ತ್ರಿಫಲೆಗಳ ಸಿಪ್ಪೆ, ಕಾಡುಪಡವಲ ಬಳ್ಳಿ, ಅರಸಿನ, ಆಡ್ಸೋಗೆ ಬೇರು, ಅಮೃತಬಳ್ಳಿ, ನಾಮದ ಬೇರಿನ ಸಿಪ್ಪೆ, ತ್ರಿಗಡೆ, ನೆಲನೆಲ್ಲಿ ಬೇರು, ಕುಂಬುಳು ಬೇರು, ಕಡಿರ ಬೇರು, ನೀಲಿಬೇರು, ಓರೆಲೆಬೇರು, ಇವುಗಳ ಕಷಾಯಕ್ಕೆ ಜ್ಯೇಷ್ಠಮಧು, ಜೇನುತುಪ್ಪ, ಕಲ್ಮದ ಸೇರಿಸಿ ಸೇವಿಸಲು ಕಾಮಿಲಾ ರೋಗಕ್ಕೂ, ಕುಂಭಕಾಮಿಲೆಗೂ ಹಿತಕಾರಿಯು.

पथ्यापुनर्नवानिशाकणमूलवह्नि
चित्राब्दजीरकसुरद्रुममागधीनाम्
क्वाथं पिबेत् श्वयथुदण्डधरात्त
जीवोप्युत्तिष्ठते शिवसमाश्रितबालतुल्यः ॥ १८ ॥

ಅಣಿಲೆಕಾಯಿ ಸಿಪ್ಪೆ, ಪುನರ್ನವೆ ಬೇರು, ಅರಸಿನ, ಕಾಡು ಹಿಪ್ಪಲಿ ಬೇರು, ಚಿತ್ರಮೂಲ ಬೇರು, ಜೀರಿಗೆ, ಸಣ್ಣ ಹರಳು ಬೇರು,

ಭದ್ರಮುಷ್ಟಿ, ದೇವದಾರು, ಹಿಪ್ಪಲಿ ಇವುಗಳ ಕಷಾಯವು ಪರಮೇಶ್ವರನ ಆಶ್ರಿತನಾದ ಮಾರ್ಕಾಂಡೇಯನು ಯಮನ ಭೀತಿಯಿಂದ ಮುಕ್ತನಾದ ಹಾಗೆ ಶೋಫ ರೋಗಕ್ಕೆ ಹಿತಕಾರಿಯು.

गोक्षुरार्द्रकवर्षाभूपथ्यादारुमहौषधैः ॥
सरसोनेक्षुरैः सिद्धं तोयं शोफहरं परम् ॥ ९९ ॥

ನೆಗ್ಗಿನ ಮುಳ್ಳು, ಹಸಿಶುಂಠಿ, ಪುನರ್ನವೆ ಬೇರು, ಅಣಿಲೆಕಾಯಿ ಸಿಪ್ಪೆ, ದೇವದಾರು, ಒಣಶುಂಠಿ, ಬೆಳ್ಳುಳ್ಳಿ, ಬಯಿಲ ಮುಳ್ಳು ಇವುಗಳ ಕಷಾಯವು ಶೋಫ ಹರ ಮಾಡುವುದು.

पटोलदार्वीपिचुमन्दतिक्ता
त्रायन्तिकायष्टिवृषाभयोत्थम् ।
जलं विसर्पं विनिहन्ति धात्री
पटोलमुस्तैश्च शृताम्बु तद्वत् ॥ १०० ॥

ಕಾಡುಪಡವಲ ಬಳ್ಳಿ, ಮರದರಸಿನ ಸಿಪ್ಪೆ, ಕೈಬೇವಿನ ಕೆತ್ತೆ, ಪುತ್ರಂಜ್ಜುಂಡ ಬೇರಿನ ಸಿಪ್ಪೆ, ಬ್ರಾಹ್ಮೀ, ಜ್ಯೇಷ್ಠಮಧು, ಆಡ್ಸೋಗೆ ಬೇರು, ಅಣಿಲೆ ಕಾಯಿ ಸಿಪ್ಪೆ, (೧) ನೆಲ್ಲಿಕಾಯಿ ಸಿಪ್ಪೆ, ಕಾಡುಪಡವಲ ಬಳ್ಳಿ, ಭದ್ರಮುಷ್ಟಿ, ಇರುವೇರಿಪಂಡು ಈ ಎರಡು ವಿಧದ ಕಷಾಯಗಳೂ ವಿಸರ್ಪಕ್ಕೆ ಹಿತಕರವು.

मुस्तारिष्टपटोलदारुरजनीद्राक्षाबलानागरैः ।
त्रायन्त्युत्पलधन्वयाषधनिकाभूनिम्बसेव्याम्बुभिः ।
श्रेष्ठानिम्बकुकूलकैश्च सकणैः सिद्धाः कषाया मरुत्-
पित्तश्लेष्मविसर्पदर्पशमनाः प्रोक्तास्त्रयस्ते क्रमात् ॥ १०१ ॥

ಭದ್ರಮುಷ್ಟಿ, ಕೈಬೇವಿನ ಕೆತ್ತೆ, ಕಾಡುಪಡವಲ ಬಳ್ಳಿ, ದೇವದಾರು, ಅರಸಿನ, ದ್ರಾಕ್ಷೆ, ಕಡೀರ ಬೇರು, ಒಣಶುಂಠಿ, (೧) ಬ್ರಾಹ್ಮಿ, ನೆಲಸಂಪಿಗೆ

ಗಡ್ಡೆ. ಬಳ್ಳಿಉರುಸಣಿಗೆ ಬೇರು, ಕೊತ್ತಂಬರಿ ಬೀಜ, ಪುತ್ತರಿಚ್ಚುಂಡಬೇರಿನ ಸಿಪ್ಪೆ, ಲಾಮಂಚ, ಇರುವೇರಿದಂಡು, (೨) ತ್ರಿಫಲೆಗಳು, ಕೈಬೇವಿನ ಕೆತ್ತೆ, ಕಾಡುಪಡವಲ ಬಳ್ಳಿ, ಹಿಪ್ಪಲಿ, (೩) ಭದ್ರಮುಷ್ಟಿಯಿಂದ ಪ್ರಾರಂಭಿಸಿ ಒಣಶುಂಠಿ ವರೇಗೆ ಇರುವ ಔಷಧಿಗಳ ಕಷಾಯವು ವಾತವಿಸರ್ಪಕ್ಕೂ, ಬ್ರಾಹ್ಮಿ ಮೊದಲ್ಗೊಂಡು ಇರುವೇರಿದಂಡುವರೆಗಿನ ಔಷಧಿಗಳ ಕಷಾಯವು ಪಿತ್ತವಿಸರ್ಪಕ್ಕೂ, ತ್ರಿಫಲೆಯಿಂದ ಹಿಪ್ಪಲಿವರೇಗಿನ ಔಷಧಿಗಳ ಕಷಾಯವು ಶ್ಲೇಷ್ಮ ವಿಸರ್ಪಕ್ಕೂ, ಹಿತಕರವು.

जीवन्तीहिरुवेलिकात्रिफलिकावासामृतासारिबा
शुण्ठीयष्टीपयोदचन्दनपटोलोशीरनिम्बैः शृतः ॥
निष्क्वाथोऽष्टमशेषितो मधुगुडप्रक्षेपणात् संस्कृतः
पीतश्चेत् ज्वरितेन तस्य पिटकोत्पत्तेः प्रसङ्गः कुतः ॥ १०२ ॥

ಬುಗುಡಿಹೂವಿನ ಗಡ್ಡೆ, ಇರಿವೇರಿ ದಂಡು, ತ್ರಿಫಲೆಗಳು, ಆಡ್ಸೋಗೆ ಬೇರು, ಅಮೃತ ಬಳ್ಳಿ, ನಾಮದ ಬೇರಿನ ಸಿಪ್ಪೆ, ಒಣಶುಂಠಿ, ಜ್ಯೇಷ್ಠಮಧು, ಭದ್ರಮುಷ್ಟಿ, ಚಂದನ, ಕಾಡುಪಟವಲ ಬಳ್ಳಿ, ಲಾಮಂಚ, ಕೈಬೇವಿನ ಕೆತ್ತೆ ಇವುಗಳ ಕಷಾಯಕ್ಕೆ ಜೇನುತುಪ್ಪ, ಬೆಲ್ಲ ಸೇರಿಸಿ ಸೇವಿಸಲು ಬೊಕ್ಕೆ, ಪಿಟಕಾ ಮುಂತಾದ್ದರ ಉತ್ಪತ್ತಿಯು ಪ್ರಸಂಗವು ಹ್ಯಾಗಾಗುವುದು?

शुण्ठीबलानिम्बपटोलकुष्ठैः
सधान्यकैः सामलकैः समुस्तैः ॥
शृतः कषायो विनिहन्ति पानात्
मसूरिकामष्टविधां मधूढः ॥ १०३ ॥

ಒಣಶುಂಠಿ, ಕಡಿರ ಬೇರು, ಕೈಬೇವಿನ ಕೆತ್ತೆ, ಕಾಡುಪಟವಲ ಬಳ್ಳಿ, ಅವ್ವಲ್ ಕಂಕುಷ್ಠ, ಕೊತ್ತಂಬರಿ ಬೀಜ, ನೆಲ್ಲಿಕಾಯಿ ಸಿಪ್ಪೆ, ಭದ್ರಮುಷ್ಟಿ, ಇವುಗಳ ಕಷಾಯಕ್ಕೆ ಜೇನುತುಪ್ಪ ಮೇಲ್ಪುಡಿ ಸೇರಿಸಿ ಸೇವಿಸಲು ಎಂಟು ಬಗೆಯ ಮಸೂರಿಕಾ ರೋಗಗಳು ಶಮನ.

चन्दनपर्पटकामृतवल्ली
सेव्यजलाम्बुदधान्यकसिद्धम्
पुष्करमुग्रविदाहविमिश्रं
स्फोटमशेषमपोहति सद्यः ॥ १०४ ॥

ಚಂದನ, ಪರ್ಪಟಕ, ಅಮೃತ ಬಳ್ಳಿ, ಲಾಮಂಚ, ಇರುವೇರಿ ದಂಡು, ಭದ್ರಮುಷ್ಟಿ, ಕೊತ್ತಂಬರಿ ಬೀಜ, ಪುಷ್ಕರಮೂಲ ಇವುಗಳ ಕಷಾಯವು ದಾಹವುಳ್ಳ ಸ್ಫೋಟಗಳನ್ನು ಕೂಡಲೇ ಹೋಗಲಾಡಿಸುವುದು.

पटोलत्रिफलारिष्टगुडूचीधावनीवृषैः ।
सकरंजैः कषायोऽयं कुष्टजिद्धच्रकं स्मृतम् ॥ १०५ ॥

ಕಾಡುಪಟವಲ ಬಳ್ಳಿ, ತ್ರಿಫಲೆಗಳು, ಕೈಬೇವಿನ ಕೆತ್ತೆ, ಅಮೃತ ಬಳ್ಳಿ, ಸಣ್ಣಕಾದನೆ ಬೇರು, ಆಡ್ಸೋಗೆ ಬೇರು, ಕೊಂಗುರ್ಮರದ ಕೆತ್ತೆ, ಇವುಗಳ ಕಷಾಯವು ಕುಷ್ಠ ರೋಗಗಳಿಗೆ ಹಿತಕಾರಿಯು.

खदिरारिष्टगुडूचीपटोलदार्वीदुरालभाक्वाथः ।
कुष्टानां विनिहन्ता दैतेयानां नृसिंह इव ॥ १०६ ॥

ಕಾಚಿತಿರುಳು, ಕೈಬೇವಿನ ಕೆತ್ತೆ, ಅಮೃತ ಬಳ್ಳಿ, ಕಾಡುಪಟವಲ ಬಳ್ಳಿ, ಮರದರಸಿನ ಸಿಪ್ಪೆ, ಬಳ್ಳಿ ಉರುಸಣಿಗೆ ಬೇರು ಇವುಗಳ ಕಷಾಯವು ಕುಷ್ಠ ರೋಗಗಳಿಗೆ ಹಿತಕರವು. ನರಸಿಂಹಾವತಾರಿಯಾದ ವಿಷ್ಣುವು ದೈತ್ಯರನ್ನು ವಿನಾಶಿಸಿದಂತೆ ಸಕಲ ಕುಷ್ಟರೋಗಗಳನ್ನು ಈ ಕಷಾಯವು ಹೋಗಲಾಡಿಸುವುದು.

काकोदुम्बरिकावेल्लुचन्द्ररेखाशृतं जलम् ।
पीतं प्रधावयेत् श्वित्रं कुष्टमौदुम्बरं तथा ॥ १०७ ॥

ಪೇಯುತ್ತಿ, ವಾಯುವಿಳಂಗ, ಕಾಕೋರ್ಲರಿ ಬೀಜ, ಇವುಗಳ ಕಷಾಯವು ಶ್ವೇತ್ರ, ಔದುಂಬರ ಕುಷ್ಠ ರೋಗವನ್ನು ಹೋಗಲಾಡಿಸುವುದು.

मञ्जिष्ठामुस्तकुटजगुडूचीकुष्ठनागरैः ।
भार्ङ्गीक्षुद्रावचानिम्बनिशाद्वयफलत्रिकैः ॥ १०८ ॥
पटोलकटुकीमूर्वाविडङ्गासनचित्रकैः ।
शतावरीत्रायमाणाकृष्णेन्द्रयववासकैः ॥ १०९ ॥
भृङ्गराजमहादारु पाठाखदिरचन्दनैः ।
त्रिवृद्वरुणकैरातबाकुचीकृतमालकैः ॥ ११० ॥
शाखोटकमहानिम्बकरञ्जातिविषाजलैः ।
इन्द्रवारुणिकानन्तासारिवापर्पटैः समैः ॥ १११ ॥
एभिः कृतं पिबेत्क्वाथं कृष्णागुग्गुलुसंयुतम् ।
अष्टादशसु कुष्ठेषु वातरक्तार्दिते तथा ॥ ११२ ॥
उपदंशे श्लीपदे च प्रसुप्तौ पक्षघातके ।
मेदोदोषे नेत्ररोगे मञ्जिष्ठादिः प्रशस्यते ॥ ११३ ॥

ಮಂಜಿಷ್ಟ್ಯಕಡ್ಡಿ, ಭದ್ರಮುಷ್ಟಿ, ಕೊಡಸಿಗನ ಕೆತ್ತೆ, ಅಮೃತಬಳ್ಳಿ, ಕಂಕುಷ್ಠ, ಒಣಶುಂಠಿ, ಕಿರುತೇಗು, ಕಂಟಕಾರಿಬೇರು, ಬಜೆ, ಬೇವಿನ ಕೆತ್ತೆ, ಅರಶಿನ, ಮರದರಶಿನ ಸಿಪ್ಪೆ, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಕಾಡುಪಟವಲಬಳ್ಳಿ, ಕಟುಕರೋಹಿಣೀ, ಪೆಂಕುಗುಂಬ, ವಾಯುವಿಳಂಗ, ಬೇಂಗತಿರುಳು, ಚಿತ್ರಮೂಲ (ಶುದ್ಧಿ), ಶತಾವರಿ ಬೇರು, ಬ್ರಾಹ್ಮಿ, ಹಿಪ್ಪಲಿ, ಕೊಡಗಪಾಲರಿ. ಆಡ್ಸೋಗೆಬೇರು, ಗರ್ಗದಬೇರು, ದೇವದಾರು, ಹಾಡೆಬೇರು, ಕಾಚಿತಿರುಳು, ಚಂದನ, ತ್ರಿಗಡೆ, ನೀರ್ವಾಳದಳ, ಕಿರಾತಕಡ್ಡಿ, ಬಾವುಂಚೀ ಬೀಜ, ಕೊಂಗುರ್ಮರದಕೆತ್ತೆ, ಪೀತಫಲವು, ಕಹಿಬೇವು, ರಾವುಬೀಜ, ಅತಿವಿಡಯು, ಇರಿವೇರಿ

ದಂಡು, ಕಾಡುಸೌತೆ ಬಳ್ಳಿ, (ಮ. ಕಾಟ್ ವೆಳ್ಳರಿಕ), ಬಳ್ಳಿಉರುಹಣಿಗೆ ಬೇರು, ನಾಮದಬೇರು, ಪರ್ಪಟಕ ಹುಲ್ಲು ಇವುಗಳನ್ನು ¼ ಕ್ವೆಂಚಿ ಗಳಂತೆ ಸಮತೂಕ ಸೇರಿಸಿ ಕಷಾಯ ಮಾಡಿ, ಹಿಪ್ಪಲಿಚೂರ್ಣ, ಶುದ್ಧ ಮಾಡಿದ ಗುಗ್ಗುಲು ಸೇರಿಸಿ ಸೇವಿಸಲು ೧೮ ವಿಧದ ಕುಷ್ಠರೋಗಗಳೂ, ವಾತರಕ್ತ ಉಪದಂಶ, ಶ್ಲೀಪದ ಪ್ರಸುಪ್ತಿ, ಪಕ್ಷಾಘಾತ, ಮೇದೋದೋಷ, ನೇತ್ರರೋಗ ಇವುಗಳಲ್ಲಿ ಈ ಮಂಜಿಷ್ಟಾದಿ ಕ್ವಾಥವನ್ನು ಸೇವಿಸಲು ಸಂಪೂರ್ಣ ಉಪಶಮನವಾಗುವುದು.

निर्गुण्ड्यग्निविडङ्गदारुरजनीमुस्ताखुकर्णीक्षपैः ।
भार्ङ्गीव्योषपलाशशिग्रुचविकापथ्यारसोनान्वितैः ।
क्वाथः शिग्रुविडङ्गहिङ्गुपटुमान् कीटांश्च विध्वंसयेत् ।
दण्डोऽथर्वसमस्तमन्त्रकृतसंस्कारो यथैवासुरान् ॥ ११४ ॥

ಕರಿನೆಕ್ಕಿ ಬೇರು, ಚಿತ್ರಮೂಲ ಬೇರು (ಶುದ್ಧಿ), ವಾಯುವಿಳಂಗ, ದೇವದಾರು, ಅರಸಿನ, ಭದ್ರಮುಷ್ಟಿ, ಇಲಿಕ್ಕಿವಿ, ಕಿರುತೇಗು ಬೇರು, ಕರಿ ತುಂಬೆ ಬೇರು, ಒಣಶುಂಠಿ, ಕರಿಮೆಣಸು, ಹಿಪ್ಪಲಿ, ಪಲಾಶ ಕೆತ್ತೆ, ನುಗ್ಗೆ ಕೆತ್ತೆ, ಕಾಡುಮೆಣಸಿನ ಬೇರು, ಅಣಿಲೆಕಾಯಿ ಸಿಪ್ಪೆ, ಬೆಳ್ಳುಳ್ಳಿ, ಇವುಗಳ ಕಷಾಯಕ್ಕೆ ನುಗ್ಗೆಬೀಜ, ವಿಶಾಲರಿ, ಹಿಂಗು, ಸೈಂದುಪ್ಪು, ಇವುಗಳನ್ನು ಚೂರ್ಣಿಸಿ ಸೇರಿಸಿ ಸೇವಿಸಿದರೆ, ಅಥರ್ವವಿಹಿತವಾದ ಮಂತ್ರಸಂಸ್ಕಾರವು ಪಿಶಾಚಿಗಳನ್ನು ನಾಶಗೊಳಿಸುವಂತೆ ಕ್ರಿಮಿಗಳ ಉಪದ್ರವವನ್ನು ಹೋಗ ಲಾಡಿಸುವುದು.

विडङ्गकृष्णामरिचानिर्गुण्डीमूलशिग्रुभिः ।
भार्ङ्गीविश्वाखुकर्ण्यब्दैः क्वाथः कृमिहरः परम् ॥ ११५ ॥

ವಿಶಾಲರಿ, ಹಿಪ್ಪಲಿ, ಒಳ್ಳೆಮೆಣಸು, ಕರಿನೆಕ್ಕಿ ಬೇರು, ಕಿರುತೇಗು ಬೇರು, ಒಣಶುಂಠಿ, ಇಲಿಕ್ಕಿವಿ, ಭದ್ರಮುಷ್ಟಿ, ಇವುಗಳ ಕಷಾಯವು ಕ್ರಿಮಿ ಹರ.

बलासहचरैरण्डशुण्ठीरास्नासुरद्रुमैः ।
ससिन्दुवारलशुनैरष्टवर्गोऽनिलापहः ॥ ११६ ॥

ಕಡಿರ ಬೇರು, ಕರಿಕುರಿಞಾ ಬೇರು, ಸಣ್ಣ ಹರಳು ಬೇರು, ಒಣ ಶುಂಠಿ, ಕೆಂಪರತ್ತೆ, ದೇವದಾರು, ಕರಿನೆಕ್ಕಿ ಬೇರು, ಬೆಳ್ಳುಳ್ಳಿ, ಇವುಗಳ ಕಷಾಯವು ಎಲ್ಲಾ ವಿಧದ ವಾತರೋಗಗಳನ್ನು ಹೋಗಲಾಡಿಸುವುದು.

शुण्ठीबलाद्वयक्वाथः सर्ववानतिबर्हणः ।

ಒಣಶುಂಠಿ, ಕಡಿರ ಬೇರು, ದೊಡ್ಡ ಕಡಿರ ಬೇರು, ಇವುಗಳ ಕಷಾಯವು ವಾತ ಹರ.

सप्तच्छदोशीरपटोलमुस्ताहरीतकीतिक्तकरोहिणीभिः ।
यष्ट्याह्वराजद्रुमचन्दनानां क्वाथं पिबेत् पाकहरं मुखस्य ॥ ११७ ॥

ಹಾಳೆಮರದ ಕೆತ್ತೆ, ಲಾವುಂಚ, ಕಾಡುಪಟವಲ ಬಳ್ಳಿ, ಭದ್ರಮುಷ್ಟಿ, ಅಣಲೆಕಾಯಿ ಸಿಪ್ಪೆ, ಪುತ್ತರಿಚ್ಚುಂಡ ಬೇರು, ಕಟುಕರೋಹಿಣಿ, ಜ್ಯೇಷ್ಟ ಮಧು, ಕೊಂದೆ ಬೇರು, ಚಂದನ, ಇವುಗಳ ಕಷಾಯವು ಮುಖಪಾಕ ರೋಗ ಹರ.

दशमूलामृतामुस्तापर्पटोशीरचन्दनैः ।
पुनर्नवाबलाधात्रीपटोलकटुकाह्वयैः ॥ ११८ ॥
वासापुष्पलतायाषविष्णुक्रान्तिभिरन्वितैः ।
सहदेवी च भार्ङ्गी च त्रिजातं कटुरोहिणी ॥ ११९ ॥
अग्रग्राही च रास्ना च कियाता च संयुतैः ।
पथ्याबिभीतकयुतैः कलिङ्गकसमान्वितैः ॥ १२० ॥
चोरजोङ्गकसंयुक्तैः शताह्वामधुकैरिभैः ।
चीनोषणमजाजी च जातीफलदळान्वितैः ॥ १२१ ॥
तत्पुष्पैश्च समैरेभिर्वैकुण्ठकुसुमान्वितैः ।
देवदारु नतं कुष्ठं जीरकद्वयसंयुतैः ॥ १२२ ॥

किराततिक्तकं वेणुं तालपल्लवयोजितम् ।
क्वाथं सन्निविकारेषु विशेषात्कफवातयोः ॥ १२३ ॥
कम्पजाड्यादिहरणं सर्वदोषहरं परम् ।

ದಶಮೂಲಂಗಳು, ಅಮೃತ ಬಳ್ಳಿ, ಭದ್ರಮುಷ್ಟಿ, ಪರ್ಪಟಕ, ಲಾಮಂಚ, ಚಂದನ, ಪುನರ್ನವೆ ಬೇರು, ಕಡಿರ ಬೇರು, ನೆಲ್ಲಿಕಾಯಿ ಸಿಪ್ಪೆ, ಕಾಡುಪಡವಲ ಬಳ್ಳಿ, ಕಟುಕರೋಹಿಣಿ, ಆಡ್ಸೋಗೆ ಬೇರು, ಕುಂಬುಳ ಬಳ್ಳಿ, ಉರುಸಣಿಗೆ ಬೇರು, ವಿಷ್ಣುಕ್ರಾಂತಿ, ಸಹದೇವಿ, ಕಿರುತೇಗು ಬೇರು, ಏಲಕ್ಕಿ, ತಮಾಲ ಪತ್ರೆ, ಲವಂಗ ಚೆಕ್ಕೆ, ಕಟುಕರೋಹಿಣಿ, ಆಟುನಾರಿವೇಳ, ಕೆಂಪರತ್ತೆ, ಕಿರಾತಕಡ್ಡಿ, ಅಣಿಲೆಕಾಯಿ ಸಿಪ್ಪೆ, ಶಾಂತಿ ಕಾಯಿ ಸಿಪ್ಪೆ, ಕೊಡಗಪಾಲರಿ, ಕಚ್ಚೂರ ಗಡ್ಡೆ, ಅಗಿಲುಗಂಧ, ಸತಾಪೆ, ಜ್ಯೇಷ್ಠಮಧು, ಬಾಲಮೆಣಸು, ಓಮುಕಾಳು, ಜಾಯಿಕಾಯಿ, ಜಾಯಿಪತ್ರಿ, ಜಾಜಿಪುಷ್ಪ, ತುಳಸಿ ಕುಸುಮ, ದೇವದಾರು, ತಗರ, ಅಪ್ಪಲ್ ಕಂಕುಷ್ಠ, ಮೂರು ಬಗೆಯ ಜೀರಿಗೆ ಕಾಳು, ಪುತ್ತರಿಚ್ಚುಂಡ ಬೇರಿನ ಸಿಪ್ಪೆ, ಬಿದಿರ ಎಲೆ, ತಾಲಪಲ್ಲವ, ಇವುಗಳ ಕಷಾಯವು, ಸಕಲ ವಿಧದ ಸನ್ನಿಪಾತಗಳಲ್ಲಿಯೂ, ವಿಶೇಷತಃ ಕಫವಾತೋಲ್ಬಣವಾದ ಸನ್ನಿಪಾತಗಳಲ್ಲಿ ಉಂಟಾಗುವ ಕಂಪ, ಜಾಡ್ಯ, ಮುಂತಾದುವುಗಳಿಗೆ ಹಿತಕಾರಿಯು.

एरण्डकोरण्डबलामृतानां ।
शतावरीविश्वयुजां कषायः ।
हृत्पार्श्वबस्तित्रिकपृष्ठशूलं ।
निहन्ति सिन्धूत्थसितामधूढः ॥ १२४ ॥

ಸಣ್ಣ ಹರಳು ಬೇರು, ಕೆರಿಕುರಿಞ್ಞಾ ಬೇರು, ಕಡಿರ ಬೇರು, ಅಮೃತ ಬಳ್ಳಿ, ಶತಾವರಿ ಬೇರು, ಒಣಶುಂಠಿ ಇವುಗಳ ಕಷಾಯಕ್ಕೆ ಇಂದುಪ್ಪು, ಸಕ್ಕರೆ, ಜೇನುತುಪ್ಪ ಇವುಗಳನ್ನು ಮೇಲ್ಪುಡಿ ಸೇರಿಸಿ ಸೇವಿಸಲು ಹೃದಯ, ಪಾರ್ಶ್ವ, ಬಸ್ತಿ, ತ್ರಿಕ, ಪೃಷ್ಠ ಇವುಗಳಲ್ಲಿರುವ ನೋವನ್ನು ಹೋಗಲಾಡಿಸುವುದು.

एरण्डकोरण्डनिदिग्धिकाह्वा ।
देवद्रुविश्वलशुनैः परिपक्वमम्भः ।
पयोन्वितं पीतवतां नराणां ।
हृत्कुक्षिनाभिवृषणोरुरुजो निहन्ति ॥ १२५ ॥

ಸಣ್ಣ ಹರಳು ಬೇರು, ಕಂಕುರಿಞಾ ಬೇರು, ಸಣ್ಣ ಕುದನೆ ಬೇರು, ದೇವದಾರು, ಒಣಶುಂಠಿ, ಬೆಳ್ಳುಳ್ಳಿ, ಇವುಗಳ ಹಾಲು ಕಷಾಯವು ಹೃದಯ, ದಲ್ಲಿಯೂ, ಉದರದಲ್ಲಿಯೂ, ನಾಭಿಯಲ್ಲಿಯೂ, ವೃಷಣದಲ್ಲಿಯೂ, ತೊಡೆಗಳಲ್ಲಿಯೂ, ಇರುವ ವೇದನೆಯನ್ನು, ಹೋಗಲಾಡಿಸುವುದು.

धनदनयनशुण्ठीशिग्रुरास्नोग्रगन्धा ।
वरणलशुनकृष्णाचित्रकैरण्डकैश्च ।
सुरतरुघनपथ्याबर्बरैः सम्भृताम्भः ।
शमयति परिपीतं सार्दिताक्षेपवातान् ॥ १२६ ॥

ಕಳಂಜಿ ಬೇರು, ಒಣಶುಂಠಿ, ನುಗ್ಗೆ ಬೇರು, ಕೆಂಪರತ್ತೆ, ಬಜೆ, ನೀರ್ಮಾದಳ ಬೇರು, ಬೆಳ್ಳುಳ್ಳಿ, ಹಿಪ್ಪಿಲಿ, ಚಿತ್ರಮೂಲಬೇರು(ಶುದ್ಧಿ), ಸಣ್ಣ ಹರಳುಬೇರು, ದೇವದಾರು, ಭದ್ರಮುಷ್ಟಿ, ಅಣಿಲೆಕಾಯಿ ಸಿಪ್ಪೆ, ಕಿರು ತೇಗು ಬೇರು, ಇವುಗಳ ಕಷಾಯವು ಅರ್ದಿತ ವಾತಕ್ಕೂ, ಆಕ್ಷೇಪ ವಾತಕ್ಕೂ, ಹಿತಕಾರಿಯು.

प्रसारिणीमाषबलारसोन ।
रास्नौषधैः प्रक्वथितं तदम्भः ।
पिबन्ति ये क्षीरभुजो जयन्ति ।
मरुद्विकारानपबाहुकं च ॥ १२७ ॥

ಪ್ರಸಾರಿಣೀ, ಉದ್ದು, ಕಡಿರ ಬೇರು, ಬೆಳ್ಳುಳ್ಳಿ, ಕೆಂಪರತ್ತೆ, ಒಣ ಶುಂಠಿ. ಇವುಗಳ ಹಾಲು ಕಷಾಯವು ವಾತವಿಕಾರ ಅಪಬಾಹುಕ ಶಮನ ಮಾಡುವುದು.

सहचरं सुरदारु सनागरं ।
क्वथितमम्भसि तैलविमिश्रितम् ।
पवनपीडितदेहगतिः पिबेत् ।
द्रुतविलम्बितगो भवतीच्छया ॥ १२८ ॥

ಕರಿಕುರಿಞ್ಞಿ ಬೇರು, ದೇವದಾರು, ಒಣಶುಂಠಿ, ಇವುಗಳ ಕಷಾಯಕ್ಕೆ ಶುದ್ಧ ಹರಳೆಣ್ಣೆ ಸೇರಿಸಿ ಸೇವಿಸಲು ವಾತ ಶಮನ.

रसोनकारवीकृष्णास्थिराभिस्साधितं जलम् ।
पीतमुन्मार्गगं वातमनुलोमयति क्षणात् ॥ १२९ ॥

ಬೆಳ್ಳುಳ್ಳಿ ಕಾಳು, ಕರಿಜೀರಿಗೆ, ಹಿಪ್ಪಿಲಿ, ಓರೆಲೆ ಬೇರು, ಇವುಗಳ ಕಷಾಯವು ವಾತ ಶಮನ.

गन्धर्वहस्ताचिरिबिल्वहुताशविश्व-
पथ्यापुनर्नवयवाषकभूमितालैः ।
क्वाथस्सुसैन्धवगुडः पवनस्य शान्त्यै-
र्वह्निर्बलाय रुचये मलशोधनाय ॥ १३० ॥

ಸಣ್ಣ ಹರಳು ಬೇರು, ಕರಂಜಬೀಜ, ಚಿತ್ರಮೂಲ, ಒಣಶುಂಠಿ, ಅಣಿಲೆಕಾಯಿ ಸಿಪ್ಪೆ, ಪುನರ್ನವೆ ಬೇರು, ಬಳ್ಳಿ ಉರುಸಣಿಗೆ ಬೇರು, ನೆಲತಾಳಿಗಡ್ಡೆ, ಇವುಗಳ ಕಷಾಯಕ್ಕೆ ಇಂದುಪ್ಪು, ಬೆಲ್ಲ, ಹರಳೆಣ್ಣೆ, ಮೇಲ್ಪುಡಿ ಸೇರಿಸಿ ಸೇವಿಸಲು ವಾತ ಶಮನ ಮಾಡಿ ಅಗ್ನಿಬಲ ಮಲಶೋಧನ ಉಂಟುಮಾಡುವುದು.

पञ्चमूलश्रृतं क्षीरं वातशोणितनाशनम् ।

ಬಿಲ್ವಪತ್ರೆ, ನರ್ವೊಗಳು ಬೇರು, ಆನೆಮುಂಗುಬೇರು, ಕುಂಬುಡು ಮರದ ಬೇರು, ಪಾದಿರಿಬೇರು, ಇವುಗಳ ಹಾಲು ಕಷಾಯವು ವಾತ ಶೋಣಿತವನ್ನು ನಾಶಮಾಡುವದು.

रास्नैरण्डबलासहचरबरीदुस्पर्शवासामृता ।
देवाह्वातिविषाघनेक्षुरशठीविश्वैः कषायः श्रुतः ।
सर्पिस्तैलविमिश्रितं प्रशमयेद्वायुं सशूलं तथा ।
जङ्घोर्वान्त्रकपृष्ठपार्श्वहनुगं शोफं च वातास्रजम् ॥ १३१ ॥

ಕೆಂಪರತ್ತೆ, ಸಣ್ಣ ಹರಳು ಬೇರು, ಕಡಿರ ಬೇರು, ಕರಿಕುರಿಞ್ಞಿ, ಬೇರು, ಬಳ್ಳಿ ಉರುಸಣಿಗೆ ಬೇರು, ಆಡ್ಸೋಗೆ ಬೇರು, ಅಮೃತ ಬಳ್ಳಿ ದೇವದಾರು, ಅತಿವಿಡಯು, ಭದ್ರಮುಷ್ಟಿ, ಬಯಲ ಮುಳ್ಳು, ಕಚ್ಚೂರ, ಒಣ ಶುಂಠಿ, ಇವುಗಳ ಕಷಾಯಕ್ಕೆ ತುಪ್ಪ, ಹರಳೆಣ್ಣೆ, ಮೇಲ್ಪುಡಿ ಸೇರಿಸಿ ಸೇವಿಸಲು ವಾತ, ಮೊಣಕಾಲು, ಊರು, ತ್ರಿಕ, ಬೆನ್ನು, ಪಾರ್ಶ್ವ, ಹನುಗಳಲ್ಲಿರುವ ಶೋಫವನ್ನೂ, ವಾತ ರಕ್ತವನ್ನೂ ನಿವೃತ್ತಿ ಪಡಿಸುವುದು.

रास्नातामलकीवृषागुरुशठीचित्राब्दचव्याश्मभिः ।
धात्रीभार्ङ्गीपटोलपुष्करनिशासैरीयविश्वाग्निभिः ।
निष्क्वाथो दशमूलदारुसहितः पीतः कदुष्णो नृणाम् ।
हन्यात्सैन्धव खण्डशौण्डिसहितो वातं त्रिदोषोत्तरम् ॥ १३२ ॥

ಕೆಂಪರತ್ತೆ, ನೆಲನೆಲ್ಲಿ ಬೇರು, ಆಡ್ಸೋಗೆ ಬೇರು, ಅಗಿಲು ಗಂಧ, ಕಚ್ಚೂರ, ಸಣ್ಣ ಹರಳು ಬೇರು, ಭದ್ರಮುಷ್ಟಿ, ಕಾಡುಮೆಣಸಿನ ಬೇರು, ಕಲ್ಲೂರ್ವಂಜಿ ಬೇರು, ನೆಲ್ಲಿಕಾಯಿ ಸಿಪ್ಪೆ, ಕಿರುತೇಗು ಬೇರು, ಕಾಡುಪಟವಲ ಬಳ್ಳಿ, ಪುಷ್ಕರಮೂಲ, ಅರಸಿನ, ಕರಿಕುರಿಞ್ಞಿಬೇರು, ಒಣ ಶುಂಠಿ, ಚಿತ್ರಮೂಲ ಬೇರು, ದಶಮೂಲಂಗಳು, ದೇವದಾರು, ಇವುಗಳ ಕ್ವಾಥಕ್ಕೆ ಇಂದುಪ್ಪು, ಕಲ್ಲುಸಕ್ಕರೆ, ಸೇರಿಸಿ ಸೇವಿಸಲು ತ್ರಿದೋಷೋತ್ತರ ವಾತ ಹರ.

रास्ना द्विगुणभागा स्यादेकभागास्ततः परे ।
धन्वयासबलैरण्डदेवदारु शटीवचाः ॥ १३३ ॥
वासको नागरं पथ्या चव्या मुस्ता पुनर्नवा ।
गुडूची वृद्धदारुश्च शतपुष्पा च गोक्षुरः ॥ १३४ ॥

अश्वगन्धा प्रतिविषा कृतमालः शतावरी ।
कृष्णा सहचरश्चैव धान्यकं बृहतीद्वयम् ॥ १३५ ॥
एभिः कृतं पिबेत्क्वाथं शुण्ठी चूर्णेन संयुतम् ।
कृष्णाचूर्णेन वा योगराजगुग्गुलुनाथ वा ॥ १३६ ॥
अजमोदादिना वापि तैलेनेरण्डजेन वा ।
सर्वाङ्गकम्पे कुब्जत्वे पक्षाघातेऽवबाहुके ॥ १३७ ॥
गृध्रस्यामवाते च श्लीपदे चापतानके ।
अन्त्रवृद्धौ तथाध्माने जङ्घाजानुगतेऽर्दिते ॥ १३८ ॥
शुक्रामये मेढ्रोगे वन्ध्यायोन्यामयेषु च ।
महारास्नादिराख्यातो ब्रह्मणा गर्भकारणम् ॥ १३९ ॥

ಕೆಂಪರತ್ತೆ, ಬಳ್ಳಿಉರುಸಣಿಗೆ ಬೇರು, ಕಡಿರಬೇರು, ಸಣ್ಣಹರಳು ಬೇರು, ದೇವದಾರು, ಕಚ್ಚೂರ, ಬಜೆ, ಅಡ್ಸೋಗೆ ಬೇರು, ಒಣಶುಂಠಿ, ಅಣಿಲೆಕಾಯಿ ಸಿಪ್ಪೆ, ಕಾಡುಮೆಣಸಿನ ಬೇರು, ಭದ್ರಮುಷ್ಠಿ, ಪುನರ್ನವೆ ಬೇರು, ಅಮೃತಬಳ್ಳಿ, ವೃದ್ಧದಾರು, ಸತಾಪೆ, ನೆಗ್ಗಿನ ಮುಳ್ಳು, ಅಶ್ವಗಂಧಿ, ಅತಿವಿಡಯು, ಕೊಂಗುರ್ನಮರದ ಕೆತ್ತೆ, ಶತಾವರಿಬೇರು, ಹಿಪ್ಪಿಲಿ, ಕರಿ ಕುರಿಞಿ ಬೇರು, ಕೊತ್ತಂಬರಿ ಬೀಜ, ಗುಳ್ಳಬೇರು, ಕಿರಿಗುಳ್ಳಬೇರು, ಇದರಲ್ಲಿ ಕೆಂಪರತ್ತೆ ೧ ಕೈಂಜಿ ತೂಕ, ಬಾಕಿ ಔಷಧಿಗಳು ½ ಕೈಂಜಿಗಳಂತೆ ಸೇರಿಸಿ ಕಷಾಯ ಮಾಡಿ, ಹಿಪ್ಪಿಲಿ ಚೂರ್ಣ, ಯೋಗರಾಜ ಗುಗ್ಗುಲು, ಅಜಮೋದಾದಿ ಚೂರ್ಣ, ಶುದ್ಧ ಹರಳೆಣ್ಣೆ, ಇವುಗಳಲ್ಲಿ ರೋಗಾನುಸಾರ ಯಾವುದಾದರೊಂದನ್ನು ಸೇರಿಸಿ ಸೇವಿಸಲು ಸರ್ವಾಂಗವಾತ, ಕಂಪ ವಾತ, ಕುಬ್ಜವಾತ, ಪಕ್ಷಾಘಾತ, ಅವಬಾಹುಕ, ಗೃಧ್ರಸೀ, ಶ್ಲೀಪದ, ಅಪತಾನಕ, ಅಂತ್ರವೃದ್ಧಿ, ಆಧ್ಮಾನ, ಜಂಘಾವಾತ, ಜಾನುಗತವಾತ, ಅರ್ದಿತವಾತ, ಶುಕ್ರರೋಗ, ಮೇಢ್ರರೋಗ, ಬಂಜೆತನ, ಯೋನಿರೋಗ ಇವೆಲ್ಲಾ ರೋಗಗಳು ಸಂಪೂರ್ಣ ಶಮನಹೊಂದುವುವು. ಮತ್ತು ಗರ್ಭ ಕಾರಣ. ಈ ಮಹಾರಾಸ್ನಾದಿ ಕ್ವಾಥವು ಬ್ರಹ್ಮನಿಂದಲೇ ಹೇಳಲ್ಪಟ್ಟಿರುವುದು.

रास्नैरण्डामृताऽश्मन्हृचरचविकरामसेनाब्दभार्ङ्गी ।
दीप्यानन्तायवानीवृकिनुरकृमिजिच्छृङ्गिशुण्ठीबलाभिः ।
मूर्वातिक्तासमङ्गा द्विविश्शठिवरापिप्पलीयावशूकैः
रक्तश्रीखण्डकारग्वध कटुकफलैर्वत्सवृर्श्चीरयुक्तैः ॥ १४० ॥
सर्वैरेतैर्दशाङ्घ्रिप्रयुतसमलवैः साधितोऽष्टावशेषः ।
क्वाथो रास्नादिरादौ नहदुपपदवान् कौशिकोक्तो निहन्ति ॥
सर्वाङ्गैकाङ्गवातान् श्वसनकम्नहृत्स्वेदशैत्यातितन्द्रान् ।
शूलं तूनीं प्रतूनीं गलगदनिखिलाङ्गव्यथाकम्पखञ्जीः ॥ १४१ ॥
विश्वाचीश्लीपदामानिलनिखिलमहासूतिकारोगसुप्तीः ।
जिह्वासन्धापतानं स्फुटनविमथनः क्लीबताक्षेपकौब्जं ।
शोफाटोपापतन्द्रार्दितखुडनहनु गृध्रसीवातशूलम् ।
वायुं श्लेष्मोत्थरोगानपि गिरितनयावल्लभेनोपदिष्टः ॥ १४२ ॥

ಕೆಂಪರತ್ತೆ, ಸಣ್ಣಹರಳುಬೇರು, ಅಮೃತಬಳ್ಳಿ, ಬಜೆ, ಕರಿಕುರಿಞಾ ಬೇರು, ಕಾಡುಕರಿಮೆಣಸಿನ ಬೇರು, ಭದ್ರಮುಷ್ಟಿ, ಓಮುಕಾಳು, ವಟ್ಟೇಂಕಿ ಬೇರು, ಜೀರಿಗೆ, ನಿರ್ವಿಶದ ಬೇರು, ಮುರಾಬೇರು, ವಾಯು ವಿಳಂಗ, ಕರ್ಕಾಟಕಶೃಂಗೀ, ಒಣಶುಂಠಿ, ಕಡಿರಬೇರು, ಪೆರಿಕುರುಂಬ, ಕಿರಾತಕಡ್ಡಿ, ಪರಚ್ಚುಂಡಬೇರು, ವಿಡಯು, ಅತಿವಿಡಯು, ಕಚ್ಚೂರ, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಹಿಪ್ಪಿಲಿ, ಯವಶೂಕ, ರಕ್ತಚಂದನ, ಕೊಂವೆಕೆತ್ತೆ, ಕಟುಕರೋಹಿಣಿ, ಕೊಡಗ ಪಾಲರಿ, ಪುನರ್ನವೆ ಬೇರು. ಇವುಗಳನ್ನು ಸಮತೂಕ ಸೇರಿಸಿ ಕಷಾಯ ಮಾಡಿ ಸೇವಿಸಲು, ಸರ್ವಾಂಗವಾತ, ಏಕಾಂಗವಾತ, ಶ್ವಸನ, ಕಸನ, ಹೃತ್, ಸ್ವೇದ, ಶೈತ್ಯತಂದ್ರಾದಿ, ಉಪದ್ರವವುಳ್ಳ ವಾತ, ಶೂಲ, ತೂನಿ, ಪ್ರತೂನಿ, ಕಂಠಗ್ರಹ, ಶರೀರದಲ್ಲಿ ಸರ್ವತ್ರನೋವು, ಕಂಪನ, ವಿಶ್ವಾಚೀ, ಶ್ಲೀಪದ, ಆಮವಾತ, ಸೂತಿಕಾರೋಗ, ಅಪತಾನಕ, ಕ್ಲೈಬ್ಯ, ಆಕ್ಷೇಪಕ ಕುಬ್ಜವಾತ, ಗೃಧ್ರಸೀ, ಇವು ಮೊದಲಾದ ವಾತರೋಗಗಳನ್ನೂ,

ಕಫಾಧಿಕ್ಯದಿಂದುಂಟಾದ ರೋಗಗಳನ್ನೂ ಹೋಗಲಾಡಿಸುವುದು. ಆದಿಯಲ್ಲಿ ಕೌಶಿಕ ಮಹರ್ಷಿಯಿಂದ ಹೇಳಲ್ಪಟ್ಟ ಈ ಮಹಾರಾಸ್ನಾದಿ ಕಷಾಯವೇ ಪಾರ್ವತೀರಮಣನಾದ ಪರಮೇಶ್ವರನಿಂದ ಲೋಕಹಿತಕ್ಕೋಸ್ಕರ ಉಪದೇಶಿಸಲ್ಪಟ್ಟಿರುವುದು.

वरीछिन्नरुहाक्वाथो वातशोणितनाशनः ।

ಶತಾವರೀ ಬೇರು, ಅಮೃತ ಬಳ್ಳಿ, ಇವುಗಳ ಕಷಾಯವು ವಾತ ಶೋಣಿತ ಹರ.

शतावरी छिन्नरुहामलत्वक् ।
बलेक्षुकाण्डेक्षुरसम्भृताम्भः ।
कल्केन यष्टीमधुकस्य मिश्रं ।
हुनोति वातास्रमथास्रपित्तम् ॥ १४३ ॥

ಶತಾವರಿ, ಅಮೃತ ಬಳ್ಳಿ, ನೆಲ್ಲಿಕಾಯಿ ಸಿಪ್ಪೆ, ಕಡಿರ ಬೇರು, ಕಬ್ಬು, ಬಯುಲ ಮುಳ್ಳು, ಇವುಗಳ ಕಷಾಯಕ್ಕೆ ಜ್ಯೆಷ್ಠಮಧು ಸೇರಿಸಿ ಸೇವಿಸಲು ವಾತಶೋಣಿತ, ರಕ್ತಪಿತ್ತ, ಶಮನ ಮಾಡುವುದು.

लघुना पञ्चमूलेन शृतं क्षीरं तथा हितम् ।

ಸಣ್ಣ ಪಂಚಮೂಲ ಕಷಾಯಕ್ಕೆ ಹಾಲು ಸೇರಿಸಿ ಸೇವಿಸಿದರೆ ವಾತ ಶೋಣಿತ ಶಮನ.

वरासनाग्नयः पत्रनिशाम्भः स्थौल्यदोषजित् ॥ १४४ ॥

ತ್ರಿಫಲೆಗಳು, ಬೇಂಗತಿರುಳು, ಚಿತ್ರಮೂಲ (ಶುದ್ಧಿ), ಕಬ್ಬಿಣದ ಶುದ್ಧಮಾಡಿದ ತೆಳುವಾದ ತಗಡು, ಅರಸಿನ ಇವುಗಳ ಕಷಾಯವು ಸ್ಥೌಲ್ಯ ರೋಗ ಹರ.

कटुकामलगुडूचीशुण्ठीशम्याकपल्लवैस्सशिवैः ।
सिद्धं तोयं सगुडं पीतं मलशोधनं कुरुते ॥ १४५ ॥

ಕಟುಕರೋಹಿಣಿ, ನೆಲ್ಲಿಕಾಯಿ ಸಿಪ್ಪೆ, ಅಮೃತ ಬಳ್ಳಿ, ಒಣಶುಂಠಿ, ಕೊಂದೆ ಚಿಗುರು, ಅಣಿಲೆಕಾಯಿ ಸಿಪ್ಪೆ, ಇವುಗಳ ಕಷಾಯವು ಮಲ ಶೋಧನೆ ಉಂಟುಮಾಡುತ್ತದೆ.

पटोलमूलैरण्डदन्ती श्रेष्ठेक्षुकुम्भकैः ।
शुण्ठीगुडूचीयुक्तैश्च पूतीशम्याकपल्लवैः ॥ १४६ ॥
ससिन्धूत्थगुडं क्वाथं विरेकार्थं प्रशस्यते ।

ಕಾಡುಪಡವಲ ಬೇರು, ಸಣ್ಣ ಹರಳು ಬೇರು, ನಾಗದಂತೀ ಬೇರು, ತ್ರಿಫಲೆಗಳು, ರಸದಾಳಿ ಕಬ್ಬಿನ ಬೇರು, ತ್ರಿಗಡೆ, ಒಣಶುಂಠಿ, ಅಮೃತಬಳ್ಳಿ ಕೊಂದೆಚಿಗುರು, ಇವುಗಳ ಕಷಾಯಕ್ಕೆ ಬೆಲ್ಲ, ಇಂದುಪ್ಪು, ಈ ಎರಡು ಬಗೆ ಮೇಲ್ಪುಡಿ ಸೇರಿಸಿ ಸೇವಿಸಿದರೆ ಮಲಶೋಧನೆಗೆ ಪ್ರಶಸ್ತ.

अशीतिर्वातरोगेषु धान्याम्लं सुनिवेशयेत् ॥ १४७ ॥
शुभे मुहूर्ते नक्षत्रे सुगृहे कलशं न्यसेत् ।
तस्मिन्नेतांश्च सम्भारांन्निक्षिपेन्मतिमान् भिषक् ॥ १४८ ॥
तण्डुलस्य दशप्रस्थं पृथुकस्य तथैव च ।
कुलत्थस्य तथा लाजाश्चत्वारिंशन्न्यसेत्पुनः ॥ १४९ ॥
आढकं कङ्गुबीजानां कोद्रवस्य च तण्डुलान् ।
चतुःप्रस्थं क्षिपेत्पश्चात् द्विप्रस्थं नागरस्य तु ॥ १५० ॥
कंसं दन्तशठाल्लूनां दीप्यकं कुडुबाष्टकम् ।
उष्णोदकस्य द्विशतप्रस्थं क्षिप्त्वातिरोदधेत् ॥ १५१ ॥
तस्य तद्वदनं बध्वा परितोऽग्निं प्रवर्तयेत् ।
आसप्तदिवसादेव मष्टमे दिवसे पुनः ॥ १५२ ॥
धान्याम्लमस्मादाकृष्य पुनरुष्णोदकं क्षिपेत् ।
आतुरं स्निग्धसर्वाङ्गं तदा तत्रावगाहयेत् ॥ १५३ ॥
मात्राणां षट्सहस्राणि परमः काल उच्यते ।

["ದಕ್ಷಸ್ತ್ರೀರ್ಥಾರ್ಥಶಾಸ್ತ್ರಾರ್ಥೋ ದೃಷ್ಟಕರ್ಮಾ ಶುಚಿರ್ಭಿಷಕ್, ಅಷ್ಟಾಂಗ ಹೃದಯ,] ಬುದ್ಧಿವಾನ್ ಆಗಿರುವ ವೈದ್ಯನು ೮೦ ವಿಧದ ವಾತ ರೋಗಗಳ ನಿವಾರಣೆಗೋಸ್ಕರ ಶುಭಮುಹೂರ್ತ ಶುಭನಕ್ಷತ್ರದಲ್ಲಿ ಮತ್ತು ಯೋಗ್ಯವಾದ ಗೃಹದಲ್ಲಿ ಶುಚಿಯಾದ ಪಾತ್ರವನ್ನಿಟ್ಟು, ಕೆಳಗೆ ತೋರುವ ಪದಾರ್ಥಗಳನ್ನು ಕಾಣುವ ಪ್ರಮಾಣಗಳಂತೆ ಸೇರಿಸಬೇಕು. ಬೆಳತಿಗೆ ಅಕ್ಕಿಕಾಳು ಪ್ರಸ್ಥ ೧೦, ಅವಲಕ್ಕಿ ಪ್ರಸ್ಥ ೧೦, ಹುರುಳಿ ಕಾಳು ಪ್ರಸ್ಥ ೧೦, ಲಾಜ (ಹೊದಳು) ಪ್ರಸ್ಥ ೧೦, ನವಣೆ ಅಕ್ಕಿ (ಕಂಗು ಬೀಜ ತಿಸಯುರಿ) ಪ್ರಸ್ಥ ೪, ಕೋದ್ರುವ (ವರಕರಿ) ಪ್ರಸ್ಥ ೪, ಒಣಶುಂಠಿ ಪ್ರಸ್ಥ ೨, ನಿಂಬೆ ಹುಳಿ (ಚೆರುನಾರಂಗ) ಪ್ರಸ್ಥ ೪, ಓಮುಕಾಳು ಪ್ರಸ್ಥ ೨, ಇವುಗಳ ನ್ನೆಲ್ಲಾ ಬೇರೆ ಬೇರೆಯಾಗಿ ವಸ್ತ್ರದಿಂದ ಬಂಧಿಸಿ (ಕಿಯಿಕ್ಕೆಟ್ಟಿ) ಹಿಂದೆ ಹೇಳಿದ ಪಾತ್ರದಲ್ಲಿ ಇಟ್ಟು, ೨೦೦ ಪ್ರಸ್ಥ ಬಿಸಿನೀರು ಹಾಕಿ, ಬಾಯಿ ಯನ್ನು ಕಟ್ಟಿ, ಸುತ್ತಲೂ ಬೆಂಕಿಹಾಕಿ ಮಂದವಾಗಿ ಕುದಿಸಬೇಕು. ಈ ಪ್ರಕಾರ ಏಳು ದಿನಗಳ ವರೇಗೆ ಅಶುದ್ಧವಾಗದಂತೆ ಅತಿ ಜಾಗರೂಕತೆ ಯಿಂದ, ಪ್ರತಿದಿನ ಪ್ರಾತಃಕಾಲ ನೋಡುತ್ತಿರಬೇಕು. ಅನಂತರ ಎಂಟನೇ ದಿನ ಪ್ರಾತಃಕಾಲ ಅಗತ್ಯವಿದ್ದಷ್ಟು ಕಾಡಿ ಜಲ ತೆಗೆದು, (ಅದಕ್ಕೆ ಬದಲಿಗೆ ಪುನಃ ಅಷ್ಟೆ ಬಿಸಿನೀರು ಹಾಕಬೇಕು.) ಆ ಮೇಲೆ ರೋಗಿಯ ಶರೀರದ ಸರ್ವಾಂಗಕ್ಕೂ ಯೋಗ್ಯ ತೈಲಗಳಿಂದ ಲೇಪಿಸಿ ದೋಣಿಯಲ್ಲಿ ಬಿಸಿಯಾದ ಕಾಡಿಜಲವನ್ನು ಹಾಕಿ, ಅದರಲ್ಲಿ ೩ ೩/೪ ಮೂರುಮುಕ್ಕಾಲು ಘಳಿಗೆ (೬೦೦೦ ಮಾತ್ರಾ) ರೋಗಿಯನ್ನು ಇರಿಸಬೇಕು. ಕಾಡಿಜಲವು ಬಿಸಿಯಾರಿ ತಣಿದು ಹೋಗದಂತೆ ಪರಾಂಬರಿಸುತ್ತಿರಬೇಕು. ಹೀಗೆ ಶರೀರವನ್ನು ಸ್ವೇದಿಸಿ ಸ್ನಾನಮಾಡಿಸಿ, ಶುಚಿಯಾದ ಬಟ್ಟೆಯಿಂದ ಒರೆಸಬೇಕು. ಮರುದಿನ ಸರ್ವಾಂಗ ಧಾರೆ. ಅದರ ಮರುದಿವಸ ಕಾಡಿಯಲ್ಲಿ ಇರಿಸು ವಿಕೆ, ಈ ಪ್ರಕಾರ ೧೪ ದಿನ ಧಾರೆಯೂ, ೧೪ ದಿನ ಕಾಡಿಯಲ್ಲಿರಿಸುವಿಕೆ ಯೂ, ಕೂಡಿ ೨೮ ದಿನಗಳು ಕಳೆದ ಮೇಲೆ, ಅಗ್ನಿಬಲಕ್ಕನುಸರಿಸಿ, ರೋಗಾನುಸಾರ ಕಾಸಿ ಪಕ್ವಮಾಡಿದ ತುಪ್ಪವನ್ನು, ರೋಗಿಗೆ ಸೇವನೆ ಮಾಡಿಸಬೇಕು. ದೇಹಬಲವು ಕಡಿಮೆಯಾಗಿದ್ದರೆ ಕಡಿಮೆ ಪ್ರಮಾಣದಲ್ಲಿ

ಸೇವನೆ ಮಾಡಿಸಬೇಕು. ಹೀಗೆ ಕಾಡಿಜಲದಲ್ಲಿ ಇರಿಸತಕ್ಕ ವಿಧಿಯು. ಈ ವಿಧಿಯು ಸಕಲ ವಾತವ್ಯಾಧಿಗಳಿಗೂ, ಮೂಲ ರೋಗಗಳಿಗೂ, ಆಮಾಶಯದ ರೋಗರುಜಿಗಳಿಗೂ ಹಿತಕಾರಿಯು. ಕಾಡಿಯನ್ನು ಹಾಕುವ ದೋಣಿಯ ಪ್ರಮಾಣ (ಉದ್ದ ೨ಕೋಲು, ಅಗಲ $\frac{೧}{೨}$ ಕೋಲು, ಆಳ ೧ ಕೋಲು)

पिप्पलीपिप्पलीमूलचव्यचित्रकनागरैः ॥
यवागूर्दीपनीया स्यात् शूलघ्नी चोपसाधिता ॥ १५४ ॥

ಹಿಪ್ಪಿಲಿ, ಕಾಡುಹಿಪ್ಪಿಲಿ ಬೇರು, ಕಾಡುಮೆಣಸಿನ ಬೇರು, ಚಿತ್ರ ಮೂಲ ಬೇರು (ಶುದ್ಧಿ), ಒಣಶುಂಠಿ ಇದರಿಂದ ಮಾಡಲ್ಪಟ್ಟ ಗಂಜಿಯು ಶೂಲಹರ. ದೀಪನವನ್ನೂ ಉಂಟುಮಾಡುತ್ತದೆ.

तालपर्णी बलाबिल्वैः पृश्निपर्ण्या च साधिता ।
दाडिमाम्ला हिता पेया कफपित्तातिसारिणाम् ॥ १५५ ॥

ನೆಲತಾಳಿ ಗಡ್ಡೆ, ಕಡಿರಬೇರು, ಬಿಲ್ವಪತ್ರೆ ಬೇರು, ಮೂರೆಲೆ ಬೇರು, ದಾಳಿಂಬದ ಸಿಪ್ಪೆ, ಇವುಗಳ ಪೇಯವು ಕಫಾತಿಸಾರ, ಪಿತ್ತಾತಿಸಾರ, ಶಮನ ಮಾಡುವುದು.

पयस्यर्धोदके छागे ह्रीबेरोत्पलनागरैः ।
पेया रक्तातिसारघ्नी पृश्निपर्णी रसान्विता ॥ १५६ ॥

ಆಡಿನ ಹಾಲಿಗೆ ಅರ್ಧಾಂಶ ನೀರು ಸೇರಿಸಿ ಇರುವೇರಿದಂಡು, ನೆಲ ಸಂಪಿಗೆ ಗಡ್ಡೆ, ಒಣಶುಂಠಿ, ಮೂರೆಲೆ ಬೇರು, ಇದರ ಗಂಜಿಯು ರಕ್ತಾ ತಿಸಾರ ಶಮನ ಮಾಡುತ್ತದೆ.

श्वदंष्ट्राकण्टकारीभ्यां मूत्रकृच्छ्रे सफाणितम् ॥

ನಾಯಿಸೊಣಗು ಬೇರು, ಕಂಟಕಾರಿ ಬೇರು, ಫಾಣಿತವಾಗಲಿ, ಕಷಾಯವಾಗಲಿ ಮೂತ್ರಕೃಚ್ಛ್ರ ರೋಗವನ್ನು ಹೋಗಲಾಡಿಸುವುದು.

विडङ्गपिप्पलीमूल शिग्रुभिर्मरिचेन च ।
तक्रसिद्धा यवागूः स्यात् क्रिमिघ्नी ससुवर्चिका १५७ ॥

ವಿಶಾಲರಿ, ಕಾಡುಹಿಪ್ಪಲಿ ಬೇರು, ನುಗ್ಗೆ ಬೇರು, ಕರಿಮೆಣಸು, ತುವರ್ಚಿಲಕ್ಷಾರತಕ್ರ, ಇವುಗಳ ಗಂಜಿ ಕ್ರಿಮಿಗಳ ಉಪದ್ರವವನ್ನು ಹೋಗಲಾಡಿಸುವುದು.

दशमूलश्रृता पेया कासश्वासरुजापहा ॥ १५८ ॥

ದಶಮೂಲಂಗಳ ಕಷಾಯದಿಂದ ಮಾಡಿದ ಪೇಯವು ಕಾಸಶ್ವಾಸ ಹರ.

ताम्रचूडरसे सिद्धा स्रोतोमार्गरुजापहा ।
समाषविदळा वृष्या घृतक्षीरोपसाधिता ॥ १५९ ॥

ಕೋಳಿಯ ಮಾಂಸ ರಸದಿಂದ ತಯಾರಿಸಿದ ಕ್ಷೀರವಾಗಲೀ, ಘೃತವಾಗಲೀ ಅಥವಾ ಕಾಟುದ್ದು ಬೇರು, ಕಾನಾಂಚಿ ಇವುಗಳ ಕಷಾಯದಿಂದ ತಯಾರಿಸಿದ ಘೃತವಾಗಲಿ ಸ್ರೋತಸ್ಸುಗಳಲ್ಲಿರುವ ವೇದನೆ ಶಮಿಸಿ ಶುಕ್ಲ ವೃದ್ಧಿಯನ್ನುಂಟುಮಾಡುವುದು.

धात्रीरसस्य स्वरसेन रम्भाफलं ।
मधूढं ससितं पिबेद्वा ।
सिता मधूढं मधुकं विदारीं ।
माषं च दुग्धैस्सह सोमरोगे ॥ १६० ॥

ನೆಲ್ಲಿಕಾಯಿಯ ಸ್ವರಸಕ್ಕೆ ಬಾಳೆಹಣ್ಣು, ಜೇನುತುಪ್ಪ, ಸಕ್ಕರೆ, (೧) ಜ್ಯೇಷ್ಠ ಮಧು, ನೆಲಕುಂಬುಳ ಗಡ್ಡೆ, ಕಾಟುದ್ದು ಬೇರು, (೨) ಇವುಗಳ

ಕಷಾಯಕ್ಕೆ ಹಾಲು ಸೇರಿಸಿ ಸೇವಿಸುವುದರಿಂದ, ಈ ಎರಡು ವಿಧದ ಔಷಧಿಗಳೂ ಸೋಮರೋಗವನ್ನು ನಿವೃತ್ತಿಸಡಿಸುವುದು.

धात्रीमाषद्विदर्भाङ्घ्री साधिताम्बु सितायुतम् ।
सोमरोगे विदारीक्षु माषयष्टी श्रृताम्बु वा ॥ १६१ ॥

ನೆಲ್ಲಿಕಾಯಿ ಸಿಪ್ಪೆ, ಕಾಟುದ್ದು ಬೇರು, ದರ್ಭೆಯು, ಆಚ್ಚ್ದರ್ಭೆಯು ಇವುಗಳ ಕ್ವಾಥಕ್ಕೆ ನೆಲಕುಂಬುಳ ಗಡ್ಡೆ, ಕಬ್ಬು, ಕಾಟುದ್ದು ಬೇರು, ಜ್ಯೇಷ್ಠಮಧು ಇವುಗಳ ಕಷಾಯವು ಕೂಡಾ ಸೋಮರೋಗ ನಿವೃತ್ತಿ.

गुडूचीरोहिणी क्वाथः सितामधुसमन्वितः ।
संततादिज्वरं हन्याद्विशेषाद्रात्रिसंभवम् ॥ १६२ ॥

ಅಮೃತ ಬಳ್ಳಿ, ಕಟುಕರೋಹಿಣಿ, ಸಕ್ಕರೆ, ಇವುಗಳ ಕ್ವಾಥಕ್ಕೆ ಜೇನುತುಪ್ಪ ಸೇರಿಸಿ ಸೇವಿಸಲು ಸಂತತಾದಿ ವಿಷಮ ಜ್ವರಗಳಿಗೆ ಉತ್ತಮೌಷಧವು. ವಿಶೇಷತಃ ರಾತ್ರಿ ಸಂಭವಿಸುವ ಜ್ವರಗಳು ಕೂಡಲೇ ಉಪಶಮನ ಹೊಂದುವವು.



ಇತಿ ಸಹಸ್ರಯೋಗದರ್ಪಣದೊಳ್
ಕಷಾಯಯೋಗ ಪ್ರಕರಣವು
ಸಂಪೂರ್ಣವು.



# ॥ घृतयोगः ॥

# ಘೃತ ಯೋಗಗಳು:

## ॥ तिक्तक घृतम् ॥

पटोलनिंबकटुकदार्वीपाठादुरालभाः ।
पर्पटं त्रायमाणां च पलांशं पाचयेदपाम् ॥ १ ॥
द्व्याढकेऽष्टांशशेषेण तेन कर्षोन्मितैस्तथा ।
त्रायंतीमुस्तभूनिंबकलिङ्गकणचंदनैः ॥ २ ॥
सर्पिषो द्वादशपलं पचेत्तत्तिक्तकं जयेत् ।
पित्तकुष्टपरीसर्पपिटकादाहरुक्भ्रमान् ॥ ३ ॥
कण्डूं पांड्वामयान्गंडदुष्टनाडीव्रणापचीः ।
विस्फोटविद्रधीगुल्मशोफोन्मादमदानपि ॥ ४ ॥
हृद्रोगतिमिरव्यङ्गग्रहणीश्वित्रकामिलाः ।
भगंदरमपस्मारमुदरं प्रदरं गरम् ॥ ५ ॥
अर्शोऽस्रपित्तमन्यांश्च सुकृच्छ्रान् पित्तजान् गदान् ।

## ತಿಕ್ತಕ ಘೃತ

ಕಾಡುಪಡವಲ ಬಳ್ಳಿ, ಕಹಿಬೇವಿನ ತೊಗಟು, ಕಟುಕರೋಹಿಣಿ, ಮರದರಸಿನ ಸಿಪ್ಪೆ, ಪಾಡಾವಳಿ ಗಡ್ಡೆ, ಬಳ್ಳಿ ಉರುಸಣಿಗೆ ಬೇರು, ಪರ್ಪಾಟಕ ಹುಲ್ಲು, ಬ್ರಾಹ್ಮಿ ಇವು ಪ್ರತಿಯೊಂದು ಬಗೆಯು 1-1 ಪಲ ದಂತೆ, ಕಷಾಯಕ್ಕೆ ನೀರು ಕುತ್ತಿ 8, ಕುದಿಸಿ ಕುತ್ತಿ 1ಕ್ಕೆ ದನದ ತುಪ್ಪ ಪಲ 12, ಬ್ರಾಹ್ಮಿ, ಭದ್ರಮುಷ್ಟಿ, ಪುತ್ತುರಿಚ್ಚುಂಡ, ಕೊಡಗಪಾಲಯರಿ, ಹಿಪ್ಪಲಿ, ಚಂದನ, ಇವು 3 ಕೈಂಜಿ, ಒಣಗಿಸಿ ಚೂರ್ಣ ಮಾಡಿ ಕಲ್ಕ ಸೇರಿಸಿ ಪಾಕದಲ್ಲಿ ಇಳಿಸಿ ½ತೊಲೆಯಿಂದ 1ತೊಲೆ ವರೇಗೆ ಸೇವಿಸಿದರೆ ಪಿತ್ತ, ಕುಷ್ಠ, ವಿಸರ್ಪ ಕುರು, ದಾಹ, ಭ್ರಮ, ಪಾಂಡು, ಗಂಡರೋಗ,

ನಾಡೀವ್ರಣ, ಅಪಚೀ, ವಿಸ್ಫೋಟ, ವಿದ್ರಧಿ, ಗುಲ್ಮ, ಶೋಫ, ಉನ್ಮಾದ, ಹೃದ್ರೋಗ, ತಿಮಿರ, ವ್ಯಂಗ, ಗ್ರಹಣೀ, ಶ್ವಿತ್ರ, ಕಾಮಿಲ, ಭಗಂದರ, ಅಪಸ್ಮಾರ, ಉದರಾಮಯ, ಪ್ರದರ, ಅರ್ಶಸ್ಸು, ರಕ್ತಪಿತ್ತ, ಇವುಗಳನ್ನು ಶಮನ ಮಾಡುವುದು. ಯುಕ್ತವಾದ ಪಥ್ಯದಿಂದಿರಬೇಕು.

॥ महातिक्तकघृतम् ॥

सप्तच्छदः पर्पटकः शम्याकः कटुका वचा ॥ ६ ॥
त्रिफला पद्मकं पाठा रजन्यौ सारिवे कणे ।
निंबचंदनयष्ट्याह्वविशालेंद्रयवामृतम् ॥ ७ ॥
किरातं तिक्तकं सेव्यं वृषो मूर्वा शतावरी
पटोलातिविषामुस्तास्त्रायंती धन्वयासकम् ॥ ८ ॥
तैर्जलेऽष्टगुणे सर्पिः द्विगुणामलकीरसम् ।
सिद्धं तिक्तान्महातिक्तं गुणैरभ्यधिकं मतम् ॥ ९ ॥

## ಮಹಾತಿಕ್ತಕ ಘೃತ

ಹಾಲೆ ಮರದ ತೊಗಟು, ಪರ್ಪಟಕ ಹುಲ್ಲು, ಕೊಂದೆ ತೊಗಟು, ಕಟುಕರೋಹಿಣೀ, ಬಜೆ, ತ್ರಿಫಲೆ, ಪದ್ಮಕಾಷ್ಠ, ಪಾಡಾವಳಿಗಡ್ಡೆ, ಅರಸಿನ, ಮರದರಸಿನ ಸಿಪ್ಪೆ, ನಾಮದಬೇರು, ಹಾಲುಬಳ್ಳಿ ಬೇರು, ಹಿಪ್ಪಲಿ, ಆನೆ ಹಿಪ್ಪಲಿ, ಕಹಿಬೇವಿನ ಕೆತ್ತೆ, ಚಂದನ, ಜ್ಯೇಷ್ಠಮಧು, ಕಾಡುಸೌತೆ ಬೇರು, ಕೊಡಗಪಾಲರಿ, ಅಮೃತ ಬಳ್ಳಿ, ಪುತ್ತರಿಚ್ಚುಂಡ ಬೇರು, ಲಾಮಂಚ, ಆಡ್ಸೋಗೆ ಬೇರು, ಪೆರಿಕುರುಂಬ, ಶತಾವರಿ ಬೇರು, ಕಾಡುಪಟವಲ ಬಳ್ಳಿ, ಅತಿವಿಡಯು, ಭದ್ರಮುಷ್ಟಿ, ಬ್ರಾಹ್ಮಿ, ಪಚ್ಚಂಗ್ರಿ ಬೇರು, ಇವು 1-1 ಪಲ, ನೀರು ಕುತ್ತಿ 32 ಕುದಿಸಿ ಕುತ್ತಿ 4, ದನದ ತುಪ್ಪ ಕುತ್ತಿ 2, ಹಸಿ ನೆಲ್ಲಿಕಾಯಿ ರಸ ಕುತ್ತಿ 4, ಮೇಲೆ ಹೇಳಿದ ಕಷಾಯದ ಮದ್ದುಗಳೇ ಕಲ್ಕ. ಈ ಕಲ್ಕದ ಮದ್ದುಗಳನ್ನು ಒಣಗಿಸಿ ಚೂರ್ಣ ಮಾಡಿ ಕಲ್ಕ ನೇರಿಸಿ ಪಾಕದಲ್ಲಿಳಿಸಿ ಸೇವಿಸಲು ಹಿಂದೆ ಹೇಳಿದ ತಿಕ್ತಕಘೃತದ ಗುಣಕ್ಕಿಂತ, ಈ ಮಹಾತಿಕ್ತಕ ಘೃತವು ಅಧಿಕವಾದ ಗುಣವನ್ನು ಕೊಡುವುದು.

॥ गुग्गुलुतिक्तकघृतम् ॥

निंबामृतावृषपटोलनिदिग्धिकानाम् ।
भागान् पृथक् दशपलान् विपचेद्घटेऽपाम् ।
अष्टांशशेषितरसेन पुनश्च तेन ।
प्रस्थं घृतस्य विपचेत्पिचुभागकल्कैः ॥ १० ॥
पाठाविडङ्गसुरदारुगजोपकुल्या ।
द्विक्षारनागरनिशामिशिचव्यकुष्ठैः ।
तेजोवतीमरिचवत्सकदीप्यकाग्नि ।
रोहिण्यरुष्करवचाकणमूलयुक्तैः ॥ ११ ॥
मंजिष्ठयातिविषया विषया यवान्या ।
संशुद्धगुग्गुलुपलैरपि पञ्चसंख्यैः ।
तत्सेवितं प्रधमति प्रबलं समीरम् ।
संध्यस्थिमज्जगतमप्यथ कुष्ठमीदृक् ॥ १२ ॥
नाडीव्रणार्बुदभगंदरगंडमाला ।
जत्रूर्ध्वसर्वगदगुल्मगुदोत्थमेहान् ।
यक्ष्मारुचिश्वसनपीनसकासशोफ- ।
हृत्पांडुरोगमदविद्रधिवातरक्तम् ॥ १३ ॥

## ಗುಗ್ಗುಲುತಿಕ್ತಕ ಘೃತ

ಕಹಿಬೇವಿನ ಕೆತ್ತೆ, ಅಮೃತಬಳ್ಳಿ, ಆಡ್ಸೋಗೆಬೇರು, ಕಾಡುಪಟವಲ ಬಳ್ಳಿ, ಕಿರಿಗುಳ್ಳಬೇರು ಇವು ಪ್ರತ್ಯೇಕಪ್ರತ್ಯೇಕ 5–5 ಪಲಗಳಂತೆ ಸೇರಿಸಿ 25 ಕುತ್ತಿ ಜಲದಲ್ಲಿ, ಎಂಟನೇ ಒಂದಂಶ ಬತ್ತಿಸಿ ಕುತ್ತಿ 3ಕ್ಕೆ ದನದ ತುಪ್ಪ ಕುತ್ತಿ 1, ಕಲ್ಕಕ್ಕೆ ಪಾಡಾವಳಿ ಗಡ್ಡೆ, ವಾಯುವಿಳಂಗ, ದೇವದಾರು, ಆನೆಹಿಪ್ಪಲಿ, ಯವಕ್ಷಾರ, ತುವರ್ಚಿಲ ಕ್ಷಾರ, ಒಣಶುಂಠಿ, ಅರಸಿನ, ಸತಾಪೆ, ಕಾಡುಮೆಣಸಿನ ಬೇರು, ಕಂಕುಷ್ಟ, ಚೆಪ್ಪುನ್ನಯರಿ, ಮೆಣಸು, ಕೊಡಗಪಾಲರಿ, ಓಮುಕಾಳು, ಚಿತ್ರಮೂಲ (ಶುದ್ಧಿ), ಕಟುಕರೋಹಿಣೀ, ಗಟ್ಟದಗೇರು (ಶುದಿ ಭಲ್ಲಾತಕ) ಬಜೆ, ಹಿಪ್ಲಿಮೂಲ, ಅರತ್ತೆ, ಮಂಜಿಷ್ಠ

ಕಡ್ಡಿ, ಅತಿವಿಡಯ, ವಿಡಯ, ಜೀರಿಗೆ, ಇವು ಪ್ರತಿಯೊಂದು ಕೈಂಜಿ ೩ ಮೂರು, ಶುದ್ಧ ಮಾಡಿದ ಗುಗ್ಗುಲು ಪಲ ಐದು, ಕಲ್ಕ ಮಾಡಿ ಸೇರಿಸಿ ಪಾಕಮಾಡುವದು. ಈ ಘೃತವು ಅತಿ ಪ್ರಬಲ ವಾತವನ್ನೂ, ಸಂಧಿ, ಅಸ್ಥಿ, ಮಜ್ಜಾಗತವಾದ ವಾತವನ್ನೂ ಮತ್ತು ಸಂಧ್ಯಾದಿಗತ ಕುಷ್ಠರೋಗ ವನ್ನೂ, ನಾಡೀವ್ರಣ, ಅರ್ಬುದ, ಭಗಂದರ, ಗಂಡಮಾಲಾ, ಕುತ್ತಿಗೆಯ ಮೇಲಿರುವ ಸಕಲವಿಧದ ರೋಗಗಳನ್ನೂ, ಗುಲ್ಮ, ಅರ್ಶಸ್ಸು, ಮೇಹ, ಯಕೃತ್ತು, ಅರುಚಿ, ಶ್ವಸನ, ಪೀನಸ, ಕಾಸ ರೋಗಗಳನ್ನೂ, ಶೋಷ, ಹೃದ್ರೋಗ, ಪಾಂಡುರೋಗ, ಮದ, ವಿದ್ರಧಿ, ವಾತರಕ್ತ ಈ ಮೊದಲಾದ ವ್ಯಾಧಿಗಳನ್ನೂ ಹೋಗಲಾಡಿಸಿ ಸುಖವನ್ನುಂಟುಮಾಡುವುದು.

॥ इंदुकांतघृतम् ॥

पूतीकदारुदशमूलकषायसिद्धं ।
सक्षीरषड्फलयुतं घृतमिंदुकांतम् ।
वातामयक्षयमहोदरगुल्मशूल ।
निम्नोन्नतज्वरहरं बलवर्धनम् च ॥ १४ ॥

## ಇಂದುಕಾಂತ ಘೃತ

ರಾವುಬೀಜದ ತೊಗಟು, ದೇವದಾರು. ದಶಮೂಲಂಗಳು ಇವುಗಳ ಕಷಾಯದಲ್ಲಿ ತುಪ್ಪ ಹಾಕಿ, ಹಿಪ್ಪಲಿ, ಹಿಪ್ಲಿಮೂಲ, ಕಾಡುಮೆಣಸಿನ ಬೇರು, ಚಿತ್ರಮೂಲಬೇರು (ಶುದ್ಧಿ), ಒಣಶುಂಠಿ, ಇಂದುಪ್ಪು, ಇವುಗಳನ್ನು ಕಲ್ಕ ಸೇರಿಸಿ, ತುಪ್ಪದಷ್ಟೆ ಹಾಲು ಸೇರಿಸಿ, ಪಾಕಮಾಡಿ ಇಳಿಸಿ, ಸೇವಿಸಲು ವಾತ, ಕ್ಷಯ, ಮಹೋದರ, ಗುಲ್ಮ, ಶೂಲ, ವಿಷಮಜ್ವರ ಶಮನ ಮಾಡಿ ಬಲವನ್ನು ವರ್ಧಿಸುವುದು.

॥ सुकुमारघृतम् ॥

पचेत्पुनर्नवतुलां तथा दश पलाः पृथक् ।
दशमूलपयस्याश्वगंधैरंडशतावरीः ॥ १५ ॥

द्विदर्भशरकासेक्षुमूलपोटगलान्विता:
वहेऽचाष्टमभागस्थे तत्र त्रिंशत्पलं गुडान् ॥ १६ ॥
प्रस्थमेरंडतैलस्य द्वौ घृतात्पयसस्तथा ।
आवपेत्द्विपलांशं च कृष्णातन्मूलसैंधवम् ॥ १७ ॥
यष्टीमधूकमृद्वीकायवानीनागराणि च ।
तत्सिद्धं सुकुमाराख्यं सुकुमारं रसायनम् ॥ १८ ॥
वातातपाध्वयानादिपरिहार्येष्वयंत्रणम् ।
प्रयोज्यं सुकुमाराणामीश्वराणां सुखात्मनाम् ॥ १९ ॥
नृणां स्त्रीवृंदभतृणामलक्ष्मीकलिनाशनम् ।
सर्वकालोपयोगेन कांतिलावण्यपुष्टिदम् ॥ २० ॥
वृद्धिविद्रधिगुल्मार्शोयोनिरोगानिलार्तिषु ।
शोफोदरखुडप्लीहाविड्विबंधेषु चोत्तमम् ॥ २१ ॥

## ಸುಕುಮಾರ ಘೃತ

ಪುನರ್ನವೆ ಬೇರು, ತುಲಾ 1 (ಪಲ 100) ದಶಮೂಲಂಗಳ ಪ್ರತ್ಯೇಕ ಪ್ರತ್ಯೇಕ 10 ಪಲ. ಬಾಗುಡಿಹೂವಿನ ಗಡ್ಡೆ, ಅಶ್ವಗಂಧಿ, ಸಣ ಹರಳು ಬೇರು, ಶತಾವರಿ ಬೇರು, ದರ್ಭೆ ಬೇರು, ಆಟ್ಟ್ ದರ್ಭೆ ಬೇರು ಆಮಬೇರು, ಕುಶ ಬೇರು, ಕಬ್ಬಿನ ಬೇರು, ಬೆಟ್ಟು ಕರಂಡೆ ಬೇರು, ಇವುಗಳ 10-10 ಪಲ ಕಷಾಯಕ್ಕೆ ನೀರು 150 ಕುತ್ತಿ, ಕುದಿಸಿ ಬತ್ತಿಸಿ ಕುತ್ತಿ 17½ಗೆ ಗುಡ ಪಲ 30, ಹರಳೆಣ್ಣೆ ಪ್ರಸ್ಥ 1, ದನದ ತುಪ್ಪ ಪ್ರಸ್ಥ 2, ಹಾಲು ಪ್ರಸ್ಥ 2 ಕಲ್ಕಕ್ಕೆ, ಹಿಪ್ಲಿ, ಕಾಡುಹಿಪ್ಪಿಲಿ ಬೇರು, ಇಂದುಪ್ಪು, ಜೇಷ್ಠಮಧು, ಇಪ್ಪೆ ತಿರುಳು, ದ್ರಾಕ್ಷೆ, ಕುರಾಶಾಣಿ ಓಮು, ಶುಂಠಿ 2 ಪಲದಂತೆ ಸೇರಿಸಿ ಒಣ ಗಿಸಿ ಚೂರ್ಣ ಮಾಡಿ ಕಲ್ಕ ಸೇರಿಸಿ ಸುಪಾಕದಲ್ಲಿಳಿಸಿ ಸೇವಿಸಬೇಕು ಸೇವಿಸಿದರೆ, ಸೌಂದರ್ಯವನ್ನೂ, ರಸಾದಿ ಧಾತು ಪೋಷಣೆಯನ್ನೂ, ಬುದ್ಧಿಗೆ ಸ್ಫುರಣಶಕ್ತಿಯನ್ನೂ, ಆರೋಗ್ಯಲಾಭವನ್ನೂ, ಶರೀರಕ್ಕೆ ಅತ್ಯಧಿಕ ಶಕ್ತಿಯನ್ನೂ, ಸುಸ್ಪಷ್ಟ ಸ್ವರವನ್ನೂ, ಇಂದ್ರಿಯಬಲವನ್ನೂ, ಉಂಟು ಮಾಡುವುದು. ಬಾಲಕರು, ಪ್ರಾಯಸ್ಥರು, ಸ್ತ್ರೀಯರು ಎಂಬ ಭೇದ

ವಿಲ್ಲದೆ ಸರ್ವರಿಗೂ ಇಚ್ಛಾನುಸಾರ ಸರ್ವ ಕಾಲದಲ್ಲಿಯೂ ಉಪಯೋಗಿಸ ಬಹುದು. ಅದಲ್ಲದೆ ಅಲಕ್ಷ್ಮಿ, ಕಲಿ, ಕಲ್ಮಷಗಳನ್ನು ನಾಶವಾಡಿ, ಕಾಂತಿ ಸೌಭಾಗ್ಯ ಪುಷ್ಟ್ಯಾಯುರಾರೋಗ್ಯಾಭಿವೃದ್ಧಿ ಯನ್ನೀಯುವುದು. ವೃದ್ಧಿ, ವಿದ್ರಧಿ, ಗುಲ್ಮ, ಅರ್ಶಸ್ಸ್, ಯೋನಿಶೂಲ, ಸಮಸ್ತ ವಾತಶೂಲ, ಮೇಢ್ರ ಶೂಲ, ಶೋಫ, ಉದರ, ಖುಡ, ಪ್ಲೀಹಾ, ಮಲಶೋಧನೆ ಸರಿ ಇಲ್ಲದಿರು ವಿಕೆ, ಮುಂತಾದ ರೋಗಗಳನ್ನು ಹೋಗಲಾಡಿಸಿ, ಉತ್ತಮ ಮತ್ತು ಸುಕೋಮಲವಾದ ಈ ಸುಕುಮಾರಘೃತವು ಅತ್ಯುತ್ತಮ ರಸಾಯನ ವೆಂದು ಪ್ರಸಿದ್ಧಿ ಹೊಂದಿರುವುದು.

॥ इक्षुदूर्वादिघृतम् ॥

इक्षुदूर्वामृताधात्री श्वदंष्ट्रा स्वस्तिकोद्भवे ।
स्वरसे नालिकेराम्बु पयोयुक्तैः सुकल्कितै ॥ २२ ॥
चातुर्जातपयोवृक्षमुकुलांबुपयोधरैः ॥
सारिवोशीरयष्ट्याह्वसितोपलहिमामयैः ॥ २३ ॥
सिद्धं घृतं नवं सम्यक् रक्तपित्तहरं परम् ।

## ಇಕ್ಷುದೂರ್ವಾದಿ ಘೃತ

ಕಬ್ಬು, ಕರಿಕೆ ಹುಲ್ಲು, ಅಮೃತ ಬಳ್ಳಿ, ನಸುಗುನ್ನಿ ಬೇರು, ನೀರಾರಿಲೆ, ಇವುಗಳ ಸ್ವರಸ ಕುತ್ತಿ 1, ದನದ ತುಪ್ಪ ಕುತ್ತಿ ½ ಎಳನೀರು ಕುತ್ತಿ ½, ಹಾಲು ಕುತ್ತಿ ½, ಏಲಕ್ಕಿ, ಲವಂಗ ಚೆಕ್ಕೆ, ತಮಾಲ ಪತ್ರೆ, ನಾಗಕೇಸರಿ ಅತ್ತಿ, ಅಶ್ವತ್ಥ, ಗೋಳಿ, ಕಿನ್ನಿ ಗೋಳಿ ಇವುಗಳ ಚಿಗುರು, ನಾಮದ ಬೇರಿನ ಸಿಪ್ಪೆ, ಇರಿವೇರಿದಂಡು, ಭದ್ರಮುಷ್ಟಿ, ಲಾಮಂಚ, ಜ್ಯೇಷ್ಠಮಧು, ಚಂದನ, ಕಂಕುಷ್ಠ, ಇವುಗಳು ಕ್ಠಂಚಿ 10ನ್ನು ಒಣಗಿಸಿ ಚೂರ್ಣ ಮಾಡಿ ಕಲ್ಕ ಸೇರಿಸಿ ಪಾಕ ಮಾಡಿ ಇಳಿಸಿ, ಕಲ್ಲುಸಕ್ಕರೆ ಪುಡಿ ಸೇರಿಸಿ ಸೇವಿಸಲು ರಕ್ತಪಿತ್ತ ರೋಗವು ಉಪಶಮನ ಹೊಂದುವುದು.

॥ धात्र्यादिघृतम् ॥

धात्रीविदारीक्षुशतावरीणां ।
कूष्मांडकानां स्वरसेषु सर्पिः ।

क्षीरेण सार्धं विपचेत्सुपिष्टैः ।
मृद्वीकयष्ट्याह्वयचंदनैश्च ॥ २४ ॥
एतत्सुसिद्धं सितया विमिश्रम् ।
निवारयेच्छीघ्रमसृग्दराणि ।
पांड्वामये पित्तकृते हितं स्यात् ।
पैत्ते च गुल्मेऽस्थिविनिसुतौ च ॥ २५ ॥
वंध्या च पीत्वा लभते च गर्भं, शीघ्रं निहन्यदपि वातरक्तम् ।
अन्यांश्च पित्तप्रभवान् विकारान्, मूर्च्छमदोन्मादमदात्ययादीन् ॥ २६

## ಧಾತ್ರ್ಯಾದಿ ಘೃತ

ಹಸಿ ನೆಲ್ಲಿಕಾಯಿ ರಸ, ಕುಂಬುಳು ಗಡ್ಡೆಯ ರಸ, ಕಬ್ಬಿನ ರಸ ಶತಾವರಿ ರಸ, ಕೂಷ್ಮಾಂಡ ರಸ, ಇವುಗಳ ಸ್ವರಸ ಕುತ್ತಿ 2, ದನದ ತುಪ್ಪ ಕುತ್ತಿ 1, ಹಾಲು ಕುತ್ತಿ 2, ಕಲ್ಕಕ್ಕೆ ದ್ರಾಕ್ಷೆ, ಜೇಷ್ಠಮಧು ಚಂದನ, ಕೈಂಚಿ 8–8 ಸೇರಿಸಿ ಪಾಕ ಮಾಡಿ ಇಳಿಸಿ ಸಕ್ಕರೆ ಸೇರಿಸಿ ಸೇವಿಸಲು, ಅಸೃಗ್ದರ ರೋಗ, ಪಿತ್ತಪಾಂಡು, ಪಿತ್ತಗುಲ್ಮ, ಪಿತ್ತಾಸ್ಥಿಸ್ರಾವ, ವಾತರಕ್ತ, ಪಿತ್ತದಿಂದುಂಟಾದ ಮೋಹಾಲಸ್ಯ, ಮದ, ಉನ್ಮಾದ, ಮದಾತ್ಯಯಗಳಿಗೆ ಹಿತಕರ. ಪ್ರಸವಿಸದ ಸ್ತ್ರೀಯರು ಸೇವಿಸಿದರೆ ಗರ್ಭ ಉಂಟಾಗುವುದು.

॥ वाराह्यादिघृतम् ॥

वाराह्याः कंदतोये घृतममृतसमं सेव्यमानाविपक्वम् ।
नारीजह्यान्सुघोरं हुतवहसदृशं व्याधिमस्थुद्भवं वा ॥ २७ ॥
द्राक्षामाषाश्वगंधा कदलिफलयुतं शर्करावाशिमिश्रम् ।
देवेन स्वर्गभैत्रों विहितमनुपमं स्वर्गसीमांतिनीनाम् ॥ २८ ॥

## ವಾರಾಹ್ಯಾದಿ ಘೃತ

ನೆಲತಾಳಿ ಗಡ್ಡೆಯ ಸ್ವರಸ ಕುತ್ತಿ 2 (ಕಷಾಯದಲ್ಲಿ), ತುಪ್ಪ ಕುತ್ತಿ ಅರ್ಧ, ಪಾಕಮಾಡಿ ಇಳಿಸಿ, ದ್ರಾಕ್ಷೆ, ಉದ್ದು, ಅಶ್ವಗಂಧಿ, ಕದಳೀಫಲ, ವಂಶಲೋಚನ, ಕಲ್ಕ ಸೇರಿಸಿ ಸ್ತ್ರೀಯರು ಸೇವಿಸಿದರೆ ಅಸ್ಥಿ

ಸ್ರಾವ ಮೊದಲಾದ ರೋಗಗಳು ಶಮನ. ಸ್ವರ್ಗಲೋಕದ ಒಡೆಯನಾದ ಇಂದ್ರನಿಂದ ದೇವನಾರಿಯರ ಕ್ಷೇಮಾಭಿವೃದ್ಧಿಗೋಸ್ಕರ ಅನುಪಮವಾದ ಈ ಘೃತವು ಉಪದೇಶಿಸಲ್ಪಟ್ಟಿರುವುದು.

॥ मोदकत्वगादिघृतम् ॥

मोदकत्वक्बलाटूकातालनिर्गुडिकाजपा ।
विपचेत्पादशिष्टेन तेन प्रस्थं घृतात्पचेत् ॥ २९ ॥

कुहळयाश्च जपापुष्पाद्रसेन पयसा युतम् ।
अश्वगंधावरीकृष्णामृद्वीकायष्टिचंदनैः ॥ ३० ॥

सिताम्रुक्याद्रिजयुतैः कल्कैरेतांश्च साधयेत् ।
असृग्दरं निहन्यात्तदस्थिस्रावं च दारुणम् ॥ ३१ ॥

## ಮೋದಕತ್ವಗಾದಿ ಘೃತ

ಕರಿಂಗಾರ ಚಕ್ಕೆ, ಕಡಿರಬೇರು, ತಾತಾರ್ನವಲ ಬೇರು, ಕರಿಂಬನ ಬೇರು, ಇವು ಪ್ರತಿಯೊಂದು ಬಗೆಯೂ 1–1 ಪಲ, ನೀರು ಕುತ್ತಿ 6, ಬತ್ತಿಸಿ ಕುತ್ತಿ 1½, ಕರಿನೆಕ್ಕಿ ಬೇರು, ಬಿಳಿ ದಾಸಾಳ ಬೇರು, ತೆಂಗಿನ ಪುಷ್ಪ, ಬಿಳಿ ದಾಸಾಳ ಪುಷ್ಪ, ಇವುಗಳ ಸ್ವರಸ ಕುತ್ತಿ ½, ದನದ ತುಪ್ಪ ಕುತ್ತಿ ½, ಕಲ್ಕಕ್ಕೆ, ಅಶ್ವಗಂಧಿ, ಶತಾವರಿ, ಹಿಪ್ಲಿ, ದ್ರಾಕ್ಷೆ, ಜ್ಯೇಷ್ಠಮಧು, ಚಂದನ, ಸಕ್ಕರೆ, ಏಲಕ್ಕಿ, ಕಾವಿಮಣ್ಣು ಇವುಗಳ ಕಲ್ಕ ಸೇರಿಸಿ ಕಾಸಿ ಇಳಿಸಿ, ಸೇವಿಸಿದರೆ ಅಸೃಗ್ದರ, ಅಸ್ಥಿಸ್ರಾವ ಶಮನ.

॥ २ वाराह्यादिघृतम् ॥

वाराहीकंदखदिरजंबूमोदकवल्कलात् ।
तुलां पचेत सबलात्क्षुण्णात्कुंभेऽभसः पुनः ॥ ३२ ॥

पादशिष्टे कषायेऽस्मिन् घृतप्रस्थं विपाचयेत् ।
सुनिष्णशतावर्यास्तोयं क्षीरं च निक्षिपेत् ॥ ३३ ॥

कपित्थफलिनीधान्यधन्वयाषकशेरुकम् ।
पाठाफलत्रयाम्रास्थिशिलाह्वेदं रसाञ्जनम् ॥ ३४ ॥
खर्जूरं कट्फलं शुंठी मृद्वीका रक्तचंदनम् ।
अंबष्टका मोचरसं समंगा पद्मकेसरम् ॥ ३५ ॥
कट्वङ्गवत्सकानंता धातकी मधुकाञ्जनम् ।
दाडिमातिविषामुस्ता लोध्रं बिल्वं सगैरिकम् ॥ ३६ ॥
पिप्पलीमश्वगंधां च सारिबोशीरपुंड्रकैः ।
तत्सिद्धं सितयोपेतं मधुमात्रासमन्वितम् ॥ ३७ ॥
सर्पिर्जयेद्योनिरोगं पानबस्त्यादियोजितम् ।

## 2ನೇ ನಾರಾಹ್ಯಾದಿ ಘೃತ

ನೆಲತಾಳಿ ಗಡ್ಡೆ, ಕಾಚಿ ತಿರುಳು, ನೇರಳೆ ತೊಗಟು, ಕರಿಂಗಾರ ಕೆತ್ತೆ, ಕಡಿರಬೇರು ಕಷಾಯ, ನೀರಾರಿಲೆ, ಶತಾವರಿ ರಸ, ಹಾಲು, ಕಲ್ಲಕ್ಕೆ, ಕಪಿತ್ಥ, ನೇರಳೆ ಹೂ, ಕೊತ್ತಂಬರಿ, ಪಚ್ಚೆಂಗ್ರಿ ಬೇರು, ಕರಿ ಭದ್ರಮುಷ್ಟಿ, ಪಾಡಾವಳಿ ಗಡ್ಡೆ, ತ್ರಿಫಲೆಗಳು, ಮಾವಿನ ಹಣ್ಣಿನೊಳಗಿನ ಬೀಜ, ಕಲ್ಲೂರ್ವಂಜಿ ಬೇರು, ರಸಾಂಜನ, ಖರ್ಜೂರ, ಕುಂಬುಳು ಬೇರು, ಒಣಶುಂಠಿ, ದ್ರಾಕ್ಷೆ, ರಕ್ತಚಂದನ, ಬಿಳಿಅಂಬಟೆ ತೊಗಟು, ಆಲದ ಮಯಣ, ಪರಚ್ಚುಂಡ ಬೇರು, ತಾವರೆ ಕುಸುಮ, ಆನೆಮುಂಗು ಬೇರು, ಕೊಡಗಪಾಲರಿ, ಆಣಿಲೆಕಾಯಿ ಸಿಪ್ಪೆ, ಧಾತಕೀ ಕುಸುಮ, ಜ್ಯೇಷ್ಠ ಮಧು, ಅಂಜನಕಲ್ಲು, ದಾಳಿಂಬ ಸಿಪ್ಪೆ, ಅತಿವಿಡಯ, ಭದ್ರಮುಷ್ಟಿ, ಪಾಜೋಟಿ ಕೆತ್ತೆ, ಬಿಲ್ವಪತ್ರೆ ಬೇರು, ಕಾವಿ ಮಣ್ಣು, ಹಿಪ್ಪಲಿ, ಅಶ್ವಗಂಧಿ, ನಾಮದ ಬೇರಿನ ಸಿಪ್ಪೆ, ಲಾಮಂಚ, ಪುಂಡರೀಕ ಕಬ್ಬು, ಕಲ್ಕ ಸೇರಿಸಿ ಪಾಕಮಾಡಿ ಗಾಳಿಸಿ ಸಕ್ಕರೆ, ಜೇನುತುಪ್ಪ ಸೇರಿಸಿ ಪಾನಬಸ್ತ್ಯಾದಿಗಳಿಂದ ಯೋನಿ ರೋಗಗಳನ್ನು ನಾಶಮಾಡುವುದು.

॥ वृषघृतम् ॥

समूलपत्रांकुरपल्लवस्य वृषस्य सिद्धं स्वरसे विपक्वम् ।
तत्पुष्पकल्कं घृतमाशु हन्यात् समाक्षिकं श्वासमशेषकासम् ॥ ३८ ॥

## ವೃಷಘೃತ

ಆಡ್ಸೋಗೆಯ ಬೇರು, ಎಲೆ, ಚಿಗುರು ಎಲ್ಲಾ ಸೇರಿಸಿ, ಕಷಾಯ ಮಾಡಿ, ಆಡ್ಸೋಗೆ ಎಲೆಯ ಸ್ವರಸವನ್ನು ಕೂಡಿಸಿ ಆಡಲೋಡಕ ಪುಷ್ಪದ ಕಲ್ಕ ಹಾಕಿ, ದನದ ತುಪ್ಪ ಪಾಕಮಾಡಿ ಇಳಿಸಿ ಸೇವಿಸಿದರೆ ಎಲ್ಲಾವಿಧದ ಶ್ವಾಸಕಾಸ ರೋಗಗಳು ಉಪಶಮನ ಹೊಂದುವವು.

॥ २ वृषघृतम् ॥

समूलमस्तकं क्षुण्णं वृषमष्टगुणेऽम्भसि ।
पक्त्वाष्टांशावशेषेण घृतं तेन विपाचयेत् ॥ ३९ ॥
तत्पुष्पकल्कं तच्छीतं सक्षौद्रं पित्तशोणितम् ।
पित्तगुल्मज्वरश्वासकासहृद्रोगकामिलाम् ॥ ४० ॥
तिमिरभ्रमवीसर्पस्वरसादांश्च नाशयेत् ।

## 2ನೇ ವೃಷಘೃತ

ಆಡ್ಸೋಗೆಯ ಬೇರು, ದಂಡು, ಎಲೆ ಇವನ್ನು ಚೆನ್ನಾಗಿ ಜಜ್ಜಿ ಅಷ್ಟ ಗುಣಜಲದಲ್ಲಿ ಕಷಾಯ ಮಾಡಿ, ಅದರ ಪುಷ್ಪವನ್ನೇ ಕಲ್ಕ ಮಾಡಿ, ಹಾಲು ಸೇರಿಸಿ ತುಪ್ಪ ಹಾಕಿ ಪಾಕ ಮಾಡಿ ಶೀತವಾದ ಮೇಲೆ ಜೇನುತುಪ್ಪ ಹಾಕಿ ಸೇವಿಸಿದರೆ ಪಿತ್ತಶೋಣಿತ, ಪಿತ್ತಗುಲ್ಮ, ಶ್ವಾಸಕಾಸ, ಹೃದ್ರೋಗ, ಕಾಮಿಲಾ ರೋಗ, ತಿಮಿರ, ಭ್ರಮ ವಿಸರ್ಪ, ಸ್ವರಸಾದ ಇವುಗಳ ನಾಶಕ್ಕೆ ಹಿತಕಾರಿಯು.

॥ निर्गुंड्यादिघृतम् ॥

निर्गुंडीपत्रनिर्यासे साधितं कासजित् घृतम् ॥ ४१ ॥

## ನಿರ್ಗುಂಡ್ಯಾದಿ ಘೃತ

ಕರಿನೆಕ್ಕಿ ಎಲೆಯ ಸ್ವರಸದಿಂದ ಮಾಡಿದ ಘೃತವು ಕಾಸರೋಗಕ್ಕೆ ಉತ್ತಮ.

॥ दशांगघृतम् ॥

चित्रबिल्वविडङ्गवर्हिहिंस्रा ।
त्रिफलाव्योषसमन्विते कषाये ।
अमृतावृषकंटकारिकार्नां ।
विपचेत्सर्पिरनुत्तमं दशांगम् ॥ ४२ ॥
क्षयगुल्मारुचिशूलकासहिक्का ।
गुदजानां च विनाशनं प्रधानम् ।

## ದಶಾಂಗ ಘೃತ

ಅವಿಲ್‌ಕುರು, ವಾಯುವಿಳಂಗ, ಚಿತ್ರಮೂಲ (ಶುದ್ಧಿ). ಜಟಮಾಂಸಿ, ಅಣಲೆಕಾಯಿ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಕಮೆಣಸು, ಹಿಪ್ಪಲಿ, ಶುಂಠಿ, ಇವುಗಳ ಕಲ್ಕ, ಅಮೃತಬಳ್ಳಿ, ಆಡ್ಸೋಗೆ ಬೇರು, ಕಂಟಕಾರಿಗಳ ಕಷಾಯದಲ್ಲಿ ಘೃತ ಪಾಕಮಾಡಿ ಸೇವಿಸಲು ಕ್ಷಯ, ಗುಲ್ಮ, ಅರುಚಿ, ಶೂಲ, ಕೆಮ್ಮು, ಹಿಕ್ಕಾ, ಅರ್ಶಸ್ಸ್ ಇವುಗಳ ವಿನಾಶನಕ್ಕೆ ಪ್ರಧಾನ.

॥ शशवासादिघृतम् ॥

शशवासारसक्षीरे पृथगाढकसंमिते ।
दारुवेल्लाश्वगंधाब्दहरिद्रा जीवकर्षभौ ॥ ४३ ॥
मधूलिकाकणारास्नाश्रृङ्गीभार्ङ्गीसगोस्तना: ।
काकोळी क्षीरकाकोळी नागरं मधुकं सिता: ॥ ४४ ॥
पृश्निपर्णीमाषपर्णीपिष्टै: प्रस्थं घृतात्पचेत् ।
घृतं तच्छशवासाख्यं क्षयकासज्वरापहम् ॥ ४५ ॥

## ಶಶವಾಸಾದಿ ಘೃತ

ಮೊಲದ ಮಾಂಸ ಪಲ 16, ಆಡ್ಸೋಗೆ ಬೇರು ಪಲ 16 ಇವುಗಳನ್ನು 32 ಕುತ್ತಿ ನೀರಿನಲ್ಲಿ ಕುದಿಸಿ, ಬತ್ತಿಸಿ ಕುತ್ತಿ 8ಕ್ಕೆ ದನ

ತುಪ್ಪ 1 ಕುತ್ತಿ, ದನದ ಹಾಲು 4 ಕುತ್ತಿ ಹಾಕಿ, ಕಲ್ಕಕ್ಕೆ ದೇವದಾರು, ವಿಶಾಲಂ, ಅಶ್ವಗಂಧಿ, ಭದ್ರಮುಷ್ಠಿ, ಮರದರಸಿನ, ಜೀವಕ, ಎಡವಕ, ಕರಚ್ಚೂಲಿ, ಹಿಪ್ಲಿ, ರಾಸ್ನೆ, ಕರ್ಕಾಟಕ ಶೃಂಗಿ, ಕಿರುತೇಗು ಬೇರು, ದ್ರಾಕ್ಷೆ, ಕಾಕೋಳಿ, ಕ್ಷೀರಕಾಕೋಳಿ, ಒಣಶುಂಠಿ, ಜ್ಯೇಷ್ಠಮಧು, ಸಕ್ಕರೆ, ಓರೆಲೆ ಬೇರು, ಕಾಟುದ್ದು ಬೇರು, ಇವು ಕ್ಯಂಜಿ 1–1ರಂತೆ ಹಾಕಿ ಒಣಗಿಸಿ, ಚೂರ್ಣಮಾಡಿ ಕಲ್ಕ ಸೇರಿಸಿ, ಪಾಕದಲ್ಲಿ ಇಳಿಸಿ, ಸೇವಿಸಿದರೆ ಕ್ಷಯರೋಗವನ್ನೂ, ಕಾಸವನ್ನೂ, ಜ್ವರವನ್ನೂ ಹೋಗಲಾಡಿಸುವುದು.

॥ काकमाच्यादिघृतम् ॥

काकमाचीद्रवरसे यष्टीकल्कं प्रसाधितम् ।
तैलं घृतं वा पानेन स्वरसादहरं परम् ॥ ४६ ॥

## ಕಾಕಮಾಚ್ಯಾದಿ ಘೃತ

ಕರಿಂತಾಳಿಯನ್ನು ಚೆನ್ನಾಗಿ ಜಜ್ಜಿ ತೆಗೆದ ಸ್ವರಸದಲ್ಲಿ ಜ್ಯೇಷ್ಠಮಧು, ಕಲ್ಕ ಹಾಕಿ, ಘೃತವಾಗಲೀ, ತೈಲವಾಗಲೀ, ಪಾಕಮಾಡಿ ಇಳಿಸಿ ಸೇವಿಸಿದರೆ ಸ್ವರಸಾದ ರೋಗವನ್ನು ಹೋಗಲಾಡಿಸುವುದು.

॥ लशुन घृतम् ॥

तुलां लशुनकंदानां दशमूलं हरीतकीम् ।
दारुपूतीकटुस्पर्शपाठेंद्रयवग्रंथिकान् ॥ ४७ ॥

कपोतवङ्केंद्रवल्ली वनसूरणकंदकम् ।
दशसंख्यपलानेतान् निष्क्वाथ्य तथाढकम् ॥ ४८ ॥

विपाचयेत् सुपिष्टैस्तु कल्कैरर्धपलोन्मितैः ।
पञ्चकोलकविश्वैलाजीरकाजाजिसैंधवैः ॥ ४९ ॥

पाठाहिंग्वास्मगुसाभिस्त्रिफलामधुकेक्षुभिः ।
चतुर्गुणेन तक्रेण क्षीरेण द्विगुणेन च ॥ ५० ॥

निशावैकुंठचाङ्गेरीस्वरसेन भिषग्वरः ।
तत्पीतमात्रं दुर्नाम गुल्मशूलहरं परम् ॥ ५१ ॥

## ಲಶುನ ಘೃತ

ಬೆಳ್ಳುಳ್ಳಿ 100 ಪಲ, ದಶಮೂಲಂಗಳು, ಅಣಿಲೆಕಾಯಿ ಸಿಪ್ಪೆ, ದೇವ ದಾರು, ಕೊಂಗುರ್ಜ ಮರದ ಕೆತ್ತೆ, ಪಚ್ಚರಂಗಿ, ಪಾಡಾವಳಿಗಡ್ಡೆ, ಕೊಡಗ ಪಾಲರಿ, ಕಾಡುಹಿಪ್ಲಿ ಬೇರು, ಬೆಟ್ಟು ಕರಂಡೆ ಬೇರು, ಇಂದ್ರುವಲ್ಲೀ, ಕಾಡುಕೇನೆ (ಶುದ್ಧಿ), 10-10 ಪಲ, ಒಂದು ಆಢಕ ತುಪ್ಪ, ಒಣಶುಂಠಿ, ಹಿಪ್ಲಿ, ಕಾಡುಹಿಪ್ಲಿ ಬೇರು, ಕಾಡುಮೆಣಸಿನ ಬೇರು, ಚಿತ್ರಮೂಲ, ಏಲಕ್ಕಿ, ಜೀರಿಗೆ ಓಮುಕಾಳು, ಇಂದುಪ್ಪು, ಹಾಡೆಗಡ್ಡೆ, ಹಿಂಗು, ನಸು ಗುನ್ನಿ ಬೇರು, ತ್ರಿಫಲೆಗಳು, ಜ್ಯೇಷ್ಠಮಧು, ಕಬ್ಬು, ಕಲ್ಕ, ತುಪ್ಪದ ನಾಲ್ಕು ಪಾಲು ಮಜ್ಜಿಗೆ, ಕ್ಷೀರ, ಎರಡು ಪಾಲು, ಹಸಿ ಅರಸಿನ, ತುಂಬೆ ಹೂ, ಪುಳಿಯಾರಿಲೆ ಇವುಗಳ ಸ್ವರಸ ಒಂದು ಪಾಲು ನೇರಿಸಿ. ಸೇವಿಸಲು ಅರ್ಶ, ಗುಲ್ಮ, ಶೂಲ ಹರ.

॥ दार्वीबलादि घृतम् ॥

दार्वीबलागोक्षुरपृश्निपर्णी ।
मायूरीकाकौटजवल्कलैश्च ।
क्षीरप्रवालं च तथाकठिल्ल ।
मुत्क्वाथ्य तोयेऽष्टमशेषतेऽस्मिन् ॥ ५२ ॥
घृतं पचेत् क्षीरयुतं सुपिष्टैः ।
कल्कैरिमैश्चंदनदीप्यकुष्टैः ।
अभीरुयष्टीजलपञ्चकोलैः ।
श्यामास्थिराश्रीफलदारुचित्रैः ॥ ५३ ॥
काश्मर्यतिक्ताञ्जन तोयदैश्च ।
व्याघ्रीपयस्यातिविषालवङ्गैः ।
चाङ्गेरीकायाश्च रसेन मिश्रं ।
त्रायन्तिकायाश्च सुसिद्धमेतत् ॥ ५४ ॥

निषेव्यमाणां विधिवद्धिहन्यात् ।
गुदाङ्कुरान् रक्तभवान् क्षणेन ।

## ದಾರ್ವೀಬಲಾದಿ ಘೃತ

ಮರದರಸಿನ ಸಿಪ್ಪೆ, ಕಡಿರಬೇರು, ನೆಗ್ಗಿನಮುಳ್ಳು, ಮೂರೆಲೆಬೇರು, ದೊಡ್ಡ ಉತ್ತರಣೆ ಬೇರು, ಕೊಡಗಪ್ಪಾಲಬೇರಿನ ಮೇಲಿನ ಸಿಪ್ಪೆ, ನಾಲ್ಕು ಮರದ ತಳಿರು, ತೆಗ್ಗಾಮೆ ಬೇರು ಪ್ರತಿಯೊಂದು 1 ಪಲ, 8 ಕುತ್ತಿ ಕಷಾಯದಲ್ಲಿ ಬತ್ತಿಸಿ ಕುತ್ತಿ 1ಕ್ಕೆ, ದನದ ತುಪ್ಪ ಕುತ್ತಿ ಅರ್ಧ, ಹಾಲು ಕುತ್ತಿ ೧, ಪುಳಿಯಾರಿಲೆ ಮತ್ತು ಬ್ರಾಹ್ಮಿ ಇವುಗಳ ಸ್ವರಸ ಕೂಡಿಸಿ, ಕಲ್ಕಕ್ಕೆ ಚಂದನ, ಓಮುಕಾಳು, ಅವ್ವಲ್ ಕಂಕುಷ್ಠ, ಶತಾವರಿ ಬೇರು, ಜ್ಯೇಷ್ಠ ಮಧು, ಹಿಪ್ಲಿ, ಹಿಪ್ಲಿ ಮೂಲ, ಕಾಡುಮೆಣಸಿನ ಬೇರು, ಚಿತ್ರಮೂಲ (ಶುದ್ಧಿ), ಒಣಶುಂಠಿ, ತ್ರಿಗಡೆ, ಓರೆಲೆ ಬೇರು, ಬಿಲ್ವಪತ್ರೆ, ದೇವದಾರು, ಕುಂಬುಳುಮರದ ಬೇರಿನ ಸಿಪ್ಪೆ, ಕಿರಾತಕಡ್ಡಿ, ಅಂಜನಕಲ್ಲು, ಭದ್ರ ಮುಷ್ಟಿ, ಕಂಟಕಾರಿ, ಬುಗುಡಿ ಹೂವಿನ ಗಡ್ಡೆ, ಲವಂಗಚಕ್ಕೆ, ಕೈಂಜಿ 1 ರಂತೆ ಸೇರಿಸಿ, ಒಣಗಿಸಿ ಚೂರ್ಣ ಮಾಡಿ ಕಲ್ಕ ಸೇರಿಸಿ, ಈ ಘೃತವನ್ನು ವಿಧಿಪ್ರಕಾರ ಸೇವಿಸಿದರೆ ರಕ್ತಾರ್ಶಸ್ಸು ಕೂಡಲೆ ಸಮಾಧಾನವಾಗುವುದು.

॥ पाठाकरंजादि घृतम् ॥

पाठाकरञ्जयुग्माग्निशरपुंखौषधांबुदम् ॥ ५५ ॥
चिञ्चामूलप्रवालस्य कौटजस्य च वल्कलम् ।
कृष्णामूलं यवाषं च क्वाथयित्वा तु तद्रसे ॥ ५६ ॥
घृतमार्द्रकचाङ्गेरीरसतक्रपयोन्वितम् ।
सिद्धं सवत्सकैर्यष्टीभार्गीकट्वङ्गवत्सकैः ॥ ५७ ॥
हिंगुप्रातिविषाव्योषबलाबिल्वसुरद्रुमैः ।
एलालवङ्गमृद्विकादीप्यसिंधूत्थजीरकैः ॥ ५८ ॥
कोलचंदनधान्यैश्चसर्वातिसारनाशनम् ।

## ಪಾಠಾಕರಂಜಾದಿ ಘೃತ

ಪಾಡಾವಳಿ ಬೇರು, ಕೊಂಗುರ್ಜಮರದ ತೊಗಲು, ರಾವುಬೀಜದ ತೊಗಲು, ಒಣಶುಂಠಿ, ಚಿತ್ರಮೂಲ ಬೇರು (ಶುದ್ಧಿ), ಶರಪುಂಖ ಬೇರು, ಭದ್ರಮುಷ್ಟಿ, ಹುಣಸೆಮರದ ಬೇರಿನ ಮೇಲಿನ ಸಿಪ್ಪೆ, ಕೊಡಸಿಗನ ಬೇರಿನ ಸಿಪ್ಪೆ, ಕಾಡುಹಿಪ್ಲಿ ಬೇರು, ಪಚ್ಚೆರಂಗಿ ಬೇರು ಇವುಗಳ ಕಷಾಯಕ್ಕೆ ನೀರು 12 ಕುತ್ತಿ ಬತ್ತಿಸಿ ಕುತ್ತಿ ೩ಕ್ಕೆ ತುಪ್ಪ ಕುತ್ತಿ 1, ಹಸಿಶುಂಠಿ, ಪುಳಿಯಾರಿಲ ರಸ, ಮಜ್ಜಿಗೆ, ಹಾಲು, ಕುತ್ತಿ 1–1ರಂತೆ ಸೇರಿಸಿ, ಕಲ್ಕಕ್ಕೆ ಕೊಡಗ ಪಾಲರಿ, ಜ್ಯೇಷ್ಠಮಧು, ಕಿರುತೇಗು ಬೇರು, ಇಂಗು, ಅತಿವಿಡಯು, ಕರಿಮೆಣಸು, ಹಿಪ್ಪಲಿ, ಶುಂಠಿ, ಕಡಿರಬೇರಿನ ಸಿಪ್ಪೆ, ಬಿಲ್ವಪತ್ರೆ ಬೇರು, ದೇವದಾರು, ಏಲಕ್ಕಿ, ಲವಂಗಚೆಕ್ಕೆ, ದ್ರಾಕ್ಷೆ, ಅಯಮೋದಕ, ಇಂದುಪ್ಪು, ಜೀರಿಗೆ, ಬುಗರಿ ಬೀಜ, ಚಂದನ, ಕೊತ್ತಂಬರಿ, ಇವುಗಳನ್ನು ಚೂರ್ಣಿಸಿ, ಕಲ್ಕ ಹಾಕಿ ಪಾಕಮಾಡಿ ಸೇವಿಸಲು ಸಕಲ ವಿಧದ ಅತಿಸಾರ ಉಪ ಶಮನ ಹೊಂದುವುದು.

॥ २ पाठाकरञ्जादि घृतम् ॥

पाठाचव्यकरञ्जयुग्मशरपुंखाग्न्यब्दशुंठीरसैः ।
सिद्धं सैंधवपंचकोलकविषाद्विक्षाराहिंग्वादिभिः ।
साजाजीद्वयदीप्यकैः घृतमजा दध्ना रसेनार्द्रकात् ।
चाङ्गेर्याश्च रसेन वह्निजननं गुल्मग्रहण्यांतकम् ॥ ५९ ॥

## ಮತ್ತೊಂದು ಪಾಠಾಕರಂಜಾದಿ ಘೃತ

ಪಾಡಾವಳಿ ಬೇರು, ಕಾಡುಮೆಣಸಿನ ಬೇರು, ಕೊಂಗುರ್ಜಮರದ ತೊಗಲು, ರಾವುಬೀಜಮರದ ಕೆತ್ತೆ, ಶರಪುಂಖ ಬೇರು. ಚಿತ್ರಮೂಲ ಬೇರು, (ಶುದ್ಧಿ) ಭದ್ರಮುಷ್ಟಿ, ಒಣಶುಂಠಿ, ಇವು ಪ್ರತಿಯೊಂದು ಪಲ 1-1, ಕಷಾಯಕ್ಕೆ ನೀರು ಕುತ್ತಿ 8 ಬತ್ತಿಸಿ ಕುತ್ತಿ 2ಕ್ಕೆ, ಇಂದುಪ್ಪು, ಹಿಪ್ಲಿ, ಹಿಪ್ಲಿಮೂಲ, ಕಾಡುಮೆಣಸಿನ ಬೇರು, ಚಿತ್ರಮೂಲ(ಶುದ್ಧಿ), ಒಣಶುಂಠಿ, ವಿಡಯು ಯುವ

ಕರ್ಪೂರ, ಸರ್ಜಕರ್ಪೂರ, ಇಂಗು, ಕರಿಮೆಣಸು, ಅಜಾಳಿ, ಜೀರಿಗೆ, ಓಮು ಕಾಳು, ಇವು ಕ್ರಿಂಚಿ 2ರಂತೆ ಚೂರ್ಣಿಸಿ ಕಲ್ಕ ಸೇರಿಸಿ, ಪುಳಿಯಾರಿಲೆ ರಸ, ಹಸಿಶುಂಠಿ ರಸ, ಮೊಸರು, ಕುತ್ತಿ ಅರ್ಧದಂತೆ ಕೂಡಿಸಿ, ತುಪ್ಪ ಕುತ್ತಿ 1ನ್ನು ಪಾಕಮಾಡಿ ಸೇವಿಸಲು, ಗುಲ್ಮರೋಗ, ಗ್ರಹಣೀ ರೋಗಗಳನ್ನು ಹೋಗಲಾಡಿಸಿ ಅಗ್ನಿಬಲವನ್ನುಂಟುಮಾಡುವುದು.

॥ बस्त्यामयांतक घृतम् ॥

दार्वीमधूकमत्स्याक्षिपत्मापाषाणभेदकैः ।
बृहत्यंशुमतीद्वंद्वसारिवेक्षुकशेरुकैः ॥ ६० ॥

कपोतवङ्केक्षुरकं वसुकं शिग्रुवाल्कम् ।
वाराही चरणं द्राक्षा भद्रा यष्टी पलंकषम् ॥ ६१ ॥

पृथक् त्रिफलिकं क्षुण्णां सर्वतुल्यं तु गोक्षुरम् ।
द्रोणेऽपां विपचेत्तत्र पादशिष्टे परिस्रुते ॥ ६२ ॥

प्राक्षिप्य सर्पिषः प्रस्थं दत्वा क्षीरं चरिरसम् ।
धात्रीबिंबरसं चापि नालिकेरोदकं तथा ॥ ६३ ॥

कूष्मांडोर्वारुकजलं स्नेहाद्द्विगुणितं पृथक् ।
द्रव्यैः सुपिष्टैः संयुक्तोतन्मृदुवग्निना पचेत् ॥ ६४ ॥

परूषकोत्पल तुटीमधूकहिमदारुभिः ।
त्रिफलापिप्पलीकौंतीश्रृङ्गिवेरैस्ससैंधवैः ॥ ६५ ॥

हस्तिपिप्पल्यपामार्गमञ्जिष्ठापद्मकेसरैः ।
मुस्ताकुस्तुंबरीलोध्रहयगंधापुनर्नवैः ॥ ६६ ॥

स्वयंगुप्तेक्षुरफलैर्वार्धपत्रकशृङ्गिभिः ।
शिलाजत्वर्धभागैस्तैः सिद्धं तत्सेवितं घृतम् ॥ ६७ ॥

मूत्रकृच्छ्राणि सर्वाणि शर्करामश्मरीमपि ।
पानबस्त्यादिभिर्युक्तो नाशयेन्नात्र संशयः ॥ ६८ ॥

वातपित्तसमुत्पन्नान् सर्वान् वस्तिगतान् गदान् ।
प्रमेहेण सह क्षिप्रमपावर्तयते ध्रुवम् ॥ ६९ ॥
बस्त्यामयांतकं नाम देवदेवेन भाषितम् ।

## ಬಸ್ತ್ಯಾಮಯಾಂತಕ ಘೃತ

ಮರದರಸಿನ ಸಿಪ್ಪೆ, ಇಪ್ಪೆ ತಿರುಳು, ಮಿಾನಂಗಣ್ಣೆ, ಓರಿಲತ್ತಾ ಮರ, ಪಾಷಾಣಭೇದಿ, ಕಿರಿ ಗುಳ್ಳ ಬೇರು, ಗುಳ್ಳ ಬೇರು, ಓರೆಲೆ ಬೇರು, ಮೂರೆಲೆ ಬೇರು, ನಾಮದ ಬೇರು, ಕಬ್ಬು ಬೇರು, ಕರಿಭದ್ರಮುಷ್ಟಿ, ಬೆಟ್ಟಕರಂಡ ಬೇರು, ಬಯುಲಮುಳ್ಳು ಬೇರು, ತಾತರ್ಾವಲ್ ಬೇರು, ನುಗ್ಗೆ ಬೇರು. ಇರುವೇರಿದಂಡು, ನೆಲತಾಳಿ ಗಡ್ಡೆ, ನೀರ್ಮಾದಳ ಕೆತ್ತೆ, ದ್ರಾಕ್ಷೆ, ಚೆರೂವುಳ ಬೇರು, ಜ್ಯೇಷ್ಠಮಧು, ಕುಮುಳುಬೇರಿನ ತಿರುಳು, ಇವು ಬೇರೆ ಬೇರೆ ಮೂರು ಮೂರು ಪಲಗಳಂತೆ ಹಿಂದೆ ಹೇಳಿದ ಎಲ್ಲಾ ಮದ್ದುಗಳ ಸಮಭಾಗ ನೆಗ್ಗಿನ ಮುಳ್ಳು, ಇವುಗಳ ಕಷಾಯಕ್ಕೆ, ನೀರು 64 ಕುತ್ತಿ ಬತ್ತಿಸಿ ಕುತ್ತಿ 16ಕ್ಕೆ (ನಾಲ್ಕನೇ ಒಂದಂಶಮಾಡಿ) ದನದ ತುಪ್ಪ ಕುತ್ತಿ 1ಕ್ಕೆ, ದನದ ಹಾಲು, ಶತಾವರೀ ರಸ, ಹಸಿ ನೆಲ್ಲಿಕಾಯಿ ರಸ, ತೊಂಡೆರಸ, ಬೊಂಡದ ನೀರು, ಕೂಷ್ಮಾಂಡ ರಸ, ಸೌತೆಕಾಯಿ ರಸ, ಎಲ್ಲಾ ಇವುಗಳ ಸ್ವರಸ ಬೇರೆ ಬೇರೆ 2–2 ಕುತ್ತಿ ಹಾಕ ಬೇಕು. ಕಲ್ಕಕ್ಕೆ ಸೇರಿಸುವ ಮದ್ದುಗಳು ಪರೂಷಕ (ಚೆಟ್ಟೇಂತ) ನೆಲಸಂಪಿಗೆ ಗಡ್ಡೆ, ಏಲಕ್ಕಿ, ಇಪ್ಪೆ ತಿರುಳು, ಚಂದನ, ದೇವ ದಾರು, ಅಣಿಲೆಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ಹಿಪ್ಪಿಲಿ ಅರೇಣಕ, ಒಣಶುಂಠಿ, ಇಂದುಪ್ಪು, ಅತ್ತಿ ಹಿಪ್ಲಿ, ಸಣ್ಣಉತ್ತರಣೆ, ಮಂಜಿಷ್ಟ ಕಡ್ಡಿ, ತಾವರೆ ಕುಸುಮ, ಭದ್ರಮುಷ್ಟಿ, ಕೊತ್ತಂಬರಿ ಬೀಜ, ಪಾಚೋಟ ಕೆತ್ತೆ, ಆಡುನಾರಿವೇಳ, ಪುನರ್ನವೆ ಬೇರು. ನಸುಗುನ್ನಿ ಬೇರು, ಬಯುಲಮುಳ್ಳು ಬೀಜ, ಸಣ್ಣಕಾಟುದ್ದು ಎಲೆ, ಕರ್ಕಾಟಕಶೃಂಗಿ, ಶಿಲಾಜಿತು, ಇವು ಪ್ರತಿಯೊಂದು, 1–1 ಕೈಂಜಿಗಳಂತೆ ಸೇರಿಸಿ, ಚೂರ್ಣಿಸಿ, ಕಲ್ಕ ಹಾಕಿ, ಪಾಕದಲ್ಲಿ ಇಳಿಸಿ ಈ ಘೃತವನ್ನು ಸೇವಿಸಿದರೆ ಸರ್ವ ಮೂತ್ರಕೃಚ್ಛ್ರ ರೋಗಗಳು, ಶರ್ಕರಾ, ಅಶ್ಮರೀ ಪಾನ ಬಸ್ತ್ಯಾದಿಗಳಿಂದ ಸಂಶಯುವಿಲ್ಲದೆ

ಶಮನವಮಾಡುವುದು. ವಾತ ಪಿತ್ತ ಕಫದಿಂದುಂಟಾದ ಪ್ರಮೇಹ, ಉದಾವರ್ತ. ಗುಲ್ಮ, ಅಗ್ನಿಮಾಂದ್ಯ, ಗ್ರಹಣೀ, ಅರ್ಶಸ್ಸ್, ಹೊಟ್ಟೆಯಲ್ಲಿ ನೋವು. ತುರಿಸುವಿಕೆ, ತಲೆನೋವು, ಬಸ್ತೀ, ಮೂತ್ರಾಶಯದಲ್ಲುಂಟಾಗುವ ಸಮಸ್ತ ರೋಗಸಮೂಹಗಳನ್ನು ಮಹಾದೇವನಾದ ಪರಮೇಶ್ವರನಿಂದ ಉಕ್ತವಾದ ಈ ಬಸ್ತ್ಯಾಮಯಾಂತಕ ಘೃತವು ಗುಣ ಮಾಡುವುದು.

॥ त्रैकंटक घृतम् ॥

क्वाथो त्रैकंटकैलागिरिजतुशिलाभेदयष्टीवरीणाम् ।
दर्भेद्राक्षांबुशीर्डीवसुकवासिरकाशेक्षुसत्याक्षिकानाम् ॥ ७० ॥
कल्कैः सिद्धं सुदुग्धं हरति घृतमिदं सेवितं मूत्रदोषान् ।
मेहान् कृच्छ्राणि सर्वाण्यनिलमपि तथा शर्करामश्मरीं च ॥ ७१ ॥

## ತ್ರೈಕಂಟಕ ಘೃತ

ನೆಗ್ಗಿನಮುಳ್ಳು, ಏಲಕ್ಕಿ, ಕಲ್ಮದ, ಪಾಷಾಣಭೇದಿ, ಜ್ಯೇಷ್ಠಮಧು, ಶತಾವರೀ, ದರ್ಭೆ ಬೇರು, ದ್ರಾಕ್ಷೆ, ಇರಿವೇರಿದಂಡು, ಹಿಪ್ಪಲಿ, ತಾತರ್ ವಲ್ ಬೇರು, (ನೆಗ್ಗಿನಮುಳ್ಳು ಪಾಠಾಂತರ) ಅತ್ತಿ ಹಿಪ್ಲಿ, ಕುಶ ಬೇರು, ಕಬ್ಬಿನ ಬೇರು, ಮಿಾಸಂಗಾಣಿ, ಈ ಮದ್ದುಗಳೀ ಕಷಾಯಕ್ಕೂ, ಕಲ್ಕಕ್ಕೂ ಸೇರಿಸಿ, ದನದ ತುಪ್ಪ, ಅಷ್ಟೆ ಹಾಲು ಕೂಡಾ ಸೇರಿಸಿ, ಪಾಕಮಾಡಿ ಸೇವಿಸಿದರೆ ಎಲ್ಲಾ ಪ್ರಮೇಹಗಳು, ಮೂತ್ರಕೃಚ್ಛ್ರ, ಅಶ್ಮರೀ, ಈ ರೋಗಗಳು ಉಪಶಮನ ಹೊಂದುವುವು.

॥ शतावर्यादि घृतम् ॥

शतावर्याः श्वदंष्ट्रायाः स्वरसस्याढकं पृथक् ।
घृतप्रस्थद्वयं क्षीरे द्विगुणेऽपि पचेदिमैः ॥ ७२ ॥
विदारीचंदनतुकामृद्वीवकामधुयष्टिभिः ।
कशेरुकेर्वारुबीजं तुक्ष्यद्विजकणोत्पलैः ॥ ७३ ॥

पस्मापत्त्वरसुस्तैश्च काकोल्यादिगणेन च ।
सिद्धं तु शीतले तस्मिन् घृतार्धं मधु निक्षिपेत् ॥ ७४ ॥
पध्वर्धं शर्कराचूर्णं क्षिप्त्वोन्माथ्य निधापयेत् ।
निहंति मूत्रकृच्छ्राणि मूत्रदोषांश्च शर्कराम् ॥ ७५ ॥

## ಶತಾವರ್ಯಾದಿ ಘೃತ

ಶತಾವರಿ ಬೇರನ್ನು ಜಜ್ಜಿ ತೆಗೆದ ಸ್ವರಸ ಕುತ್ತಿ 4, ನಸುಗುನ್ನಿ ಬೇರನ್ನು ಜಜ್ಜಿ ತೆಗೆದ ರಸ ಕುತ್ತಿ 4, ದನದ ತುಪ್ಪ ಕುತ್ತಿ 2, ಹಾಲು ಕುತ್ತಿ 4, ಕಲ್ಕಕ್ಕೆ ವಿದಾರಿಗಡ್ಡೆ, ಚಂದನ, ತುಗಾಕ್ಷೀರೀ, ದ್ರಾಕ್ಷೆ, ಜ್ಯೇಷ್ಠ ಮಧು, ಕರಿಭದ್ರಮುಷ್ಟಿ, ಸೌತೆ ಬೀಜ, ಬಿದಿರುಪ್ಪು, ಕಾಮಿಮಣ್ಣು, ಹಿಪ್ಪಲಿ, ನೆಲಸಂಪಿಗೆಗಡ್ಡೆ, ಓರಿಲೆತ್ತಾಮರ, ಮಿಾನಂಗಾಣಿ, ಭದ್ರಮುಷ್ಟಿ, ಕಾಕೋಳ್ಯಾದಿ ಗಣ (ಬುಗುಡಿ ಹೂವಿನ ಗಡ್ಡೆ, ಕಾಕೋಲೀ, ಕ್ಷೀರ ಕಾಕೋಲೀ, ಮೇದಾ, ಮಹಾಮೇದಾ, ಕಾಟುದ್ದು ಬೇರು, ಹೆಸರು ಬೇರು, ಜೀವಕ, ಋಷಭಕ) ಇವು ಪ್ರತಿಯೊಂದು ಬಗೆ ಕ್ಳೆಂಜಿ 2 ಚೂರ್ಣಿಸಿ, ಕಲ್ಕ ಹಾಕಿ, ಪಾಕದಲ್ಲಿಳಿಸಿದ ತರುವಾಯ, ಜೇನುತುಪ್ಪ ಕುತ್ತಿ 1 ಅದರ ಅರ್ಧಾಂಶ ಸಕ್ಕರೆಯನ್ನೂ ಸೇರಿಸಿ ಮರ್ದನವಮಾಡಿ ಸೇವಿಸಲು, ಮೂತ್ರಕೃಚ್ಛ್ರ ರೋಗವನ್ನೂ, ಮೂತ್ರದೋಷ ರೋಗಗಳನ್ನೂ, ಶರ್ಕರಾ, ಅಶ್ಮರಿ ರೋಗವನ್ನೂ, ಹೋಗಲಾಡಿಸುವುದು.

॥ आकुल्यादि घृतम् ॥

आकुलीबीजकतकपारंतीमूलरातिभिः ।
मेहारिमूलामलकभद्रकिंशुकवल्कलैः ॥ ७६ ॥
त्रुश्रीवांशुमतीद्वंद्वगोक्षुरैः क्वथिते जले ।
सिद्धं सुदुग्धं तु घृतं शतावर्याज्यकल्कवत् ॥ ७७ ॥
शर्करासहितश्चैतत्सेवनान्मेहनाशनम् ।

## ಅಕುಲ್ಯಾದಿ ಘೃತ

ಅವೀರಕಾರು, ತೇಟಾಂಪರಳು, ತೆಚ್ಚಿ ಬೇರು, ಅರಸಿನ, ಏಕನಾಯಕ ಬೇರು, ನೆಲ್ಲಿಕಾಯಿ ಸಿಪ್ಪೆ, ಚೆರೂವ್ರಳ ಬೇರು, ಮುರಿಕಿನ ಕೆತ್ತೆ, ತೆಗ್ಗಾಮೆ ಬೇರು, ಓರಿಲೆ, ಮೂರಿಲೆ ಬೇರು, ನೆಗ್ಗಿನಮುಳ್ಳು, ಶತಾವರೀ ಘೃತಕ್ಕಿರುವ ಔಷಧಿಗಳು ಇದಕ್ಕೆ ಕಲ್ಕವಾಗಿರುವುದು. ಸಕ್ಕರೆ ಕೂಡಾ ಹಾಕಿ ಪ್ರಮೇಹ ಗಳಿಗೆ ಕೊಡುವುದು.

॥ धान्वंतरघृतम् ॥

दशमूल शठी दंती सुराह्वा द्विपुनर्नवम् ॥ ७८ ॥
मूलं सुह्यार्कयोः पथ्या भूकदंबमरुष्करम् ।
करंजवरुणान्मूलं पिप्पल्याः पौष्करं च यत ॥ ७९ ॥
पृथग्दशपलप्रस्थान्यवकोलकुलत्थत: ।
त्रिंशोऽष्टगुणिते तोये विपचेत् पादवर्तिना ॥ ८० ॥
तेन द्विपिप्पली चव्यवचानिचुलरौहिषैः ।
त्रिवृद्विडङ्ग कंपिल्ल भार्ङ्गी विश्वैश्च साधयेत् ॥ ८१ ॥
घृतं प्रस्थं जयेत्सर्वान्मेहान् पिटकाचितान् ।
पांडुविद्रधिगुल्मार्शशोषशोफगरोदरम् ॥ ८२ ॥
कुष्ठोन्मादावपस्मारं धान्वंतरमिदं घृतम् ॥ ८३ ॥

## ಧಾನ್ವಂತರ ಘೃತ

ದಶಮೂಲಂಗಳು, ನಾಗದಂತೀ ಬೇರು, ಕಚ್ಚೂರ, ದೇವದಾರು, ಪುನರ್ನವೆ ಬೇರು, (ಎರಡುವಿಧ) ಕಳ್ಳಿ ಬೇರು, ಎಕ್ಕೆ ಬೇರು, ಅಣಿಲೆಕಾಯಿ ಸಿಪ್ಪೆ, ಭೂಕದಂಬ, ಭಲ್ಲಾತಕ, ಕೊಂಗ್ರ್ರುಮರದ ಕೆತ್ತೆ, ನೀರ್ವಾಳದಳ ಬೇರು, ಹಿಪ್ಲಿ, ಪುಷ್ಕರಮೂಲ, ಇವು ಬೇರೆ ಹತ್ತತ್ತು ಪಲ. ಯುವಧಾನ್ಯ ಬುಗರಿ ಹಣ್ಣು, ಹುರುಳಿ, 30 ಪಲ. ಅಷ್ಟಮಾಂಶ ಜಲಸೇರಿಸಿ, ¼ ಮಾಡಿ

ಹಿಪ್ಲಿ, ಆತ್ತಿ ಹಿಪ್ಲಿ, ಕಾಡುಮೆಣಸಿನ ಬೇರು, ಬಜೆ, ಕಾನಾಂಚಿ, ತುಂಬೆ ಬೇರು, ತ್ರಿಗಡೆ, ವಾಯುವಿಳಂಗ ಬೀಜ, ಕೆಂಬಿಸ್ತಾಲಬೇರಿನ ಸಿಪ್ಪೆ, ಕಿರು ತೇಗು, ಒಣಶುಂಠಿ, ಪ್ರಸ್ಥಘೃತವನ್ನು ಪಾಕಮಾಡಿ ಸೇವಿಸಲು ಪಿಟಕ ಗಳಿಂದ ಕೂಡಿದ ಎಲ್ಲಾ ವಿಧದ ಮೇಹ, ಪಾಂಡು, ವಿದ್ರಧಿ, ಗುಲ್ಮ, ಅರ್ಶ, ಬೀಗು, ಗರೋದರ, ಮುಂತಾದಕ್ಕೆ ದಿವ್ಯೌಷಧ.

॥ पर्पणादि घृतम् ॥

पर्पणरसोनमुंडाशक्रलतायक्षदृक्स्वरसे ।
कृष्णाद्विजीरकैः सार्धं चित्रातैलसमन्वितं सिद्धम् ॥ ८४ ॥
वृद्धिहरं चोद्दिष्टं सपदि प्रलेपपानाभ्याम् ॥ ८५ ॥

## ಪರ್ಪಣಾದಿ ಘೃತ

ಪಾವಿಟ್ಟ ಬೇರು, ಬೆಳ್ಳುಳ್ಳಿ, ಮುತ್ತಿಳ್, ಇಂದ್ರವಲ್ಲೀ, ಕಯಿಂಚಿ ಕ್ಕುರು, ಹಿಪ್ಲಿ, ಜೀರಿಗೆ, ಸಣ್ಣಹರಳೆಣ್ಣೆ ಕೂಡಿಸಿ ಮಾಡಿದ ಘೃತವು ವಿದ್ರಧಿಗೆ ಹಿತಕರವು.

॥ वरणादि घृतम् ॥

वरणचित्रबलेंद्रलताभया ।
हपुषयक्षदृगग्निकणौषधैः ।
लवणजीरकहिङ्गुबलाजटा ।
मरिचचव्यसुरद्रुमदीप्यकैः ॥ ८६ ॥
घृतमथोरुबुतैलसमन्वितं सकलवृद्ध्युदरामय गुल्मनुत् ।

## ವರಣಾದಿ ಘೃತ

ನೀರ್ವಾಳದಳ ಬೇರು, ಸಣ್ಣಹರಳು ಬೇರು, ಕಡಿರ ಬೇರು, ಇಂದ್ರ ವಲ್ಲೀ, ಅಣಿಲೆಕಾಯಿ ಸಿಪ್ಪೆ, ಬೆಟ್ಟುಕರಂಡೆ ಬೇರು, ಕಯುಂಚಿ ಬೇರು, ಚಿತ್ರಮೂಲ ಬೇರು, ಹಿಪ್ಪಲಿ, ಶುಂಠಿ, ಇಂದುಪ್ಪು, ಜೀರಿಗೆ, ಇಂಗು, ಕಡಿರ

ಬೇರು, ಜಟಾಮಾಂಸಿ, ಕಾಡುಕರಿಮೆಣಸು ಬೇರು, ದೇವದಾರು, ಓಮು ಕಾಳು, ಹರಳೆಣ್ಣೆ ಈ ಬಗೆಯ ಮದ್ದುಗಳನ್ನು ಚೂರ್ಣಿಸಿ, ಕಲ್ಕ ಹಾಕಿ ಪಾಕಮಾಡಿ ಇಳಿಸಿ ಸೇವಿಸಲು ವೃದ್ಧಿ, ಉದರ, ಗುಲ್ಮ ಇವುಗಳಿಗೆ ಉತ್ತಮ.

॥ पुनर्नवादि घृतम् ॥

पुनर्नवास्यार्धतुलां तुलां स्फोट्याभुजङ्गमान् ।
दशमूलस्य पंचाशत् पलानि लशुनस्य च ॥ ८७ ॥
तावंति तोये निष्क्वाथ्य तेन प्रस्थं घृतान पचेत् ।
एरंडतैलयुक्तं वा कृष्णातन्मूलसैंधवैः ॥ ८८ ॥
यष्टीमधूकमृद्वीकायवानिविश्वभेषजैः ।
एतैर्हिङ्ग्वादिना वापि प्रतीवापं विनिक्षिपेत् ॥ ८९ ॥
सुदग्धं साधितं तत्तु शूलगुल्मोदरापहम् ।

## ಪುನರ್ನವಾದಿ ಘೃತ

ಪುನರ್ನವೆ ಬೇರು 50 ಪಲ, ಪುಡಯಾವ್, ಎಲತ್ತಂ, ದಶ ಮೂಲಂಗಳು, ಬೆಳ್ಳುಳ್ಳಿ ಕಾಳು, ಇವುಗಳ ಕಷಾಯಕ್ಕೆ ಒಂದು ಪ್ರಸ್ಥ ತುಪ್ಪ, ಎರಂಡತೈಲ, ದನದ ಹಾಲು, ಕಲ್ಕಕ್ಕೆ ಹಿಪ್ಪಿಲಿ, ಕಾಡುಹಿಪ್ಲಿ ಬೇರು, ಇಂದುಪ್ಪು, ಜ್ಯೇಷ್ಠಮಧು, ದ್ರಾಕ್ಷೆ, ಜೀರಿಗೆ ಕಾಳು, ಒಣಶುಂಠಿ, ಇಪ್ಪೆ ತಿರುಳು, ಇವು ಪ್ರತಿಯೊಂದು ಕೈಂಜಿ 3½ಯಂತೆ ಸೇರಿಸಿ ಚೂರ್ಣಿಸಿ, ಕಲ್ಕ ಸೇರಿಸಿ, ಪಾಕದಲ್ಲಿಳಿಸಬೇಕು. ಅಥವಾ ಹಿಂಗ್ವಾದಿ ಕಲ್ಕ, ಕಾಡುಹಿಪ್ಲಿ ಬೇರು, ಕಾಡುಮೆಣಸಿನ ಬೇರು, ಚಿತ್ರಮೂಲ ಬೇರು (ಶುದ್ಧಿ), ಎಲಕ್ಕಿ, ಅಯಮೋದಕ, ಇಂಗು ಸೇರಿಸಿ ಸೇವಿಸಲು ಶೂಲ, ಗುಲ್ಮ, ಮಹೋದರ ಈ ರೋಗಗಳನ್ನು ವಿನಾಶಗೊಳಿಸುವುದು.

॥ शूलारिघृतम् ॥

स्फोट्याभुजङ्गमादाय स्वरसं यंत्रपीडितम् ॥ ९० ॥
चतुर्गुणरसे तस्मिन् घृतप्रस्थं विपाचयेत् ।
द्विपंचमूलस्य रसैः प्रस्थं प्रस्थं प्रदापयेत् ॥ ९१ ॥

अत्र कल्कानिमान् दद्यात्कार्षिकाणि भिषग्वरः ।
पंचाभिर्लवणैर्युक्तं त्रिकटुत्रिफलान्वितम् ॥ ९२ ॥
कारवीकटुरोहिण्यौ मातुलुंगफलं तथा ।
द्विक्षारं हिङ्गुलवणमेलाचव्याजमोदकम् ॥ ९३ ॥
मृद्वीका काकजिह्वां च देवदारु कटिल्लकम्
वज्रकं शूर्पमूलं च विषमुष्टेश्च पलकम् ॥ ९४ ॥
एतत् शूलरिकं नाम घृतमात्रेयनिर्मितम् ॥ ९५ ॥

## ಶೂಲಾರಿ ಘೃತ

ಪುಡಯೂವ್ (ಎಲಿತ್ತಡಿ) ಇದರ ಸ್ವರಸ ಪ್ರಸ್ಥ 4. ದಶಮೂಲ ಕಷಾಯ ಪ್ರಸ್ಥದಂತೆ, ದನದ ತುಪ್ಪ ಪ್ರಸ್ಥ 1, ಕಲ್ಕಕ್ಕೆ ವಿಳಯುಪ್ಪು, ಮರಕಲ ಉಪ್ಪು, ಬಿಡಿಯುಪ್ಪು, ಕಾರುಪ್ಪು, ಚಾರುಪ್ಪು. (ಪಂಚ ಲವಣ ಗಳು) ಕರಿಮೆಣಸು, ಹಿಪ್ಪಲಿ, ಶುಂಠಿ, ಅಣಿಲೆಕ್ಕಾ ಸಿಪ್ಪೆ, ಶಾಂತಿಕ್ಕಾ ಸಿಪ್ಪೆ, ನೆಲ್ಲಿಕ್ಕಾ ಸಿಪ್ಪೆ, ಕರಿಜೀರಿಗೆ, ಕಟುಕರೋಹಿಣೀ, ಮಾತುಲುಂಗಫಲ, ತವಕ್ಷಾರ, ತುವರ್ಚಿಲಕ್ಷಾರ, ಇಂಗು, ಇಂದುಪ್ಪು, ಏಲಕ್ಕಿ, ಕಾಡು ಮೆಣಸಿನಬೇರು, ಓಮು ಕಾಳು. ದ್ರಾಕ್ಷೆ, ಪೆರಿಕುರುಂಬು, ದೇವದಾರು, ತೆಗ್ಗಾಮೆ ಬೇರು, ಚತುರಕ್ಕಳ್ಳಿ ಬೇರು, ದೊಡ್ಡ ಉತ್ತರಣೆ ಬೇರು, ಕಾಟ್ಟಪ್ಪ ಯಿಲ ಬೇರು (ಕರಿಲ್ಲಕ), ಇವು ಪ್ರತಿಯೊಂದು ಬಗೆ, ಕ್ಯೆಂಜಿ 1½ ಯಂತೆ ಸೇರಿಸಿ, ಚೂರ್ಣಿಸಿ, ಕಲ್ಕ ಸೇರಿಸಿ, ಪಾಕದಲ್ಲಿಳಿಸಿ ಸೇವಿಸಲು, ಅತಿಕಠಿಣ ಶೂಲರೋಗವನ್ನು ಈ ಶೂಲಾರಿ ಎಂಬ ಘೃತವು ಹೋಗಲಾಡಿಸುವುದು, ಎಂದು ಪೂಜ್ಯಪಾದರಾದ ಅತ್ರಿಮಹರ್ಷಿಗಳಿಂದ ಹೇಳಲ್ಪಟ್ಟಿರುವುದು.

॥ आर्द्रकघृतम् ॥

तथार्द्रकस्य स्वरसे विपक्वं ।
तत्कल्कमाज्यं सपयश्च तद्वत् ॥ ९६ ॥

## ಆರ್ದ್ರಕ ಘೃತ

ಹಸಿಶುಂಠಿ ರಸ, ದನದ ತುಪ್ಪ, ದನದ ಹಾಲು, ಆಯಾ ಪ್ರಮಾಣ ದಂತೆ ಸೇರಿಸಿ, ಕಲ್ಯಾಣಘೃತಕ್ಕೆ ಹೇಳಲ್ಪಟ್ಟಿರುವ ಕಲ್ಕವನ್ನು ಸೇರಿಸಿ, ಪಾಕ ದಲ್ಲಿಳಿಸಿ ಈ ಘೃತವನ್ನು ಸೇವಿಸಲು, ಕಾಮಿಲಾರೋಗ, ಪಾಂಡುರೋಗ, ಇವುಗಳನ್ನು ಹೋಗಲಾಡಿಸುವುದು.

॥ कल्याणकघृतम् ॥

वराविशालावद्वैलादेवदार्वेलवालुकैः ।
द्विसारिबाद्विरजनीद्विस्थिराफलिनीनतैः ॥ ९७ ॥

बृहतीकुष्ठमंजिष्ठानागकेसरदाडिमैः ।
वेल्लतालीसपत्रैलामालतीमुकुलोत्पलैः ॥ ९८ ॥

सदंतीपद्मकहिमैः कर्षांशैः सर्पिषः पचेत् ।
प्रस्थं भूतग्रहोन्मादश्वासापस्मारपाप्मजित् ॥ ९९ ॥

पांड्वौ कुष्ठे विषे शोषे मेहे मोहे ज्वरे गरे ।
अरेतस्यल्परजसि दैवोपहतचेतसि ॥ १०० ॥

अमेधसि स्खलद्वाचि स्मृतिकामेऽल्पवाचके ।
बल्यमाङ्गल्यमायुष्यं कांतिसौभाग्यपुष्टिदम् ॥ १०१ ॥

कल्याणकमिदं सर्पिः श्रेष्ठं पुंसवनेषु च ।

## ಕಲ್ಯಾಣಕ ಘೃತ

ತ್ರಿಫಲೆಗಳು, ಕಾಡುಸೌತೆ ಬಳ್ಳಿ, ಸಣ್ಣ ಏಲಕ್ಕಿ, ದೇವದಾರು, ಏಲ ವಾಲುಕ, ನಾಮದ ಬೇರು, ಹಾಲುಬಳ್ಳಿ ಬೇರು, ಅರಸಿನ, ಮರದರಸಿನ ಸಿಪ್ಪೆ, ಓರೆಲೆ ಬೇರು, ಮೂರೆಲೆ ಬೇರು, ನೇರಳೆ ಪುಷ್ಪ, ತಗರ, ಸಣ್ಣ ಕುದನೆ ಬೇರು, ಕಂಕುಷ್ಠ, ಮಂಜಿಷ್ಠ ಕಡ್ಡಿ, ನಾಗಕೇಸರ, ದಾಳಿಂಬ ಸಿಪ್ಪೆ, ವಿಶಾಲರಿ, ತಾಲೀಸಪತ್ರೆ, ಏಲಕ್ಕಿ, ಮಾಲತೀ ಪುಷ್ಪ, ನೆಲಸಂಪಿಗೆ

ಗಡ್ಡೆ, ನಾಗದಂತಿ ಬೇರು, ಪದ್ಮಕಾಷ್ಠ, ಚಂದನ, ಇವುಗಳು ಕರ್ಷ ತೂಕ ಗಳಂತೆ ಸೇರಿಸಿ ಚೂರ್ಣವಾಡಿ, ದನದ ತುಪ್ಪ ಪ್ರಸ್ಥ 1ರೊಂದಿಗೆ ಸೇರಿಸಿ, ಪಾಕವಾಡಿ ಇಳಿಸಿ ಸೇವಿಸಲು, ಭೂತ ಪೀಡೆ, ಗ್ರಹ ಪೀಡೆ, ಶ್ವಾಸ, ಅಪ ಸ್ಮಾರ, ಪಾಂಡುರೋಗ, ಕುಷ್ಠರೋಗ, ವಿಷ, ಶೋಷ, ಮೋಹ, ವೋಹ ಜ್ವರ, ಧಾತುಕ್ಷೀಣತೆ, ಸ್ವರಕ್ಷೀಣಾರ್ತವ, ಮೇಧಾಶಕ್ತಿವಿಹೀನತ್ವ, ಮನ್ಮಿನ ಭಾಷಣ ಹೋಗಲಾಡಿಸಿ, ಬಲದಾಯಕ, ಕಲ್ಯಾಣಕಾರಕ, ಆಯುಷ್ಯ ಕಾಂತಿ ಸೌಭಾಗ್ಯದಾಯಕವಾಗಿರುವ ಈ ಕಲ್ಯಾಣಘೃತವು ಅತಿ ಶ್ರೇಷ್ಠ ತಮವಾಗಿದೆ.

॥ महाकल्याणघृतम् ॥

एभ्यो द्विसारिवादीनि जले पक्त्वैक विंशतिम् ॥ १०२ ॥
रसे तस्मिन् पचेत्सर्पिः गृष्टिक्षीरचतुर्गुणम् ।
वीरर्धिमेदाकाकोलीकपिकच्छुविषाणिभिः ॥ १०३ ॥
सूर्पपर्णीयुतैरेतैर्महाकल्याणकं स्मृतम् ।
बृंहणं सन्निपातघ्नं पूर्वस्मादधिकं गुणैः ॥ १०४ ॥

## ಮಹಾಕಲ್ಯಾಣ ಘೃತ

ಕೋವ ಬೇರು, ಕಾಡುಹುರುಳಿ ಬೇರು, ಮೇದ, ಮಹಾಮೇದಾ ಕಾಕೋಳಿ, ಕ್ಷೀರಕಾಕೋಳೀ, ನ್ಯಾಸೋಣಗು ಬೇರು, ವಿಷಾಣಿಕಾ ಬೇರು, ಉದ್ದಿನ ಬೇರು, ಹೆಸರು ಬೇರು, ಕಾಡುದ್ದು ಬೇರು, ಕಾಡುಹೆಸರು ಬೇರು, ಒಂದೇ ಕರುಹಾಕಿದ ದನದ ಹಾಲು, ಹಿಂದೆ ಹೇಳಿದ ಸಾರಿಬಾದಿಗಳಿಂದ ಪಾಕವಾಡಿ ಹಿಂದೆ ಹೇಳಿದ ಎಲ್ಲಾ ರೋಗಗಳಿಗೆ ಕೊಡಬಹುದು. ಇದು ಮಹಾಕಲ್ಯಾಣ ಘೃತ.

॥ कूष्मांडकघृतम् ॥

कूष्मांडकं समादाय जलद्रोणे विपाचयेत् ।
चतुर्भागाऽवशिष्टे तु कल्कद्रव्याणि पेषयेत् ॥ १०५ ॥

जीवंतीं मुद्गपर्णीं च मुस्तां पर्पटकं तथा ।
रास्नां शुंठीं च भाङ्गीं च पिप्पलीं मधुयष्टिकाम् ॥ १०६ ॥

सैंधवं पिप्पलीमूलं चित्रकं हस्तिपिप्पलीम् ।
पृथगर्धपलान्येतान्यतस्सर्पिश्चतुर्गुणे ॥ १०७ ॥

क्षीरे चेक्षुरसे तद्वच्छनैर्मृद्वग्निना पचेत् ।
एतत्सर्पिः पीयमानं सर्वक्षयविनाशनम् ॥ १०८ ॥

विशेषात्पित्तजं शोषं गुल्मं सविषमज्वरम् ।
हंति कूष्मांडकघृतमेतद्वर्ण्य बलप्रदम् ॥ १०९ ॥

## ಕೂಷ್ಮಾಂಡಕ ಘೃತ

ಕೂಷ್ಮಾಂಡವನ್ನು ತೆಗೆದು ದ್ರೋಣಜಲದಲ್ಲಿ ಪಾಕಮಾಡಿ, ನಾಲ್ಕನೇ ಒಂದುಪಾಲು ಉಳಿದಮೇಲೆ, ಬುಗುಡಿಹೂವಿನಗಡ್ಡೆ, ಕಾಡುಹೆಸರು ಬೇರು, ಭದ್ರಮುಷ್ಟಿ, ಪರ್ಪಟಕ, ಕೆಂಪರತ್ತೆ, ಒಣಶುಂಠಿ, ಕಿರುತೇಗು ಬೇರು, ಹಿಪ್ಲಿ, ಜ್ಯೇಷ್ಠಮಧು, ಇಂದುಪ್ಪು, ಹಿಪ್ಲಿಮೂಲ, ಚಿತ್ರಮೂಲ, ಗಜಹಿಪ್ಲಿ, ಇವು ಪ್ರತಿಯೊಂದು ಬಗೆಯೂ ½ ಪಲಗಳಂತೆ ಕಲ್ಕಮಾಡಿ ಸೇರಿಸಬೇಕು. ನಾಲ್ಕುಪಾಲು ಹಾಲು, ಅಷ್ಟೇ ಕಬ್ಬಿನ ರಸ. ಈ ಘೃತವನ್ನು ಮೃದ್ವಗ್ನಿಯಿಂದ ಪಾಕಮಾಡಿ, ಸರ್ವ ಕ್ಷಯರೋಗಗಳಿಗೂ, ಗುಲ್ಮ, ವಿಷಮಜ್ವರಗಳಿಗೂ ಕೊಟ್ಟಲ್ಲಿ ಶಮನ. ಈ ಕೂಷ್ಮಾಂಡಕಘೃತವು ವರ್ಣ್ಯವಾಗಿಯೂ ಬಲಪ್ರದವಾಗಿಯೂ ಇದೆ.

॥ महाकूष्मांडकघृतम् ॥

कूष्मांडक विदारीक्षु वासा धात्री शतावरी ।
रंभा श्वदंष्ट्रा जीवंती वाजिगंधा महाबला ॥ ११० ॥

सारिबा जलमेतेषां प्रस्थं प्रस्थं पृथक् पृथक ।
नालिकेरोदकं प्रस्थं द्विप्रस्थं गोघृतस्य च ॥ १११ ॥

अजानां च पयःप्रस्थं कल्कद्रव्याणि पेषयेत् ।
द्राक्षादाडिमखर्जूरधान्यजीरकचंदनम् ॥ ११२ ॥

यष्ठी त्रिजातकं मुस्ता पञ्चकोलं लवङ्गकम् ।
विडङ्गमपि तक्कोलं पद्मकोशीरवालकम् ॥ ११३ ॥

रजनी त्रिफला कुष्टं सारिवा नागकेसरम् ।
कौंती यवानि वासारव्यं मरीचं कृष्णजीरकम् ॥ ११४ ॥

एतानि समभागानि कल्कीकृत्य विपाचयेत् ।
नववस्त्रेण दंडेन विपचेत् भिषगुत्तमः ॥ ११५ ॥

क्षौद्रप्रस्थं विनिक्षिप्य दिनपूर्वं घृतं पिबेत् ।
ज्वरकासक्षयश्वासवातरक्तविषार्तिजित् ॥ ११६ ॥

रक्तगुल्मं रक्तपित्तमस्थिस्रावं च शोणितम् ।
मूत्रकृछ्राश्मरीपांडुकामिलामेहनाशनम् ॥ ११७ ॥

अन्यांश्च पित्तजान् रोगान् वातजानपि नाशयेत् ।
माङ्गल्यं पूजितं श्रेष्ठं बलधातुविवर्धनम् ॥ ११८ ॥

नराणां वीर्यवृद्धिं च तथा स्त्रीणां ततोऽधिकम् ।
वंध्यानां लभते गर्भं गर्भिणीनां च शस्यते ॥ ११९ ॥

महाकूष्मांडकं सर्पिरश्विभ्यां निर्मितं पुरा ।

## ಮಹಾಕೂಷ್ಮಾಂಡಕ ಘೃತ

ಕೂಷ್ಮಾಂಡಕ ರಸ, ನೆಲಕುಂಬುಳುಗಡ್ಡೆಯ ರಸ, ಕಬ್ಬಿನ ರಸ, ಆಡ್ಸೋಗೆ ರಸ, ಹಸಿ ನೆಲ್ಲಿಕಾಯಿ ರಸ, ಶತಾವರೀ ರಸ, ಕದಳೀಬಾಳೆಯ ಗಡ್ಡೆಯ ರಸ, ನ್ಯಾಸೊಣಗು, ಜೀವಂತೀ, ಅಶ್ವಗಂಧಿ, ದೊಡ್ಡ ಕಡಿರ ಬೇರು, ನಾಮದ ಬೇರು, (ಇವುಗಳ ಕಷಾಯ) ಪ್ರತ್ಯೇಕ ಪ್ರತ್ಯೇಕ ಒಂದೊಂದು ಪ್ರಸ, ನಾಳಿಕೇರೋದಕ ಪ್ರಸ್ಥ 1, ದನದತುಪ್ಪ ಪ್ರಸ್ಥ 2, ಆಡಿನಹಾಲು ಪ್ರಸ್ಥ, ಕಲ್ಕದ್ರವ್ಯಗಳು—ದ್ರಾಕ್ಷೆ, ದಾಳಿಂಬ ಸಿಪ್ಪೆ, ಖರ್ಜೂರ,

ಕೊತ್ತಂಬರಿ ಬೀಜ, ಜೀರಕ, ಚಂದನ, ಜ್ಯೇಷ್ಠಮಧು, ಏಲಕ್ಕಿ, ಲವಂಗ ಚಕ್ಕೆ, ತಮಾಲಪತ್ರೆ, ಭದ್ರಮುಷ್ಟಿ, ಹಿಪ್ಲಿ, ಕಾಡುಹಿಪ್ಲಿ ಬೇರು, ಕಾಡುಮೆಣಸಿನ ಬೇರು, ಚಿತ್ರಮೂಲ (ಶುದ್ಧಿ), ಒಣಶುಂಠಿ, ಲವಂಗ, ವಾಯುವಿಳಂಗ, ತಕ್ಕೋಲ, ಪದ್ಮಕಾಷ್ಟ, ಲಾಮಂಚ, ಏಲವಾಲುಕ, ಅರಸಿನ, ಅಣಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಅವ್ವಲ್ ಕಂಕುಷ್ಠ, ನಾಮದ ಬೇರು, ನಾಗಕೇಸರಿ, ಅರೇಣಕ, ಅಯಮೋದಕ, ಅಡ್ಸೋಗೆ ಬೇರು, ಕರಿ ಮೆಣಸು, ಕರಿಜೀರಿಗೆ ಇವುಗಳನ್ನು ಸೇರಿಸಿ, ಪಾಕಮಾಡಿ, ಗಾಳಿಸಿದ ಮೇಲೆ ಒಂದುಪ್ರಸ್ಥ ಜೇನುತುಪ್ಪ ಸೇರಿಸಿ, ಚೆನ್ನಾಗಿ ಮಿಶ್ರಿಸಿ ಸೇವಿಸಲು ಜ್ವರ, ಕಾಸ, ಕ್ಷಯ, ಶ್ವಾಸ, ವಾತರಕ್ತ, ಅಸ್ಥಿಸ್ರಾವ, ಮೂತ್ರಕೃಚ್ಛ್ರ, ಅಶ್ಮರೀ, ಪಾಂಡುರೋಗ, ಕಾಮಿಲಾ, ಮೇಹ, ಪಿತ್ತದಿಂದುಂಟಾದ ಸಕಲ ರೋಗಗಳೂ, ವಾತರೋಗಗಳೂ ಶಮನವಾಗಿ ವೀರ್ಯವೃದ್ಧಿಯಾಗುವುದು. ಈ ಮಹಾಕೂಷ್ಮಾಂಡ ಘೃತವು ವಂಧ್ಯಾಸ್ತ್ರೀಯರಿಗೂ, ಗರ್ಭಿಣಿ ಯರಿಗೂ ಹಿತಕರವು.

॥ जीवंत्यादि घृतम् ॥

तुलां पचेत् जीवंत्या द्रोणेऽपां पादशेषिते ॥ १२० ॥

तत्क्वाथे द्विगुणक्षीरं घृतप्रस्थं विपाचयेत् ।
प्रपौंडरीककाकोलीपिप्पलीलोध्रसैंधवैः ॥ १२१ ॥

शताह्वामधुकद्राक्षासितादारुफलत्रयैः ।
कार्षिकैर्निशि तत्पीतं तिमिरापहरं परम् ॥ १२२ ॥

## ಜೀವಂತ್ಯಾದಿ ಘೃತ

ಬುಗುಡಿಹೂವಿನ ಗಡ್ಡೆ 100 ಪಲವನ್ನು 32 ಕುತ್ತಿ ಜಲದಲ್ಲಿ ಬತ್ತಿಸಿ, ಕುತ್ತಿ 8ನ್ನು ಗಾಳಿಸಿ ಇಳಿಸಿ, ಘೃತ ಪ್ರಸ್ಥ 1, ದನದ ಹಾಲು ಕುತ್ತಿ 2 ಕೂಡಾ ಹಾಕಿ, ಕಬ್ಬು, ಕಾಕೋಳೀ, ಹಿಪ್ಪಿಲಿ, ಪಾಚೋಟಿ ಕೆತ್ತೆ, ಇಂದುಪ್ಪು, ಸತಾಪೆ, ಜ್ಯೇಷ್ಠಮಧು, ದ್ರಾಕ್ಷೆ, ಸಕ್ಕರೆ, ದೇವದಾರು, ತ್ರಿಫಲೆಗಳು, ಇವು

ಗಳು ಕ್ಯಂಜಿ 3–3ರಂತೆ ಸೇರಿಸಿ ಚೂರ್ಣಿಸಿ, ಕಲ್ಕಮಾಡಿ ಸೇರಿಸಿ ಪಾಕ ದಲ್ಲಿಳಿಸಿ, ಸೇವಿಸಲು, ತಿಮಿರ ರೋಗವನ್ನು ಸಂಪೂರ್ಣ ಹೋಗಲಾಡಿಸು ವುದು.

॥ पटोलादि घृतम् ॥

पटोलनिंबकटुकादार्वीसेव्यवरावृषाः ।
सधन्वयाषत्रायंती पर्पटं पालिकं पृथक् ॥ १२३ ॥
प्रस्थमामलकानां च क्वाथयेद्मर्मणेऽभसः ।
तदाढकेऽर्धलिकुचैः घृतप्रस्थं विपाचयेत् ॥ १२४ ॥
मुस्ताभूनिंबयष्ट्याह्वकुटजोदीच्यचंदनैः ।
सपिप्पलीकैस्तत्सर्पिः घ्राणकर्णाक्षिरोगजित् ॥ १२५ ॥
विद्रधिज्वरदुष्टारुर्विसर्पापचिकुष्ठनुत् ।
विशेषाच्छुक्लतिमिरनक्तांध्योष्णाम्लदाहहृत् ॥ १२६ ॥

## ಪಟೋಲಾದಿ ಘೃತ

ಕಾಡು ಪಟವಲ, ಕಹಿಬೇವಿನ ಚಕ್ಕೆ, ಕಟುಕರೋಹಿಣಿ, ಮರದರ ಸಿನ ಸಿಪ್ಪೆ, ಲಾಮಂಚ, ತ್ರಿಫಲೆಗಳು, ಆಡ್ಸೋಗೆ ಬೇರು, ಬಳ್ಳಿಉರುಸಣಿಗೆ ಬೇರು, ಬ್ರಾಹ್ಮಿ, ಪರ್ಪಟಕ, ಇವು ಪ್ರತಿಯೊಂದು ಪಲ 1ರಂತೆ, ನೆಲ್ಲಿಕಾಯಿ ಪ್ರಸ್ಥ 1, ಇವುಗಳನ್ನು ಕಷಾಯುಮಾಡಿ ಗಾಳಿಸಿ, ಘೃತ ಪ್ರಸ್ಥ 1ನ್ನು ಸೇರಿಸಿ ಭದ್ರಮುಷ್ಠಿ, ಪುತ್ತರಿಚ್ಚುಂಡಬೇರಿನ ಸಿಪ್ಪೆ, ಜ್ಯೇಷ್ಠಮಧು, ಕೊಡಗಪಾಲರಿ, ಇರಿವೇರಿ ದಂಡು, ಚಂದನ, ಹಿಪ್ಪಲಿ, ಇವು ಪ್ರತಿಯೊಂದುಬಗೆಯೂ ಕ್ಯಂಜಿ 3ರಂತೆ ಸೇರಿಸಿ ಚೂರ್ಣಮಾಡಿ, ಕಲ್ಕ ಸೇರಿಸಿ, ಪಾಕಮಾಡಿ ಇಳಿಸಿ, ಈ ಘೃತವನ್ನು ಸೇವಿಸಲು, ಮೂಗು, ಕಿವಿ, ಕಣ್ಣು ಇವುಗಳಲ್ಲಿ ಉಂಟಾಗುವ ರೋಗಗಳೂ, ವಿದ್ರಧಿ, ಜ್ವರ, ದುಷ್ಟವ್ರಣ, ವಿಸರ್ಪ, ಅಪಚಿ, ಕುಷ್ಠ ಇವು ಗಳನ್ನೆಲ್ಲಾ ಹೋಗಲಾಡಿಸುವುದು. ವಿಶೇಷತಃ ಶುಕ್ಲ ರೋಗ, ತಿಮಿರ ರೋಗ, ರಾತ್ರಿ ಕಣ್ಣುಕಾಣದಿರುವಿಕೆ, ಉಷ್ಣವಿದಗ್ಧ, ನೇತ್ರ ದಾಹ ಇವು ಗಳನ್ನೆಲ್ಲಾ ಶಮನಮಾಡುವುದು.

॥ त्रिफलादि घृतम् ॥

त्रिफलाष्टपलं क्वाथ्यं पादशेषं जलाढके ।
तेन तुल्यपयस्तेन त्रिफलापलकल्कवान् ॥ १२७ ॥
अर्धप्रस्थे घृतात्सिद्धं सितया माक्षिकेण वा ।
युक्तं पिबेत्तात्तिमिरी तद्व्युक्तं वा वरारसम् ॥ १२८ ॥

## ತ್ರಿಫಲಾದಿ ಘೃತ

ತ್ರಿಫಲೆಗಳ ಬೀಜ ತೆಗೆದು ಕೇವಲ ಸಿಪ್ಪೆ ಪಲ 8, ಕಷಾಯಕ್ಕೆ ನೀರು ಕುತ್ತಿ 8 ಕುದಿಸಿ ಕುತ್ತಿ 2, ದನದ ತುಪ್ಪ ಕುತ್ತಿ ಅರ್ಧ, ಹಾಲು ಕುತ್ತಿ 2, ಬೀಜ ಸುಲಿದ ಅದೇ ತ್ರಿಫಲೆ ಪಲ 1ನ್ನು ಚೂರ್ಣಿಸಿ ಕಲ್ಕಮಾಡಿ, ಪಾಕ ಮಾಡಿ ಇಳಿಸಿದ ಘೃತಕ್ಕೆ ಸಕ್ಕರೆ, ಜೇನು ತುಪ್ಪ ಸೇರಿಸಿ ಸೇವಿಸಲು, (ತ್ರಿಫಲೆಯ ವಸ್ತ್ರಗಾಳಿತ ಚೂರ್ಣವನ್ನೂ ಸೇರಿಸಬಹುದು) ತಿಮಿರ ರೋಗವು ಉಪಶಮನ ಹೊಂದುವುದು.

॥ क्षीरिद्रुमादिघृतम् ॥

क्षीरिद्रुमांकुरं मुंडीं गोजिह्वां जलकंदकम् ।
कारस्करातसीलोध्रशंबराणां च पल्लवम् ॥ १२९ ॥
वारंती मुकुळं दूर्वां क्षोदयित्वा तु तद्रसे ।
क्षिप्त्वा तद्विगुणं क्षीरं तथा तालघटीरसम् ॥ १३० ॥
सर्पिः पिबेत् सूक्ष्मपिष्टैर्दार्वीयष्टीह्रिचंदनैः ।
जातीमुकुळशैलोत्थलाक्षाकतकसंयुतैः ॥ १३१ ॥
मंदपाके परिस्राव्य शुद्धे पात्रे निधापयेत् ।
तर्पणाश्च्योतनैरेतन्नेत्ररोगविनाशनम् ॥ १३२ ॥

## ನಾಲ್ಕುಮರಾದಿ ಘೃತ

ನಾಲ್ಕು ಮರಗಳ ಪಲ್ಲವ, ಮುತ್ತಿಳ್, ಪೊನ್ನಂಗಾಣಿ, ನೀರ್ಗಡ್ಡೆ, ಕಾರಸ್ಕರ (ಶುದ್ಧಿ), ಅಗಸ್ತ್ಯ ಪುಷ್ಪ, ಲೋಧ್ರ ಚೆಕ್ಕೆ, ತೆಟ್ಟ ಇವುಗಳ ಬೀಜ,

ತೆಚ್ಚಿ ಮೊಟ್ಟ್, (ವಾರಂತೀ ಮುಕುಳಂ) ಕದಿಕೆಹುಲ್ಲು ಇವುಗಳು ಪಲ 1ರಂತೆ ಸೇರಿಸಿ ಕ್ವಾಥಮಾಡಿ, ಮರದರಸಿನ ಸಿಪ್ಪೆ, ಜ್ಯೇಷ್ಠಮಧು, ಚಂದನ, ರಕ್ತಚಂದನ, ಜಾಜಿಮಲ್ಲಿಗೆಮೊಗ್ಗೆ, ಕಾವಿಮಣ್ಣು, ಕೋಲರಗು, ತೇಟಾಂಪರಳು ಹಾಕಿ ಕಲ್ಕಮಾಡಿ, ಮಂದ ಪಾಕದಲ್ಲಿಳಿಸಿ, ಶುದ್ಧಪಾತ್ರ ದಲ್ಲಿ ಇಡುವುದು. ಆ ಮೇಲೆ ತರ್ಪಣಾ, ಆಶ್ಚ್ಯೋತನಾದಿಗಳಿಂದ ನೇತ್ರ ರೋಗಗಳಿಗೆ ಉಪಯೋಗಿಸಿದ್ದಲ್ಲಿ ಬಹಳ ಹಿತಕರವಾಗಿ ಪರಿಣಮಿಸುವುದು.

॥ गोपात्मजादि घृतम् ॥

गोपात्मजाकमलचंदनसेव्यकुष्ठ ।
क्षीरिद्रुमाङ्कुरबिसोत्पलकंदमिश्रम् ।
दूर्वारसे जयति साधितमाज्यमाशु ।
क्षीरेण सार्धमिह सर्वविसर्पमुग्रम् ॥ १३३ ॥

## ಗೋಪಾತ್ಮಜಾದಿ ಘೃತ

ನಾಮದಬೇರಿನ ಸಿಪ್ಪೆ, ತಾವರೆ ನಾಳ, ಚಂದನ, ಲಾಮಂಚ, ಕಂಕುಷ್ಠ, ನಾಲ್ಕು ಮರಗಳ ಪಲ್ಲವ, ತಾವರೆ ಕುಸುಮ, ನೆಲಸಂಪಿಗೆ ಗಡ್ಡೆ ಇವುಗಳನ್ನು ಚೂರ್ಣಮಾಡಿ, ಕಲ್ಕ ಕೂಡಿಸಿ, ಕದಿಕೆಹುಲ್ಲು ಇದನ್ನು ಜಜ್ಜಿ ತೆಗೆದ ಸ್ವರಸದಲ್ಲಿ ದನದ ತುಪ್ಪವನ್ನು ನಿಯುಕ್ತ ಪ್ರಮಾಣದಲ್ಲಿ ಸೇರಿಸಿ, ಪಾಕದಲ್ಲಿಳಿಸಿ ಸೇವಿಸಲು ಸರ್ವ ವಿಸರ್ಪ ರೋಗಗಳಿಗೂ ಹಿತಕಾರಿಯಾಗುವುದು.

॥ तालीसादि घृतम् ॥

तालीसं ह्रीबेरं च मञ्जिष्ठां सारिबां तथा ।
मधुकं चंदनं लोध्रं कुङ्कुमं हरिचंदनम् ॥ १३४ ॥
उशीरं पद्मकं चैव मातुलुङ्गफलं वचम् ।
शताह्वा नागपुष्पं च पीतदारु हरिद्रकम् ॥ १३५ ॥

एतानि समभागानि कल्कं दृषदि पेषितम् ।
नवनीतं पचेत्प्रस्थं कल्कैरेभिः शनैर्भिषक् ॥ १२६ ॥
एतन्मुखगतं श्वित्रं सिध्मानि पिटकास्तथा ।
तथाव्यङ्गविकारं च क्षिप्रमेतद्व्यपोहति ॥ १२७ ॥

## ತಾಲೀಸಾದಿ ಘೃತ

ತಾಲೀಸಪತ್ರೆ, ಇರಿವೇರಿ ದಂಡು, ಮಂಜಿಷ್ಠ ಕಡ್ಡಿ, ನಾಮದಬೇರಿನ ಸಿಪ್ಪೆ, ಜ್ಯೇಷ್ಠಮಧು, ಚಂದನ, ಲೋಧ್ರಚೆಕ್ಕೆ, ಕುಂಕುಮಕೇಸರಿ, ರಕ್ತ ಚಂದನ, ಲಾಮಂಚ, ಪದ್ಮಕಾಷ್ಟ, ಮಾತುಲುಂಗ ಫಲದ ತಿರುಳು, ಸತಾಪೆ, ನಾಗಕೇಸರ, ಮರದರಶಿನ ಸಿಪ್ಪೆ, ಅರಸಿನ ಇವುಗಳನ್ನು ಸಮ ತೂಕ ಸೇರಿಸಿ, ಚೂರ್ಣಿಸಿ, ಕಲ್ಕ ಸೇರಿಸಿ ಪಾಕಮಾಡಿದ ನವನೀತವು, ಮುಖಗತ ಶ್ವಿತ್ರರೋಗಗಳನ್ನೂ, ಸಿಧ್ಮಗಳನ್ನೂ, ಪಿಟಕಾ ವ್ಯಂಗಾದಿ ವಿಕಾರಗಳನ್ನೂ ಹೋಗಲಾಡಿಸಿ, ಸುಖಲಾವಣ್ಯಗಳನ್ನೀಯುವುದು.

॥ गृहण्यांतकघृतम् ॥

पाठाचव्यकरञ्जयुग्मशरपुंखाग्न्यब्दशुंठीरसे ।
सिद्धं सैंधवपञ्चकोलकविषद्विक्षारहिंग्वांबुभिः ।
साजाजीद्वयदीप्यकैर्घृतमजादध्ना रसेनार्द्रका ।
भार्ङ्ग्याश्च रसेन वह्निजननं गुल्मग्रहण्यांतकम् ॥ १३८ ॥

## ಗ್ರಹಣ್ಯಾಂತಕ ಘೃತ

ಪಾಡಾವಳಿ ಗಡ್ಡೆ, ಕಾಡುಮೆಣಸಿನ ಬೇರು, ಕೊಂಗುಱ ಮರದ ಕೆತ್ತೆ, ರಾವುಬೀಜ ಮರದ ಕೆತ್ತೆ, ಶರಪುಂಖ ಬೇರು, ಚಿತ್ರಮೂಲಬೇರು (ಶುದ್ಧಿ), ಭದ್ರಮುಷ್ಟಿ, ಒಣಶುಂಠಿ ಇವುಗಳು ಪ್ರತಿಯೊಂದು ಬಗೆಯೂ 2 ಪಲದಂತೆ ಚೆನ್ನಾಗಿ ಜಜ್ಜಿ, 16 ಕುತ್ತಿ ನೀರಿನಲ್ಲಿ ಕುದಿಸಿ, 4 ಕುತ್ತಿಯಲ್ಲಿ

ನಿಲ್ಲಿಸಿ, ದನದ ತುಪ್ಪ ಕುತ್ತಿ 1, ಆಡಿನ ಮೊಸರು ನೀರು ಕುತ್ತಿ 1, ಹ
ಶುಂಠಿ ರಸ ಕುತ್ತಿ 1, ಪುಳಿಯಾರಿಲೆ ರಸ ಕುತ್ತಿ 1 ಕಲ್ಕಕ್ಕೆ ಇಂದುಪ್ಪ
ಹಿಪ್ಪಲಿ, ಹಿಪ್ಲಿಮೂಲ, ಕಾಡುಮೆಣಸಿನ ಬೇರು, ಚಿತ್ರಮೂಲ ಬೇ
(ಶುದ್ಧಿ), ಒಣಶುಂಠಿ, ಅತಿವಿಡಯು, ಯುವಕ್ಷಾರ, ಸರ್ಜಿಕ್ಷಾರ, ಇಂಗ
ಇರುವೇರಿ ದಂಡು, ಜೀರಿಗೆ, ಕುರಾಶಾಣಿ, ಓಮುಕಾಳು ಇವು ಬೇರೆಬೇ
ಕ್ಕೆಂಜಿ 1ರಂತೆ ಕಲ್ಕವಮಾಡಿ ಸೇರಿಸಿ, ಪಾಕದಲ್ಲಿಳಿಸಿ ಸೇವಿಸಲು ಅಗ್ನಿಬ
ವನ್ನು ವರ್ಧಿಸಿ, ಗುಲ್ಮರೋಗ, ಗ್ರಹಣಿ ರೋಗಗಳನ್ನು ನಿವೃತ್ತಿಪಡಿಸುವುದು

॥ ब्राह्मीघृतम् ॥

द्वौ प्रस्थौ स्वरसात् ब्रह्म्याः घृतप्रस्थं च साधितम् ।
व्योषश्यामात्रिवृद्दंतीशंखपुष्पीनृपद्रुमैः ॥ १३९ ॥
ससप्तलाकृमिहरैः कल्कितैरक्षसंमितैः ।
फलवृद्ध्या प्रयुञ्जीत परं मात्रा चतुष्पलम् ॥ १४० ॥
उन्मादकुष्ठापस्मारहरं वंध्यासुतप्रदम् ।
वाक्स्वरस्मृतिमेधाकृद्धन्यं ब्राह्मीघृतं स्मृतम् ॥ १४१ ॥

## ಅಪರಬ್ರಾಹ್ಮೀ ಘೃತ

ಬ್ರಾಹ್ಮೀ ಸ್ವರಸ 2 ಪ್ರಸ್ಥ, ಘೃತಪ್ರಸ್ಥ 2, ಕರಿಮೆಣಸು, ಹಿಪ್ಪಲಿ ಶುಂಠಿ, ತ್ರಿಗಡೆ, ಕರಿತ್ರಿಗಡೆ, ನಾಗದಂತಿ ಬೇರು, ಶಂಖಪುಷ್ಪ ಬೇರು ಕೊಂದೆಮರದ ಬೇರು, ಹಾಲೆಮರದ ಕೆತ್ತೆ, ವಾಯುವಿಳಂಗ ಇವುಗಳನ್ನು ಚೂರ್ಣಿಸಿ, ಕಲ್ಕ ಸೇರಿಸಿ, ಸುಪಾಕದಲ್ಲಿಳಿಸಿ ಸೇವಿಸಲು, ಉನ್ಮಾದ ಕುಷ್ಠ, ಅಪಸ್ಮಾರ ಇವುಗಳನ್ನು ನಿವೃತ್ತಿಪಡಿಸಿ, ವಾಕ್ ಸ್ವರ, ಸ್ಮೃತಿ ಮೇಧಾಶಕ್ತಿ ಇವುಗಳನ್ನು ವೃದ್ಧಿಸುವುದು.

॥ अष्टांगघृतम् ॥

वचेंदुलेखामंडूकीः शंखपुष्पीशतावरी ।
ब्रह्मसोमामृताब्रह्मीकल्कीकृत्यपलांशिकाः ॥ १४२ ॥

अष्टाङ्गं विपचेत्सर्पिः प्रस्थं क्षीरं चतुर्गुणम् ।
तत्पीतं धन्यमायुष्यं वाङ्मेधास्मृतिबुद्धिकृत् ॥ १४३ ॥

## ಅಷ್ಟಾಂಗ ಘೃತ

ಬಜೆ, ಉತ್ತರಣೆ, ಮುತ್ತಿಳ್, ಶಂಖಪುಷ್ಪದ ಬೇರು, ಶತಾವರಿ, ಲೆಕಾಯಿ ಸಿಪ್ಪೆ, ಅಮೃತಬಳ್ಳಿ, ಬ್ರಾಹ್ಮಿ ಇವುಗಳ ಕಲ್ಕ ಮಾಡಿ, ಬ್ಬು ಪಾಲು ಹಾಲು ಸೇರಿಸಿ, ಘೃತವನ್ನು ಪಾಕಮಾಡಿ ಇಳಿಸಿ ಸೇವಿ ) ಆಯುಷ್ಯ, ಬುದ್ಧಿ, ವಾಕ್, ಸ್ಮೃತಿ ಇವುಗಳಿಗೆ ವಿಶೇಷತಮ.

## ॥ सारस्वतघृतम् ॥

त्रिफला लक्ष्मणानंता समङ्गा सारिबा वचा ।
ब्राह्मी पाठा द्विबृहती द्विस्थिरा द्विपुनर्नवा ॥ १४४ ॥
सहदेवी रवेर्वल्ली पयस्या गिरिमाल्लिका ।
तोयकुंभे पचेदेतत् पलांशं पादशेषितम् ॥ १४५ ॥
तेन कौंती वचा कुष्ठकृष्णासैंधवसर्षपैः ॥
निरुक्सुरूपवत्साया संयुक्तं पयसा च गोः ॥ १४६ ॥
पुष्ययोगे घृतप्रस्थं सहेमशकलं श्रृतम् ।
पानाभ्यंजनभोज्येषु स्मृतिमेधाकरे परम् ॥ १४७ ॥
रक्षोघ्नं च विषघ्नं च सारस्वतमिदं घृतम् ।

## ಸಾರಸ್ವತ ಘೃತ

ತ್ರಿಫಲೆಗಳು, ಅಮೃತಬಳ್ಳಿ, ಪಚ್ಚೆರಂಗಿಬೇರು, ಪರಚ್ಯುಂಡ ಬೇರು, ುದಬೇರು, ಬಜೆ, ಬ್ರಾಹ್ಮಿ, ಪಾಡಾವಳಿ, ಸಣ್ಣ ಕುದನೆ ಬೇರು, ಕಂಟ ಬೇರು, ಓರೆಲೆ ಬೇರು, ಮೂರೆಲೆ ಬೇರು, ಪುನರ್ನವೆ ಬೇರು, ಶ್ವೇತ ರ್ನವೆ ಬೇರು, ಸಹದೇವಿ, ಎಕ್ಕೆ ಬೇರು, ಬುಗುಡಿ ಹೂವಿನ ಗಡ್ಡೆ, ಗಪ್ಪಾಲ ಬೇರು ಇವು ಪ್ರತಿಯೊಂದು 1 ಪಲಗಳಂತೆ ಸೇರಿಸಿ, 16

ಕುತ್ತಿ ಜಲದಲ್ಲಿ ಬತ್ತಿಸಿ, 4 ಕುತ್ತಿಯಲ್ಲಿ ನಿಲ್ಲಿಸಿ, ಗಾಳಿಸಿ ದನದ ತುಪ್ಪ ಕುತ್ತಿ 1ಕ್ಕೆ ಕುಂದ್ಲಿಕ, ಬಜೆ, ಅವ್ವಲ್ ಕಂಕುಷ್ಠ, ಹಿಪ್ಪಿಲಿ, ಇಂದುಪ್ಪು, ಕೊಡಗಪ್ಪಾಲರಿ ಪ್ರತಿಯೊಂದು ಕ್ವೆಂಚಿ 2ರಂತೆ ಚೂರ್ಣಿಸಿ, ಕಲ್ಕ ಸೇರಿಸಿ, ರೋಗಗಳಿಲ್ಲದಿರುವ ಪ್ರಥಮ ಕರು ಹಾಕಿರುವ ದನದ ಹಾಲು ಕುತ್ತಿ 2, ಸಹಾ ಸೇರಿಸಿ, ಪುಷ್ಯಯೋಗದಲ್ಲಿ ಘೃತವನ್ನು ಇಳಿಸಿ, ಶುದ್ಧವಾಡಿದ ಸುವರ್ಣ ಅಣುಗಳನ್ನು ನಿಯುಕ್ತಪ್ರಮಾಣದಲ್ಲಿ ಸೇರಿಸಿ ಪಾನನಸ್ಯ ಲೇಪನಗಳಿಂದ ಬುದ್ಧಿ, ಸ್ಮೃತಿ, ಮೇಧಾಶಕ್ತಿ ಇವುಗಳನ್ನು ಅಭಿವೃದ್ಧಿಸಿ, ಸ್ಫುರಣಶಕ್ತಿಯನ್ನುಂಟುಮಾಡಿ, ವಿಷ, ರಾಕ್ಷಸ, ಪಿಶಾಚಾದಿ ಬಾಧೆಗಳನ್ನು ಹೋಗಲಾಡಿಸುವ ಈ ಘೃತವೇ ಸಾರಸ್ವತ ಘೃತವು.

॥ २ सारस्वत घृतम् ॥

अजाक्षीरेऽभयाव्योषपाठोग्राशिग्रुसैंधवैः ।
सिद्धं सारस्वतं सर्पिः वाङ्मेधा स्मृतिवह्निकृत् ॥ १४८ ॥

## ಮತ್ತೊಂದು ಸಾರಸ್ವತ ಘೃತ

ಅಣಿಲೆಕಾಯಿ ಸಿಪ್ಪೆ, ಶುಂಠಿ, ಕರಿಮೆಣಸು, ಹಿಪ್ಪಿಲಿ, ಪಾಡಾವಳಿ ಗಡ್ಡೆ, ಬಜೆ, ನುಗ್ಗೆಬೇರು, ಇಂದುಪ್ಪು ಇವುಗಳನ್ನು 2 ಕ್ವೆಂಚಿಗಳಂತೆ ಸೇರಿಸಿ, ಚೂರ್ಣಿಸಿ, ಕಲ್ಕ ಸೇರಿಸಿ, ದನದ ತುಪ್ಪ ಕುತ್ತಿ ½, ಆಡಿನ ಹಾಲು ಕುತ್ತಿ ½ ಸೇರಿಸಿ, ಪಾಕದಲ್ಲಿಳಿಸಿ ಗಾಳಿಸಿ ಸೇವಿಸಲು, ಬುದ್ಧಿ ವಾಕ್, ಮೇಧಾಶಕ್ತಿ, ಸ್ಮೃತಿಯನ್ನುಂಟುಮಾಡುವುದು.

॥ समङ्गादि घृतम् ॥

समङ्गाधातकीलोध्रकुटन्नटबलाद्वयैः ।
महासहाक्षुद्रसहामुद्गबिल्वशलाटुभिः ॥ १४९ ॥
सकार्पासीफलैस्तोये साधितैस्साधितं घृतम् ।
क्षीरं मस्तुयुतं हंति शीघ्रं दंतोद्भवोद्भवान् ॥ १५० ॥
विविधानामयानेतद्वृद्धकाश्यपनिर्मितम् ।

## ಸಮಂಗಾದಿ ಘೃತ

ಪರಚ್ಛುಂಡಬೇರು, ಧಾತಕೀಕುಸುಮ, ಪಾಚೋಟ ಕೆತ್ತೆ, ಆನೆ ಮುಂಗುಬೇರು, ಕಡಿರಬೇರು, ದೊಡ್ಡ ಕಡಿರಬೇರು, ಮೂರೆಲೆ, ಓರೆಲೆ ಬೇರು, ಸಣ್ಣಹೆಸರು ಬೇರು, ಬಿಲ್ವಪತ್ರೆ. ಹತ್ತಿ ಬೀಜ ಈ ಔಷಧಿಗಳಿಂದ ಮಾಡಲ್ಪಟ್ಟ ಕಷಾಯಕ್ಕೆ ಘೃತ ಮತ್ತು ಮೊಸರುನೀರು ಸೇರಿಸಿ, ಪಾಕ ಮಾಡಿ ಇಳಿಸಿ ಸೇವಿಸಿದರೆ ಮಕ್ಕಳಿಗೆ ಹಲ್ಲು ಉಂಟಾಗುವ ಕಾಲದಲ್ಲಿ ಸಂಭವಿಸುವ ವಿವಿಧವಾದ ರೋಗಗಳನ್ನು ಹೋಗಲಾಡಿಸುವುದು.

॥ महापैशाचिकघृतम् ॥

जटिला पूतना केशी जारटी मर्कटी वचा ।
त्रायमाणा चया वीरा चोरकः कटुरोहिणी ॥ १५१ ॥
कायस्था सूकरी छत्रा अतिछत्रा पलंकषा ।
महापूरुषदंता च वयस्था नाकुली द्वयम् ॥ १५२ ॥
कटंभरा वृश्चिकाळी शालिपर्णि च तैः श्रतम् ।
सिद्धं चातुर्थिकोन्मादग्रहापस्मारनाशनम् ॥ १५३ ॥
महापैशाचिकं नाम घृतमेतद्यथामृतम् ।
बुद्धिमेधास्मृतिकरं बालानां चाङ्गवर्धनम् ॥ १५४ ॥

## ಮಹಾಪೈಶಾಚಿಕ ಘೃತ

ಜಟಾಮಾಂಸಿ, ಅಣಿಲೆಕಾಯಿ ಸಿಪ್ಪೆ, ಮಾಂಸೀ, ಓರಿಲತ್ತಾಮರ, ನಸುಗುನ್ನಿಬೇರು, ಬಜೆ, ಬ್ರಾಹ್ಮಿ, ನರ್ಮೋಳುಬೇರು, ಅಗಿಲುಗಂಧ, ಕಚ್ಚೂರ, ಕಟುಕರೋಹಿಣಿ, ಕಾಕೋಳಿ, ನೆಲತಾಳಿ ಗಡ್ಡೆ, ಕೊತ್ತಂಬಾಲ, ಸತಾಪೆ, ಕೋಲರಗು, ಶತಾವರಿ, ನೆಲ್ಲಿಕಾಯಿ, ಓರೆಲೆಬೇರು, ಮೂರೆಲೆ ಬೇರು, ನೆಲಸಂಪಿಗೆ ಗಡ್ಡೆ, ತೇಲ್ಗಡೆ ಬೇರು, ನವರೆಬತ್ತದ ಸಸಿಯ ಬೇರು, ಈ ಮದ್ದುಗಳಿಂದ ಪಾಕಮಾಡಿದ ಪೈಶಾಚಿಕ ಘೃತವು ಬುದ್ಧಿ, ಸ್ಮೃತಿ, ಮೇಧ, ಬಾಲಕರ ಅಂಗವರ್ಧನ ಇವುಗಳಿಗೆ ಹಿತಕರ.

॥ महत्पञ्चगव्यघृतम् ॥

द्विपञ्चमूलत्रिफलाद्विनिशाकुटजत्वचः ।
सप्तपर्णमपामार्गं नीलिनीं कटुरोहिणीम् ॥ १५५ ॥

शम्याकपुष्करजटाफल्गुमूलदुरालभाः ।
द्विपलाः सलिलद्रोणे पक्त्वा पादावशेषिते ॥ १५६ ॥

भार्ङ्गीपाठाढकीकुंभनिकुंभव्योषरोहिषैः ।
मूर्वाभूतीकभूनिंबश्रेयसीसारिबाद्वयैः ॥ १५७ ॥

मदयंत्यग्निनिचुलैरक्षांशैः सर्पिषः पचेत् ।
प्रस्थं तद्वत् द्रवैः पूर्वैः पञ्चगव्यमिदं घृतम् ॥ १५८ ॥

जरापस्मारजठरभगंदरहरं परम् ।
शोफार्शः कामिलापांडुगुल्मकासग्रहापहम् ॥ १५९ ॥

## ಮಹತ್ಪಂಚಗವ್ಯ ಘೃತ

ದಶಮೂಲಗಳು, ತ್ರಿಫಲೆಗಳು, ಅರಸಿನ, ಮರದರಸಿನ ಸಿಪ್ಪೆ, ಕೊಡಸಿಗನಬೇರಿನಮೇಲಿನಸಿಪ್ಪೆ, ಹಾಲೆಮರದಕೆತ್ತೆ, ಉತ್ತರಣೆ, ನೀಲಿ ಬೇರು, ಕಟುಕರೋಹಿಣಿ, ಕೊಂದೆಬೇರು, ಪುಷ್ಕರಮೂಲ, ಜಟಾಮಾಂಸಿ, ಕಾಡುಅತ್ತಿಬೇರು, ಪಚ್ಚೆರಂಗಿಬೇರು ಇವುಗಳು ಪ್ರತಿಯೊಂದು ಎರಡೆರಡು ಪಲಗಳಂತೆ, ಒಂದು ದ್ರೋಣ ಜಲದಲ್ಲಿ ಪಾದಾಂಶ ಬತ್ತಿಸಿ, ಕಿರುತೇಗುಬೇರು, ಪಾಡಾವಳಿ ಬೇರು, ತೊಗರಿಬೇರು, ತ್ರಿಗಡೆ, ನಾಗದಂತಿ ಬೇರು, ಕರಿಮೆಣಸು, ಹಿಪ್ಲಿ, ಶುಂಠಿ, ಬೆಟ್ಟುಕರಂಡೆ ಬೇರು, ಪೆರಿಕುರುಂಬ, ಪೂತಿಯುಣತ್ತಿ, ಪುತ್ತರಿಚ್ಚುಂಡಬೇರಿನ ಸಿಪ್ಪೆ, ಅತ್ತಿಹಿಪ್ಲಿ, ನಾಮದಬೇರು, ಹಾಲುಬಳ್ಳಿಬೇರು, ಧಾತಕೀಕುಸುಮ, ಚಿತ್ರಮೂಲಬೇರು (ಶುದ್ಧಿ), ನೀರ್ಕಡುಂಬು ಇವು ಪ್ರತಿಯೊಂದು ಅಕ್ಷಪ್ರಮಾಣದಂತೆ ದನದ ಸೆಗಣಿನೀರು, ಹಾಲು, ದಧಿ (ಗೋಮೂತ್ರಂ ಗೋಮಯಂ ಕ್ಷೀರಂ ಸರ್ಪಿರ್ದಧಿ ಚ ರೋಚನಾ । ಷಡಂಗಮೇತನ್ಮಾಂಗಲ್ಯಂ ಪವಿತ್ರಂ ಸರ್ವದಾ

ಗವಾಂ॥) ಗೋಮೂತ್ರ, ತುಪ್ಪ, ಇವುಗಳು ಪ್ರಸ್ಥ, ಇದು ಪಂಚಗವ್ಯ ಘೃತವು, ರೋಗ, ಜ್ವರ, ಅಪಸ್ಮಾರ, ಉದರಭಗಂದರ, ಶೋಫಅರ್ಶಸ್ಸ್, ಕಾಮಿಲಾ, ಪಾಂಡು, ಗುಲ್ಮ, ಕಾಸ, ಗ್ರಹಬಂಧ ಈ ರೋಗಗಳಿಗೆ ಬಹಳ ಹಿತಕರವು.

॥ सर्वामयांतकघृतम् ॥

बलामूलशतं ग्राह्यं दशमूलशतं तथा ।
शतावर्या गुडूच्याश्च द्राक्षा मधुक दारु च ॥ १६० ॥
माषाश्वगंधां चैरंडं कुलत्थं बदरं यवाः ।
भूपीलु वैजयंती च मधुशिग्रुपुनर्नवाः ॥ १६१ ॥
वरणं सिंदुवारं च सोमं चार्कप्रसारिणीः ।
हिंस्राकुलत्थवह्निं च हपुषा च त्रिवृद्वचा ॥ १६२ ॥
सैरिकं च महावृक्षो मोरटार्जुनमेव च ।
रास्ना कार्पासबीजं च भद्रदारु महाबला ॥ १६३ ॥
करञ्जद्वयकैरंडशुंठी च तृणपञ्चकम् ।
एषां पृथक् पञ्चपलं जले खारी चतुष्टये ॥ १६४ ॥
अष्टभागावशिष्टे तु घृतप्रस्थं च योजयेत् ।
तिलतैलं चतुःप्रस्थं प्रस्थमेरंडसंभवम् ॥ १६५ ॥
देवदारु वचा कुष्टं चरलं चंदनं तथा ।
मांसी रास्ना शताह्वा च शैलेयागुरु चोरकम् ॥ १६६ ॥
काकोलीक्षीरकाकोली जीवकर्षभकावुभौ ।
मेदा चैव महामेदा पत्तङ्गं रक्तचंदनम् ॥ १६७ ॥
मधुकोशीरमञ्जिष्टा कौंती व्याघ्रनखं तथा ।
त्रिगंधां नागपुष्पं च तगरं पद्मकं तथा ॥ १६८ ॥
तुरङ्गगंधा मञ्जिष्टा हिंगु सौभाञ्जनं तथा ।
कुष्टं मधुक लोध्रं च विडङ्गं सर्जगुग्गुलु ॥ १६९ ॥

एषां निष्कं पृथक् पिष्ट्वा शनै र्मृद्वग्निना पचेत् ।
क्रोडा वरिस्रुतं सम्यक् स्वनिगुप्तं निधापयेत् ॥ १७० ॥
नस्ये पाने तथाभ्यङ्गे बस्तावेतत्तु पूजितम् ।
आढ्यवाते शिरःकंपे खलाये खञ्जसप्तके ॥ १७१ ॥
मन्यास्तंभे हनुस्तंभे ग्रीवास्तंभे च जिह्वके ।
आक्षेपके शिरोरोगे पक्षाघाते तथार्दिते ॥ १७२ ॥
ऊरुस्तंभे करस्तंभे तथा श्वास बलासके ।
योनिशूले बस्तिशूले हृच्छूले च तथैव च ॥ १७३ ॥
कुक्षिशूले पार्श्वशूले कंठशूले विशेषतः ।
विंशतिः श्लेष्मदोषेषु अशीतिर्वातरोगके ॥ १७४ ॥
चत्वारिंशच्च पित्तेषु सर्वरोगान् जयेदिदम् ।
सर्वज्वरक्षयोन्मादश्वासापस्मारपाप्मजित् ॥ १७५ ॥
सर्वामयांतकं नाम सिंहः क्षुद्रमृगान् यथा ।

## ಸರ್ವಾಮಯಾಂತಕ ಘೃತ

ಕಡಿರಬೇರು ಪಲ 100, ದಶಮೂಲಗಳು ಪಲ 100, ಶತಾವರಿ, ಅಮೃತಬಳ್ಳಿ, ದ್ರಾಕ್ಷೆ, ಜ್ಯೇಷ್ಟಮಧು, ದೇವದಾರು, ಉದ್ದು, ಅಶ್ವಗಂಧಿ, ಸಣ್ಣಹರಳು ಬೇರು, ಹುರುಳಿ, ಬುಗರಿಬೀಜ, ಗೋಧಿ, ನೆಲನಾರಂಗ, ತಾತಾರ್ವಲ್ ಬೇರು, ನುಗ್ಗೆ ಬೇರು, ಪುನರ್ನವೆ ಬೇರು, ನೀರ್ವಾದಳಕೆತ್ತೆ, ಕರಿಯನೆಕ್ಕಿ, ಸೋಮವಲ್ಲಿ, ಎಕ್ಕೆಗಿಡದ ಮೂಲ, ಪ್ರಸಾರಿಣೀ, ಮಾಂಸೀ, ಹುರುಳಿ, ಚಿತ್ರಮೂಲ (ಶುದ್ಧಿ), ಬೆಟ್ಟುಕರಂಡೆಬೇರು, ತ್ರಿಗಡೆಬೇರು, ಬಜೆ, ಕರಿಕುರಿಞಿ, ಕೊಂದೆಬೇರು, ಪೆರಿಕುರುಂಬ, ಬಣುಪು, ಅರತ್ತೆ, ಹತ್ತಿ ಬೀಜ, ಮರದರಸಿನ ಸಿಪ್ಪೆ, ದೊಡ್ಡ ಕಡಿರಬೇರು, ಕೊಂಗುರ್ಮರದ ಕೆತ್ತೆ, ರಾವುಬೀಜ ಮರದ ಕೆತ್ತೆ, ಸಣ್ಣಹರಳಬೇರು, ಒಣಶುಂಠಿ, ತೃಣಪಂಚ ಮೂಲಗಳು, ಈ ಹಿಂದೆ ಹೇಳಿದ ಎಲ್ಲಾ ಮದ್ದುಗಳು ಬೇರೆಬೇರೆ 5 ಪಲ ಗಳಂತೆ ಸೇರಿಸಿ 256 ಕುತ್ತಿ ನೀರಿನಲ್ಲಿ (4 ಖಾರಿ ಜಲದಲ್ಲಿ) 8ನೇ

ಒಂದಂಶ ನಿಲ್ಲಿಸಿ, ದನದ ಘೃತ ಕುತ್ತಿ 1, ತಿಲತೈಲ ಕುತ್ತಿ 4, ಹರಳೆಣ್ಣೆ ಕುತ್ತಿ 1, ಕಲ್ಕಕ್ಕೆ ದೇವದಾರು, ಬಜೆ, ಕಂಕುಷ್ಟ, ಚರಳ, ಚಂದನ, ಜಟಾ ಮಾಂಸಿ, ಅರತ್ತೆ, ಸತಾಪೆ, ಕಲ್ಮದ, ಅಗಿಲುಗಂಧ, ಕಚ್ಚೂರ, ಕಾಕೋಳಿ, ಕ್ಷೀರಕಾಕೋಳಿ, ಜೀವಕ, ಋಷಭಕ, ಮೇದ, ಮಹಾಮೇದ, (ಅಭಾವೇವರೀ ವಿದಾರ್ಯರ್ಶ್ವಗಂಧಾ ವಾರಾಹೀ ಚ ಕ್ರಮಾತ್ ಕ್ಷಿಪೇತ್) ಚಪ್ಪಂಗ, ರಕ್ತ ಚಂದನ, ಜ್ಯೇಷ್ಠಮಧು, ಲಾಮಂಚ, ಮಂಜಿಷ್ಟಕಡ್ಡಿ, ಅರೇಣುಕ, ವ್ಯಾಘ್ರ ನಖ, ಏಲಕ್ಕಿ, ಲವಂಗಚೆಕ್ಕೆ, ತಮಾಲಪತ್ರೆ, ನಾಗಕೇಸರಿ, ಪದ್ಮಕೇಸರಿ, ತಗರ, ಅಶ್ವಗಂಧಿ, ಮಂಜಿಷ್ಠಕಡ್ಡಿ, ಇಂಗು, ನುಗ್ಗೆ ಕೆತ್ತೆ, ಕಂಕುಷ್ಠ, ಇಪ್ಪೆ ತಿರುಳು, ಪಾಚೋಟಿ ಕೆತ್ತೆ, ವಾಯುವಿಳಂಗ, ಚಂಚಲ್ಯ, ಗುಗ್ಗುಲು, ಇವು ಬೇರೆಬೇರೆ 1 ಕೈಂಜಿ ಪ್ರಮಾಣಗಳಂತೆ ಚೂರ್ಣಿಸಿ, ಕಲ್ಕ ಹಾಕಿ ಮೃದ್ವಗ್ನಿ ಯಿಂದ, ಪಾಕಮಾಡಿ ಇಳಿಸಿ, ಗಾಳಿಸಿ ಅತಿ ಜಾಗರೂಕತೆಯಿಂದ ಸೇವನೆ ಮಾಡುವುದರಿಂದಲೂ, ಸರಿಯಾಗಿ ಅಭ್ಯಂಗ ಮಾಡುತ್ತಾ ಬರುವುದ ರಿಂದಲೂ, ಬಸ್ತಿವಿಧಿ, ನಸ್ಯ—ಈ ರೀತಿಗಳಿಂದ ಉಪಯೋಗಿಸುತ್ತಾ ಬರು ವುದರಿಂದಲೂ, ಆಢ್ಯವಾತ, ಶಿರಃಕಂಪ, ಕುಲಾಯ, ಖಂಜ, ಮನ್ಯಾ ಸ್ತಂಭ, ಹನುಸ್ತಂಭ, ಗ್ರೀವಾಸ್ತಂಭ, ಜಿಹ್ವಕ, ಆಕ್ಷೇಪಕ, ಶಿರೋರೋಗ, ಪಕ್ಷಾಘಾತ, ಅರ್ದಿತ, ಊರುಸ್ತಂಭ, ಯೋನಿಶೂಲ, ಕುಕ್ಷಿಶೂಲ, ಪಾರ್ಶ್ವಶೂಲ, ಕಂಠಶೂಲ, ವಿಶೇಷತಃ ವಿಶಂತಿಶ್ಲೇಷ್ಮದೋಷಗಳಲ್ಲಿಯೂ, 40 ವಿಧದ ಪಿತ್ತದೋಷಗಳಲ್ಲಿಯೂ, ಅಶೀತಿ ವಿಧದ ವಾತದೋಷ ಗಳಲ್ಲಿಯೂ, ಸರ್ವಜ್ವರ, ಕ್ಷಯ, ಉನ್ಮಾದ, ಅಪಸ್ಮಾರ, ಕರಸ್ತಂಭ, ಶ್ವಾಸ, ಬಲಾಸಕ ಮುಂತಾದ, ಪಾಪಕರ್ಮಗಳಿಂದ ಸಂಭವಿಸಿದ ರೋಗಗಳಲ್ಲಿಯೂ, ಮೃಗರಾಜನಾದ ಕೇಸರಿಯು, ಜಿಂಕೆ, ಮೊಲ, ಪಶು ಮೊದಲಾದ ಕ್ಷುದ್ರ ಮೃಗಗಳನ್ನು ವಿನಾಶಿಸಿದಂತೆ ಈ ಸರ್ವಾಮಯಾಂತಕ ಘೃತವು ಸರ್ವವಿಧದ ರೋಗಗಳನ್ನು ಹೋಗಲಾಡಿಸಿ ಶ್ರೇಷ್ಠವೆನಿಸಿರುವುದು.

॥ जात्यादि घृतम् ॥

जातीकिंशुकपर्पटाख्यसुषवीमायूरिकाभद्रिका ।
निर्गुंडीमृदुकुञ्चिकाकटुकिकादूर्वानिशानां रसे ।

सर्पिः सिद्धमनेन सूक्ष्मवदनस्समाश्रिताः स्राविणो ।
गंभीराः सुरुजो व्रणाःसगतिकाः शुध्यंति रोहंति च ॥ १७६ ॥

## ಜಾತ್ಯಾದಿ ಘೃತ

ಜಾಜಿಮಲ್ಲಿಗೆ ಎಲೆ, ಕಿಂಶುಕಎಲೆ, ಪರ್ಪಟಕಹುಲ್ಲು, ಪುಲ್ಲಾನಿ ಎಲೆ, ಸಣ್ಣ ಉತ್ತರಣೆ, ಚೆರೂಳ, ಕರಿಯುನೆಕ್ಕಿ ಎಲೆ, ಮೃದುಕುಂಚಿಕಾ, ಕಟುಕರೋಹಿಣಿ, ಕದಿಕೆ ಹುಲ್ಲು, ಇವುಗಳ ರಸಗಳಲ್ಲಿ ಪಾಕ ಮಾಡಿದ ಘೃತವು ವ್ರಣಾದಿಗಳಿಗೆ ಹಿತಕಾರಿಯು.

## ॥ २ त्रिफलादि घृतम् ॥

त्रिफलात्रिवृताक्काथे सक्षीरं कटुकं हविः ।
क्षिप्त्वा कंपिल्यंस्नुग्भ्यां क्षीरं तावच्च निक्षिपेत् ॥ १७७ ॥
समालोड्य शनैर्धीमान्मृदुनागोमयाग्निना ।
पचेत् बिंदुघृतं नाम्नाऽन्येण प्रपूजितम् ॥ १७८ ॥

## ಮತ್ತೊಂದು ತ್ರಿಫಲಾದಿ ಘೃತ

ತ್ರಿಫಲೆಗಳು, ತ್ರಿಗಡೆ, ಕಷಾಯು, ಹಾಲು, ತುಪ್ಪ, ಕಂಪಿಲ್ಲ, ಸ್ನುಕ್, ಇವುಗಳ ಹಾಲು ಘೃತದಷ್ಟೆ ಸೇರಿಸಿ ತ್ವಗ್ದೋಷ ಶಮನ.

## ॥ नालिकेरघृतम् ॥

केरीस्नुक् पयसा युक्तं सक्षीरं साधितं घृतम्
त्रायंती स्वरसे सम्यक् शोफगुल्मोदरापहम् ॥ १७९ ॥

## ನಾಳಿಕೇರ ಘೃತ

ತೆಂಗಿನ ಹಾಲು, ಸ್ನುಕ್ ಪಯಸ್ಸು, ಬ್ರಾಹ್ಮೀ ಸ್ವರಸ, ಇವುಗಳು ಪ್ರತಿಯೊಂದು ಕುತ್ತಿ 1ರಂತೆ ಸೇರಿಸಿ ದನದ ತುಪ್ಪ ಕುತ್ತಿ 1, ದನದ

ಲು ಕುತ್ತಿ 1, ಕೂಡಿಸಿ ಪಾಕ ಮಾಡಿ ಇಳಿಸಿ ಗಾಳಿಸಿ ಸೇವಿಸಲು
ಘ, ಗುಲ್ಮ, ಉದರ ರೋಗಗಳು ಉಪಶಮನ ಹೊಂದುವುವು.

॥ विरेचनघृतम् ॥

क्वाथेन कल्केन विरेचनानाम् ।
सर्पिः श्रतं स्नुक्पयसा समेतम् ।
विरेकयोगात् सकलोदराणि ।
प्रणाशयेज्योतिरिवांधकारम् ॥ १८० ॥
निकुंभकुंभत्रिफलागवाक्षी
स्नुक्शाङ्खिर्नीनीलिनितिल्वकानि ।
शम्याककंपिल्लकहेमदुग्धा ।
दुग्धं च मूत्रं च विरेचनानि ॥ १८१ ॥

ವಿರೇಚನ ಘೃತ

ನಾಗದಂತಿ, ತ್ರಿಗಡೆ, ತ್ರಿಫಲೆಗಳು, ಗವಾಕ್ಷಿ, ಸ್ನುಕ್, ಶಂಖಪುಷ್ಪದ
ು, ನೀಲಿ ಬೇರು, ತಿಲ್ವಕ, ಕೊಂದೆ, ಕಂಪಿಲ್ಲಕ, ಹೇಮದುಗ್ಧ, ದನದ
ು, ಗೋಮೂತ್ರ, ಇವುಗಳು ವಿರೇಚನೆಗಳು. ಇವುಗಳ ಕ್ವಾಥ ಕಲ್ಕ
ಂದ ಸ್ನುಕ್ ಪಯಸ್ಸಿನಿಂದ ತಯಾರಿಸಿದ ಘೃತವು, ವಿರೇಚನೆ
ಿ, ಉದರ ರೋಗವನ್ನು ಶಮನ ಮಾಡುತ್ತದೆ.

॥ पञ्चगव्यघृतम् ॥

सिद्धं वचैलात्रिफलाविडङ्ग ।
यष्ट्याह्वशौंडीकटुरोहिणीभिः ।
द्राक्षाहरिद्राद्वयभद्रमुस्ता ॥
सपाठमञ्जिष्ठवृषाग्निकल्कैः ॥ १८२ ॥
सर्पिर्दधिक्षीरपुरीषमूत्रै ।
गवां समस्तैरिति पञ्चगव्यम् ।

रक्षोघ्नमायुष्यमतीवधन्यम् ।
मेधास्मृतिश्रीप्रतिभाकरं च ॥ १८३ ॥

नष्टस्वराणां विगतप्रजानां ।
स्त्रीणां च पथ्यं विगतार्तवानाम् ।

## ಪಂಚಗವ್ಯ ಘೃತ

ಬಜೆ, ಏಲಕ್ಕಿ, ತ್ರಿಫಲೆಗಳು, ವಾಯುವಿಳಂಗ, ಜ್ಯೇಷ್ಠಮಧು, ಹಿಪ್ಪಲಿ ಕಟುಕರೋಹಿಣಿ, ದ್ರಾಕ್ಷೆ, ಅರಸಿನ, ಮರದರಸಿನ ಸಿಪ್ಪೆ, ಭದ್ರಮುಷ್ಟಿ, ಪಾಡಾವಳಿ ಬೇರು, ಮಂಜಿಷ್ಠ ಕಡ್ಡಿ, ಆಡ್ಸೋಗೆ ಬೇರು, ಚಿತ್ರಮೂಲ (ಶುದ್ಧಿ), ಇವುಗಳ ಕಲ್ಕದಲ್ಲಿ ದನದ ತುಪ್ಪ, ಮೊಸರುನೀರು, ಕ್ಷೀರ, ಸೆಗಣಿ ನೀರು, ಗೋಮೂತ್ರ, ಈ 5 ಬಗೆಗಳನ್ನು ಸೇರಿಸಿ ಪಾಕದಲ್ಲಿಳಿಸಿ ಸೇವಿಸಲು, ಭೂತ, ಗ್ರಹ, ಪೀಡಾದಿಗಳನ್ನು ಹೋಗಲಾಡಿಸಿ, ಆಯುಷ್ಯಾಭಿವೃದ್ಧಿ, ಮೇಧಾಸ್ಮೃತಿ, ಪ್ರತಿಭಾಶಕ್ತಿಗಳನ್ನೀಯುವುದಲ್ಲದೆ, ಸ್ವರಭಂಗ, ಮಕ್ಕಳಿಲ್ಲದ ಸ್ತ್ರೀಯರು, ನಷ್ಟಾರ್ತವವುಳ್ಳವರು ಈ ಘೃತದ ಸೇವನೆಯಿಂದ ಕೃತಕೃತ್ಯರಾಗುವರು.

॥ ब्राह्मीघृतम् ॥

समूलपत्रमुद्धृत्य प्रक्षाळ्य च वारिणा ।
उलूखले तु संक्षुद्य रसः साधु निपीडयेत् ॥ १८४ ॥

चतुर्गुणरसे तस्मिन् घृतप्रस्थं विपाचयेत् ।
हरिद्रामलकी चैव त्रिवृता च हरीतकी ॥ १८५ ॥

एतेषां पलिका भागा स्मृतशेषस्तुकार्षिकाः ।
पिप्पल्योऽथ विडङ्गानि सैंधवं शर्करा वचा ॥ १८६ ॥

एतत् प्राशितमात्रेण वाग्विशुद्धिस्तु जायते ।
एतत् ब्राह्मीघृतं धन्यं सरस्वत्या विनिर्मितम् ॥ १८७ ॥

## ಬ್ರಾಹ್ಮೀ ಘೃತ

ಬ್ರಾಹ್ಮಿಯ ಸ್ವರಸ ಪ್ರಸ್ಥ 4, ಘೃತ ಪ್ರಸ್ಥ 1, ಅರಸಿನ, ನೆಲ್ಲಿ ಕಾಯಿಯ ಸಿಪ್ಪೆ, ತ್ರಿಗಡೆ, ಅಣಿಲೆಕಾಯಿಯ ಸಿಪ್ಪೆ, ಹಿಪ್ಪಲಿ, ವಾಯು ವಿಳಂಗ, ಇಂದುಪ್ಪು, ಪಂಚಸಾರ ಬಜೆ, ಇವುಗಳು ಕ್ರೆಂಜಿ 3ರಂತೆ ಕಲ್ಕ ಸೇರಿಸಿ ಪಾಕದಲ್ಲಿಳಿಸಿ, ಗಾಳಿಸಿ ಸೇವಿಸಲು, ವಾಕ್‌ಶುದ್ಧಿಯುಂಟಾಗು ವುದು. ಈ ಬ್ರಾಹ್ಮೀಘೃತವು ಸರಸ್ವತೀ ದೇವಿಯಿಂದ ಲೋಕಹಿತ ಕ್ಕೋಸ್ಕರ ಹೇಳಲ್ಪಟ್ಟಿರುವುದು.

॥ विडङ्गादि घृतम् ॥

विडङ्गपञ्चाङ्गुलमूलशुंठी ।
पलांडुसिद्धात् पयसस्सुजातम् ।
दधिप्रमथ्यात्र समुत्थितं यत् ।
ससैंधवं तन्नवनीतमद्यात् ॥ १८८ ॥
विबंधकोष्टानिल पित्तगुल्म ।
हृदामयं त्वार्तिविनाशनाय ।

## ವಿಡಂಗಾದಿ ಘೃತ

ವಾಯುವಿಳಂಗ, ಸಣ್ಣ ಹರಳು, ಒಣಶುಂಠಿ, ನೀರುಳ್ಳಿ, ಹಾಲು, ಮೊಸರು, ಬೆಣ್ಣೆ, ಇಂದುಪ್ಪು, ಈ ಘೃತವು ಮಲಬಂಧ, ಕೋಷ್ಠವಾತ, ಗುಲ್ಮ, ಹೃದ್ರೋಗ, ಅಂತ್ರರೋಗ, ಇವುಗಳನ್ನು ಹೋಗಲಾಡಿಸುವುದು.

॥ शूलघृतम् ॥

अपामार्गस्य निर्यूहे घृतं वैद्यो विपाचयेत् ।
पिप्पलीकल्कसंयुक्तं परं शूलविनाशनम् ॥ १८९ ॥

## ಶೂಲಕ್ಕೆ ಘೃತ

ಸಣ್ಣ ಉತ್ತರಣೆಯ ಕಷಾಯಕ್ಕೆ ಹಿಪ್ಪಲಿ ಕಲ್ಕ ಹಾಕಿ ಪಕ್ವ ಮಾಡಿದ ಘೃತವು ಶೂಲ ವಿನಾಶನ ಮಾಡುವುದು.

॥ मर्मक्षतघृतम् ॥

भद्रिकास्वरसे सर्पिः पक्वं क्षीरसमन्वितम् ।
जलप्रसादनं कल्कं सितया च विमिश्रितम् ॥ १९० ॥
सर्वमर्मक्षतोत्थानां रुजां प्रशमनं परम् ।

## ಮರ್ಮಕ್ಷತಕ್ಕೆ ಘೃತ

ಚಿರೂವುಳ ಸ್ವರಸದಲ್ಲಿ ಹಾಲು ಸೇರಿಸಿ ತೇಟಾಂಪರಳು ಕಲ್ಕ ಹಾ ಪಾಕ ಮಾಡಿ ಸಕ್ಕರೆ ಸೇರಿಸಿ ಸೇವಿಸಲು ಮರ್ಮಕ್ಷತಕ್ಕೆ ಹಿತಕರವು.

॥ बलादि घृतम् ॥

बलाचित्ररसे सिद्धं सर्पिः क्षीरं चतुर्गुणम् ॥ १९१ ॥
जीरकद्वयमृद्विकामधुकेन समन्वितम् ।
समीरणाधिकारघ्नं कासहिक्कांत्रनाशनम् ॥ १९२ ॥

## ಬಲಾದಿ ಘೃತ

ಕಡಿರ ಬೇರು, ಸಣ್ಣ ಹರಳು ಬೇರು ಕಷಾಯದಲ್ಲಿ ತುಪ್ಪ, ಹಾ ನಾಲ್ಕು ಭಾಗ ಹಾಕಿ, ಜೀರಿಗೆ, ಕರಿಜೀರಿಗೆ, ದ್ರಾಕ್ಷೆ, ಜ್ಯೇಷ್ಠಮಧು, ಕ ಸೇರಿಸಿ ಶಾಕ ಮಾಡಿ, ಯುಕ್ತ ಪ್ರಮಾಣದಿಂದ ಸೇವಿಸುವುದರಿಂದ ವಾ ಪೀಡೆ, ಕೆಮ್ಮು, ಅಂತ್ರವೇದನ ನಾಶಮಾಡುವುದು.



ಇತಿ ಸಹಸ್ರಯೋಗದರ್ಪಣದೋಳ್
ಘೃತಯೋಗ ಪ್ರಕರಣವು
ಸಂಪೂರ್ಣವು.

# ॥ अथ तैलप्रकरणम् ॥

# ತೈಲಪ್ರಕರಣವು.

॥ धान्वंतरं तैलम् ॥

बलामूलकषायस्य भागाः षट् पयसस्तथा ।
यवकोलकुलत्थानां दशमूलस्य चैकतः ॥ १ ॥
निष्क्काथभागो भागश्च तैलस्य च चतुर्दश ।
द्विमेदादारुमञ्जिष्ठाकाकोलिद्वयचंदनैः ॥ २ ॥
सारिवाकुष्टतगरजीवकर्षभसैंधवैः ।
कालानुसार्यशैलेयवचागुरुपुनर्नवैः ॥ ३ ॥
अश्वगंधावरीक्षीरशुक्लायष्टीवरारसैः ।
शताह्वासूर्पपर्ण्येलात्वक्पत्रैः श्लक्ष्णकल्कितैः ॥ ४ ॥
पक्वं मृद्वग्निना तैलं सर्ववातविकारजित् ।
सूतिकाबालमर्मास्थिक्षतक्षीणेषुपूजितम् ॥ ५ ॥
ज्वरगुल्मग्रहोन्मादमूत्राघातांत्रवृद्धिजित् ।
धन्वंतरेरभिमतं योनिरोगक्षयापहम् ॥ ६ ॥

## ಧಾನ್ವಂತರಂ ತೈಲಂ

ಕಡಿರ ಬೇರು ಪಲ 24ನ್ನು 24 ಕುತ್ತಿ ನೀರಿನಲ್ಲಿ ಕುದಿಸಿ, ಬತ್ತಿಸಿ 6 ಕುತ್ತಿ, ಹಾಲು ಕುತ್ತಿ 6, ಯುವಧಾನ್ಯ, ಬುಗರಿಬೀಜ, ಹುರುಳಿ, ದಶ ಮೂಲಂಗಳು, ಇವುಗಳು ಪ್ರತಿಯೊಂದು ಕೈಂಜಿ 77ನ್ನು ಚೆನ್ನಾಗಿ ಜಜ್ಜಿ ಕಷಾಯಕ್ಕೆ ನೀರು ಕುತ್ತಿ 8 ಬತ್ತಿಸಿ ಕುತ್ತಿ 2, ಎಳ್ಳೆಣ್ಣೆ ಕುತ್ತಿ 1, ಮೇದಾ, ಮಹಾಮೇದಾ, ದೇವದಾರು, ಮಂಜಿಷ್ಠಕಡ್ಡಿ, ಕಾಕೋಳೀ,

ಕ್ಷೀರಕಾಕೋಳೀ, ಚಂದನ, ನಾಮದ ಬೇರು, ಕಂಕುಷ್ಠ, ತಗರ, ಜೀವಕ, ಋಷಭಕ, ಇಂದುಪ್ರು, ಮೆಂತೆಕಾಳು, ಕಲ್ಹಾರು, ಬಜೆ, ಅಗಿಲುಗಂಧ, ಪುನರ್ನವೆ ಬೇರು, ಅಶ್ವಗಂಧಿ, ಶತಾವರಿ ಬೇರು, ನೆಲಕುಂಬುಳ ಗಡ್ಡೆ, ಜ್ಯೇಷ್ಠಮಧು, ತ್ರಿಫಲೆಗಳು, ನರುಂಬದ, ಸತಾಪೆ, ಕಾಡು ಉದ್ದಿನ ಬೇರು, ಕಾಡು ಹೆಸರಿನ ಬೇರು, ಏಲಕ್ಕಿ, ಲವಂಗ ಚೆಕ್ಕೆ, ತಮಾಲಪತ್ರೆ, ಇವುಗಳು ಕಲ್ಕ ಕೈಂಚಿ 1½ ಯಂತೆ ಚೂರ್ಣಿಸಿ, ಸೇರಿಸಿ ಮಂದಾಗ್ನಿಯಿಂದ ಪಾಕ ಮಾಡಿ, ಗಾಳಿಸಿ ಸೇವನಾಸೇಚನಾದಿಗಳಿಂದ ಸಮಸ್ತ ಪ್ರಕಾರದ ವಾತ ವಿಕಾರಗಳನ್ನೂ, ಸೂತಿಕಾರೋಗ, ಬಾಲರೋಗ, ಮರ್ಮಾಗತರೋಗ, ಕ್ಷತಕ್ಷೀಣರೋಗಗಳಿಗೂ, ಜ್ವರ, ಗುಲ್ಮ, ಗ್ರಹ ಉನ್ಮಾದ, ಮೂತ್ರಾ ಘಾತ, ಮರ್ಮರೋಗ, ಅಸ್ಥಿಸ್ರಾವ, ಅಂತ್ರವೃದ್ಧಿ, ಯೋನಿರೋಗ, ಕ್ಷಯ ರೋಗ, ಈ ವ್ಯಾಧಿಗಳಿಗೆ ಅತೀವ ಶ್ರೇಷ್ಠಕರವಾಗಿ ಗುಣಾಧಿಕ್ಯವನ್ನುಂಟು ಮಾಡುವದೆಂದು ಭಗವಾನ್ ಪೂಜ್ಯಪಾದ ಧನ್ವಂತರಿ ಮಹರ್ಷಿಗಳಿಂದ ಈ ಧಾನ್ವಂತರ ತೈಲದ ಯೋಗವು ಹೇಳಲ್ಪಟ್ಟಿರುವುದು.

॥ शुद्धबलातैलम् ॥

बलामूलात्पलशतं कुट्टयित्वा जले पचेत् ।
चतुर्भागावशिष्टेऽस्मिन् तत्कल्कं दशभिः पलैः ॥ ७ ॥
तैलाढकं विपक्तव्यं द्विगुणक्षीरसंयुतम् ।
एतच्छुद्धबलातैलं वातरोगविनाशनम् ॥ ८ ॥

## ಶುದ್ಧ ಬಲಾ ತೈಲ

ಕಡಿರ ಬೇರು ಪಲ 100ಕ್ಕೆ 100 ಕುತ್ತಿ ನೀರು ಹಾಕಿ ಚತು ರ್ಭಾಗಾವ ಬತ್ತಿಸಿ ಕುತ್ತಿ 25ಕ್ಕೆ ಎಳ್ಳೆಣ್ಣೆ ಕುತ್ತಿ 4 ಅದೇ ಕಡಿರಬೇರಿನ ಸಿಪ್ಪೆ ಪಲ 10 ಕಲ್ಕ ಹಾಕಿ ತೈಲದ ಎರಡು ಪಾಲು ದನದ ಹಾಲು ಸೇರಿಸಿ ಪಾಕಮಾಡಿ ಇಳಿಸಿ ಸೇವನಾಸೇಚನಾನಸ್ಯಾಭ್ಯಂಜನ ಬಸ್ತಿವಿಧಿ ಮುಂತಾದ ವಿಧಾನಗಳಿಂದ ಉಪಯೋಗಿಸಲು 80 ವಿಧದ ವಾತವಿಕಾರ ಗಳಿಗೂ ಈ ತೈಲವು ಅತಿ ಹಿತಕಾರಿಯು.

॥ क्षीरबलातैलम् ॥

बलामूलात्पञ्चपलं क्षीरपिष्टं च योजयेत् ।
क्षीरे चतुर्गुणे तैलप्रस्थं मृद्वग्निना पचेत ॥ ९ ॥
एतत् क्षीरबलातैलं वाताशीति विनाशनम् ।

## ಕ್ಷೀರಬಲಾ ತೈಲ

ಕಡಿರ ಬೇರಿನ ಮೇಲಿನ ಸಿಪ್ಪೆ ಐದು ಪಲಗಳನ್ನು ಕ್ಷೀರದಲ್ಲಿ ಚೆನ್ನಾಗಿ ಅರೆದು ಹಾಲು ಕುತ್ತಿ 4ರಲ್ಲಿ ತೈಲ ಕುತ್ತಿ 1ನ್ನು ಕಲ್ಕ ಸೇರಿಸಿ, ಮೃದ್ವಗ್ನಿಯಿಂದ ಪಾಕಮಾಡಿದ ಕ್ಷೀರಬಲಾ ತೈಲದ ಉಪಯೋಗದಿಂದ 80 ವಿಧದ ವಾತರೋಗಗಳೂ ಉಪಶಮನ ಹೊಂದುವವು.

॥ क्षीरबलावर्तनातैलम् ॥

बलाकषायकल्काभ्यां तैलं क्षीरसमं पचेत् ॥ १० ॥
सहस्रशतपाकं तद्वातासृग्वातरोगनुत् ।
रसायनं मुख्यतममिंद्रियाणां प्रसादनम् ॥ ११ ॥
जीवनं बृंहणं स्वर्यं शुक्रासृग्दोषनाशनम् ।
कुपिते मार्गसंशोधान्मेदसो वा कफस्य वा ॥ १२ ॥
अतिवृद्ध्यानिले शस्तमादौ स्नेहनबृंहणम् ।
कृत्वा तत्राढ्यवातोक्त वातशोणितकं्ततः ॥ १३ ॥
भेषजं स्नेहनं कुर्याद्यत्र रक्तप्रसादनम् ।
प्राणादिकोपे युगपद्यथोद्दिष्टं यथामयम् ॥ १४ ॥
यथासन्नं च भैषज्यं विकल्पं स्याद्यथोल्बणम् ।
नीते निरामतां सामे स्वेदलङ्घनपाचनैः ॥ १५ ॥
रूक्षैरालेपसेकाद्यैः कुर्यात्केवलवातनुत् ।

## ಕ್ಷೀರಬಲಾವರ್ತನಾ ತೈಲ

ಕಡಿರ ಬೇರು ಪಲ 16 ಕಷಾಯಕ್ಕೆ ನೀರು ಕುತ್ತಿ 16 ಕುದಿಸಿ ಬತ್ತಿಸಿ ಕುತ್ತಿ 4, ಸ್ವಚ್ಛವಾದ ಎಳ್ಳೆಣ್ಣೆ ಕುತ್ತಿ 1, ದನದ ಹಾಲು ಕುತ್ತಿ 1. ಇವುಗಳನ್ನು ಸೇರಿಸಿದ ನಂತರ ಕಲ್ಕಕ್ಕೆ, ಕಡಿರಬೇರಿನ ಮೇಲಿನ ಸಿಪ್ಪೆ ಪಲ 1ನ್ನು ಹಾಲಿನಲ್ಲಿ ಅಥವಾ ಕಡಿರ ಬೇರಿನ ಕಷಾಯದಲ್ಲಿ ನುಣ್ಣಗೆ ಅರೆದು ಕಲ್ಕ ಸೇರಿಸಿ ಪಾಕ ಮಾಡಿ ಇಳಿಸಬೇಕು. ಇದೇ ಮೇಲೆ ಕಾಣುವ ಪ್ರಮಾಣಗಳಲ್ಲಿಯೇ ಸೇರಿಸಿ ನೂರು 100 ಸಲ, 1000 ಸಾವಿರ ಸಲ ಆವರ್ತನಾ ರೂಪದಿಂದ ಪಾಕಮಾಡಿ ಇಳಿಸಿ ಸ್ವಚ್ಛವಾದ ಪಾತ್ರದಲ್ಲಿ ಭದ್ರವಾಗಿಟ್ಟು ಸಂದರ್ಭಾನುಸಾರ, ಸೇವನೆ ಮಾಡುವುದರಿಂದಲೂ, ಸೇಚನ ಮಾಡುವುದರಿಂದಲೂ, ಲೇಪನದಿಂದಲೂ, ನಸ್ಯವಿಧಿಯಿಂದಲೂ, ಬಸ್ತಿವಿಧಿಯಿಂದಲೂ, ಸಕಲ ವಿಧದ ವಾತರಕ್ತಗಳನ್ನೂ, ಅಖಿಲ ವಾತ ರೋಗಗಳನ್ನೂ, ಶಮಿಸುವುದು. ರಸಾಯನಗಳಲ್ಲಿ ಅತಿ ಪ್ರಾಮುಖ್ಯವನ್ನು ಹೊಂದಿದ ಈ ಕ್ಷೀರಬಲಾ ತೈಲವು, ಜ್ಞಾನೇಂದ್ರಿಯ ವ ಕರ್ಮೇಂದ್ರಿಯಗಳಿಗೆ ಪ್ರಸನ್ನತೆಯನ್ನೂ, ಜೀವಧಾರಣಾ ಶಕ್ತಿಯನ್ನೂ, ಸಕಲ ಧಾತುಗಳ ಪೋಷಣಾಭಿವೃದ್ಧಿಯನ್ನೂ, ಸುಸ್ವರಕ್ಕೆ ಹಿತವಾದ ಕ್ರಿಯೆಯನ್ನೂ, ಪ್ರತಿಯೋರ್ವನ ಜೀವಿತಾಧಾರಭೂತವಾದ, ಶುಕ್ರ ರಕ್ತಗಳಲ್ಲಿ ಸಂಭವಿಸತಕ್ಕ ದೋಷನಿವಾರಣೆಗಳನ್ನೂ ಉಂಟುಮಾಡಿ, ಓಜಸ್ಸನ್ನು ಅಭಿವರ್ಧಿಸಿ, ಶ್ರೇಷ್ಠತಮ ರಸಾಯನವೆನಿಸಿ, ಪ್ರಖ್ಯಾತವಾಗಿರುವುದು.

॥ केतक्यादि तैलम् ॥

केतकमूलबलातिबलानां
यद्बहलेन रसेन विपक्वम् ।
तैलमनल्पतुषोदकयुक्तम् ।
मारुतमास्थिगतं विनिहंति ॥ १६ ॥

## ಕೇತಕ್ಯಾದಿ ತೈಲ

ಕೇದಕಿ ಬೇರು, ಕಡಿರ ಬೇರು, ದೊಡ್ಡ ಕಡಿರ ಬೇರು, ನುಗ್ಗೆ ಬೇರು, ಇವುಗಳ ಕಷಾಯ ಮಾಡಿ ಆ ಕಷಾಯದಲ್ಲಿ ಕಾಡಿನೀರು, (ಕಾಂಜಿಕ)

ಸೇರಿಸಿ, ಇದಕ್ಕೆ ಮುಂಚೆ ಹೇಳಿದ್ದನ್ನೇ ಕಲ್ಕ ಸೇರಿಸಿ, ಪಕ್ವ ಮಾಡಿದ ತೈಲವು, ಅಸ್ಥಿಯಲ್ಲಿ ಉಂಟಾದ ವಾತರೋಗವನ್ನು ಹೋಗಲಾಡಿಸುವುದು.

॥ चिंचादि तैलम् ॥

चिञ्चायाः पत्रक्वाथे तु शिग्रुसर्जार्जकैः पचेत् ।
पञ्चभिर्लवणैर्युक्तं तैलं सर्वाङ्गवातनुत् ॥ १७ ॥

## ಚಿಂಚಾದಿ ತೈಲ

ಹುಣಸೇ ಎಲೆಯ ಕಷಾಯದಲ್ಲಿ ನುಗ್ಗೆ ಕೆತ್ತೆ, ಚಂಚಲ್ಯ, ಕಾಂಜಿಕ, ಇಂದುಪ್ಪು, ಬಿಡಿಯುಪ್ಪು, ಮರಕ್ಕಲ ಉಪ್ಪು, ವಿಡಯುಪ್ಪು, ಕಾರುಪ್ಪು, ಇವುಗಳ ಕಲ್ಕ ಹಾಕಿ ಪಾಕ ಮಾಡಿ ಇಳಿಸಿ, ಸೇವನ ಮಾಡುವುದರಿಂದ ಸರ್ವಾಂಗ ವಾತವು ಉಪಶಮನ ಹೊಂದುವುದು.

॥ प्रभंजनविमर्दनतैलम् ॥

बलाशतावरीशिग्रुलवणार्ककरञ्जकाः ।
एरंडश्चैव कोरंडो वाजिगंधा प्रसारिणी ॥ १८ ॥
पञ्चमूलं वरिष्टं च तैस्समैः क्वाथिते जले ।
पादावशेषिते दद्यात्तैलस्याधाढकं भिषक् ॥ १९ ॥
क्षीरं तद्विगुणं दद्यात् तत्समं दधिकाञ्जिकं ।
तगरामरकुष्ठैलाशुंठीसर्षपचोरकान् ॥ २० ॥
उत्पलाद्यञ्जनेनीलिश्लक्ष्णपिष्टान् समावपेत् ।
शताह्वाकुष्ठसिंधूत्थरास्नाकालानुसारिका ॥ २१ ॥
वचा सचित्रकं मांसी सरळं कटुरोहिणी ।
प्रत्येकं कार्षिकान् भागान् प्रतीवापाय पंडितः ॥ २२ ॥
तत्संभारेण मृद्वग्निसिद्धं तिलजमादरात् ।
पानाभ्यञ्जनगंडूषे विधेयं वस्तिकर्मणि ॥ २३ ॥
अशीति वातजान् रोगान् हन्यादाशु सुदारुणान् ।
एतत्तैलं महावीर्यमात्रेयप्रमुखैः पुरा ॥ २४ ॥
निर्मितं नाम तं चापि प्रभञ्जनविमर्दनम् ।

## ಪ್ರಭಂಜನ ವಿಮರ್ದನ ತೈಲ

ಕಡಿರ ಬೇರು, ಶತಾವರಿ, ನುಗ್ಗೆ ಬೇರು, ನೀವರ್ಾದಳ ಬೇರು, ಎಕ್ಕೆ ಬೇರು, ಸಣ್ಣ ಹರಳು ಬೇರು, ಕರಿಕುರಿಞಿ ಬೇರು, ಅಶ್ವಗಂಧಿ, ಪ್ರಸಾರಿಣೀ, ದೊಡ್ಡ ಪಂಚಮೂಲ, (ಬಿಲ್ವಪತ್ರೆ, ನರ್ವೊಳು ಬೇರು ಪಾದಿರಿ ಬೇರು, ಕುಂಬುಡುಮರದ ಬೇರು, ಆನೆಮುಂಗು ಬೇರು), ಇವುಗಳ ಕಷಾಯವಿಟ್ಟು, ಪಾದಾವಶೇಷ ಮಾಡಿ ಎಳ್ಳೆಣ್ಣೆಯನ್ನು ಸೇರಿಸಿ ತೈಲದ ದ್ವಿಗುಣ ಹಾಲು ಕೂಡಿಸಿ ತೈಲದಷ್ಟೇ ಕಾಂಜಿಕ ಜಲ ಮತ್ತು ಮೊಸರು ಹಾಕಿ, ಕಲ್ಕಕ್ಕೆ ತಗರ, ದೇವದಾರು, ಏಲಕ್ಕಿ, ಒಣಶುಂಠಿ, ಸಾಸಿವೆ ಕಾಳು, ಕಚ್ಚೂರ, ಸತಾಪೆ, ನೆಲಸಂಪಿಗೆ ಗಡ್ಡೆ, ಅಂಜನ ಕಲ್ಲು, ನೀಲಿ ಬೇರು, ಕಂಕುಷ್ಠ, ಇಂದುಪ್ಪು, ರಾಸ್ನೆ, ಮೆಂತೆ, ಬಜೆ, ಚಿತ್ರಮೂಲ ಶುದ್ಧಿ, ಜಟಾಮಾಂಸಿ, ಚರಳ, ಕಟುಕರೋಹಿಣಿ, ಪ್ರತ್ಯೇಕ ಕಲ್ಕ ಸೇರಿಸಿ ಪಾಕದಲ್ಲಿಳಿಸಿ ಸೇಚನ, ಪಾನ, ಅಭ್ಯಂಜನ, ಗಂಡೂಷ, ಬಸ್ತಿಕರ್ಮಾದಿ ವಿಧಿಗಳಿಂದ 80 ವಿಧದ ವಾತರೋಗಗಳನ್ನು ನಿವೃತ್ತಿಪಡಿಸುವುದು. ಈ ಪ್ರಭಂಜನವಿಮರ್ದನ ತೈಲವು ಆತ್ರೇಯಾದಿ ಋಷಿಪುಂಗವರಿಂದ ನಿರ್ಮಿಸಲ್ಪಟ್ಟಿರುವುದು.

॥ २ चिञ्चादि तैलम् ॥

चिञ्चामाढकसारिणीवरणकस्नुग्भानुगंडीरिका ।
जंबीरीशतपत्रगुञ्जनरसे दध्याम्लयुक्तान्विते ।
सिद्धार्थोऽमरदारुशिग्रुलवणैर्विश्वान्वितैः कल्कितैः ।
तैलं सिद्धमशीतिवातविकृतिं चिञ्चादिशीघ्रं हरेत् ॥ २५ ॥

## ಮತ್ತೊಂದು ಚಿಂಚಾದಿ ತೈಲ

ಹುಣಸೆ ಎಲೆ, ಸಣ್ಣ ಹರಳು ಎಲೆ, ಪ್ರಸಾರಿಣಿ, ನೀವರ್ಾದಳ ಎಲೆ, ಕಳ್ಳಿ ಎಲೆ, ಎಕ್ಕೆ ಎಲೆ, ಅಮರ್ಚೆ ಕೊಡಿ, ನಾರಂಗ ಎಲೆ, ಮುರಿಕ್ಕಿಲ, ನುಗ್ಗೆ ಎಲೆ, ಮೊಸರುನೀರು, ಚುತ್ತಪ್ಪುಳಿ, ಸಾಸಿವೆ ಕಾಳು, ದೇವದಾರು, ನುಗ್ಗೆ ಬೇರು, ಇಂದುಪ್ಪು, ಒಣಶುಂಠಿ, ಎಳ್ಳೆಣ್ಣೆ, 80 ವಿಧದ ವಾತ ಹರ.

॥ परिणत केरी क्षीरादि तैलम् ॥

परिणतकेरिक्षीरे ।
　　जंबीरफलोदकेन तुलितेन ॥
क्षणदासुरधूमश्रृतं ।
　　तैलं ह्यपबाहुकं जयति ॥ २६ ॥

## ಪರಿಣತ ಕೇರೀ ಕ್ಷೀರಾದಿ ತೈಲ

ತೆಂಗಿನಕಾಯಿ ಹಾಲು ಮತ್ತು ನಿಂಬೆಹುಳಿ ರಸಕ್ಕೆ ತೈಲವನ್ನು ಸೇರಿಸಿ ಅರಸಿನ, ಚಂಚಲ್ಯ ಕಲ್ಕ ಹಾಕಿ ಪಾಕದಲ್ಲಿಳಿಸಿ ಸೇಚಿಸಲು ಅಪಬಾಹುಕ ರೋಗವು ನಿವೃತ್ತಿಯಾಗುವುದು.

॥ देवदारु बलादि तैलम् ॥

देवदारुबलारास्नामांसीसर्षपनागरैः ।
बलाकषायसंसिद्धं तैलं सर्वाङ्गवातजित् ॥ २७ ॥

## "ಸರ್ವಾಂಗ ವಾತಕ್ಕೆ ದೇವದಾರು ಬಲಾದಿ ತೈಲ"

ಕಡಿರ ಬೇರಿನ ಕಷಾಯದಲ್ಲಿ, ತಿಲತೈಲವನ್ನು ಸೇರಿಸಿ, ದೇವದಾರು, ಕಡಿರ ಬೇರು, ರಾಸ್ನೆ, ಜಟಾಮಾಂಸಿ, ಸಾಸಿವೆ ಕಾಳು, ಒಣಶುಂಠಿ ಕಲ್ಕ ಸೇರಿಸಿ, ಪಾಕದಲ್ಲಿಳಿಸಿ ಸೇಚನ ಮಾಡುವುದರಿಂದ ಸರ್ವಾಂಗ ವಾತ ಗುಣವಾಗುವುದು.

॥ २ बलागुडूच्यादि तैलं ॥

बलागुडूच्याः क्वाथेन तैलं क्षीरसमन्वितम् ।
चंदनोशीरयष्ट्याह्वमुस्ताकल्कैः पचेत् पुनः ॥ २८ ॥

सिद्धमेतद्वातरक्तं रक्तपित्तं शिरोरुजम् ।
वातपित्तकृतान् रोगानाशु हन्यात् सुपूजितम् ॥ २९ ॥

## ಮತ್ತೊಂದು ಬಲಾಗುಡೂಚ್ಯಾದಿ ತೈಲ

ಕಡಿರ ಬೇರು, ಅಮೃತ ಬಳ್ಳಿ, ಕ್ವಾಥಕ್ಕೆ ಎಳ್ಳೆಣ್ಣೆ ಸೇರಿಸಿ 2 ಪಾಲು ಹಾಲು ಸೇರಿಸಿ, ಚಂದನ, ಉಶೀರ, ಜ್ಯೇಷ್ಠಮಧು, ಭದ್ರಮುಷ್ಟಿ, ಚೂರ್ಣ ಮಾಡಿ ಕಲ್ಕ ಸೇರಿಸಿ ಪಾಕ ಮಾಡಿದ ಬಲಾಗುಡೂಚ್ಯಾದಿ ತೈಲವು ವಾತ ರಕ್ತ, ರಕ್ತಪಿತ್ತ, ತಲೆವೇದನೆ, ವಾತಪಿತ್ತ ದೋಷಗಳಿಂದ ಸಂಭವಿಸಿದ ರೋಗ ಗಳನ್ನು ಹೋಗಲಾಡಿಸಿ ತೈಲಗಳಲ್ಲಿ ಮುಖ್ಯತಮವೆನಿಸಿಕೊಂಡಿರುವುದು.

॥ त्रिमिश्रितं तैलम् ॥

वरीबलामृताक्वाथे तैलं सिद्धं पयः समम् ।
चंदनोशीरकुष्ठाब्दकल्किकं वातरक्तनुत् ॥ २० ॥

## ತ್ರಿಮಿಶ್ರಿತಂ ತೈಲ

ಶತಾವರಿ, ಕಡಿರ ಬೇರು, ಅಮೃತ ಬಳ್ಳಿಗಳ ಕಷಾಯಕ್ಕೆ ಎಳ್ಳೆಣ್ಣೆ ಸೇರಿಸಿ ತೈಲದಷ್ಟೇ ಹಾಲು ಕೂಡ ಹಾಕಿ, ಚಂದನ, ಲಾಮಂಚ, ಕಂಕುಷ್ಠ, ಭದ್ರಮುಷ್ಟಿ ಕಲ್ಕ ಸೇರಿಸಿ ಪಾಕದಲ್ಲಿಳಿಸಿ, ಸೇಚನೆ ಮಾಡುವುದರಿಂದ ವಾತ ರಕ್ತಹರ.

॥ बलाश्वगंधादि तैलम् ॥

बलाश्वगंधालाक्षाणां क्वाथे पादांशशोषिते ।
तैलप्रस्थं पचेद्धीमान् दधिमस्तु चतुर्गुणे ॥ २१ ॥

रास्नाचंदनमाञ्जिष्ठादूर्वामधुकचोरकैः ।
सारिवोशीरजलदकुष्ठागुरुसुरद्रुमैः ॥ २२ ॥

हरिद्राकुसुमाकौंतीशताह्वापद्मकेसरैः ।
क्वाथः सुसंयुतैरेभिः कार्षिकैश्च सुपेषितैः ॥ २३ ॥

शनैर्मृद्वग्निना पक्त्वा गाढयेद्भाजने शुभे ।
प्रशस्ते तिथिनक्षत्रे तत्तैलं शीलयेन्नरः ॥ २४ ॥

तेन सर्वज्वरोन्माद्क्षयकामादयो गदाः ।
नश्यांति विविधां चैव वातरोगानसंशयः ॥ ३५ ॥
अश्विभ्यां निर्मितं तैलमेतत्पुष्टिकरं परम् ।

## ಬಲಾಶ್ವಗಂಧಾದಿ ತೈಲ

ಕಡಿರ ಬೇರು, ಅಶ್ವಗಂಧಿ, ಕೋಲರಗು ಕಷಾಯಕ್ಕೆ ಎಳ್ಳೆಣ್ಣೆ ಸೇರಿಸಿ ನಾಲ್ಕು ಪಾಲು ಮೊಸರುನೀರು ಕೂಡಾ ಹಾಕಿ ಕಲ್ಕಕ್ಕೆ ಕೆಂಪರತ್ತೆ, ಚಂದನ, ಮಂಜಿಷ್ಠ ಕಡ್ಡಿ, ಕರಿಕೆ ಹುಲ್ಲು, ಜ್ಯೇಷ್ಠಮಧು, ಕಚ್ಚೂರ, ನಾಮದ ಬೇರು, ಲಾಮಂಚ, ಭದ್ರಮುಷ್ಟಿ, ಕಂಕುಷ್ಠ, ಅಗಿಲು ಗಂಧ, ದೇವದಾರು, ಅರಸಿನ, ಕುಮುದ ಗಡ್ಡೆ, ಅರೇಣುಕ, ಸತಾಪೆ, ತಾವರೆ ಕುಸುಮ, ಇವು ಮೂರು ಮೂರು ಕ್ಳಂಜಿ ತೂಕ ಸೇರಿಸಿ ಕಲ್ಕ ಹಾಕಿ ಮೃದ್ವಗ್ನಿಯಿಂದ ಪಕ್ವ ಮಾಡಿ ಇಳಿಸಿ ಶುದ್ಧವಾದ ಪಾತ್ರದಲ್ಲಿ ಭದ್ರ ವಾಗಿಟ್ಟು ಶುಭ ದಿನ, ಶುಭ ನಕ್ಷತ್ರದಲ್ಲಿ ಸೇಚನಾದಿ ವಿಧಿಗಳಿಂದ ಉಪಯೋಗಿಸಿದ್ದಲ್ಲಿ ಸರ್ವಜ್ವರ, ಉನ್ಮಾದ, ಕ್ಷಯ, ಕೆಮ್ಮು ವ ವಿವಿಧವಾದ ವಾತರೋಗಗಳು ನಿವಾರಣೆಯಾಗುತ್ತವೆ. ಈ ತೈಲವು ಅಶ್ವಿನೀಕುಮಾರ ರಿಂದ ಉಕ್ತವಾದ ಬಲಾಶ್ವಗಂಧಾದಿ ತೈಲವಾಗಿರುವುದು.

॥ बलागुडूच्यादि तैलम् ॥

बलागुडूचीसुरपादपानां ।
क्वाथे पचेत्तैलमिसैश्चकल्कैः ।
जटामयं चंदनकुंकुमक ।
नताश्वगंधासरलैः सराह्वैः ॥ ३६ ॥
एतत्प्रदाहं सरुजं सशोफम् ।
रक्तानुगं वातगदं निहंति ॥ ३७ ॥

## ಬಲಾಗುಡೂಚ್ಯಾದಿ ತೈಲ

ಕಡಿರ ಬೇರು, ಅಮೃತ ಬಳ್ಳಿ, ದೇವದಾರು ಕಷಾಯದಲ್ಲಿ ಜಟಾ ಮಾಂಸಿ, ಕಂಕುಷ್ಠ, ಚಂದನ ಕುಂಡ್ಲಿಕ, ಎಳ್ಳೆಣ್ಣೆ ಸೇರಿಸಿ ತಗರ, ಅಶ್ವ

ಗಂಧಿ, ಚರಳ, ಕೆಂಪರತ್ತೆ, ಕಲ್ಕ ಸೇರಿಸಿ ಪಾಕ ಮಾಡಿ ಇಳಿಸಿ ಸೇಚನೆ ಮಾಡುವುದರಿಂದ ಸರ್ವವಿಧದ ವಾತಶೋಣಿತ ರೋಗಗಳು ಉಪಶಮನ ವಾಗುವುವು.

॥ कार्पासास्थ्यादि तैलम् ॥

कार्पासास्थिबलामाषकुलत्थैः क्वथिते रसे ।
बदरदारुबलारास्नाकुष्टसर्षपनागरैः ॥ ३८ ॥
शताह्वापिप्पलीमूलचव्याशिग्रुपुनर्नवैः ।
कल्कितै स्तैलमाजेन क्षीरेण सहितं पचेत् ॥ ३९ ॥
तत्पाननावनाभ्यङ्गयोगात्सर्वानिलापहम् ।
विशेषादपबाहुं च पक्षाघातमथार्दितम् ॥ ४० ॥

ಕಾರ್ಪಾಸಾಸ್ಥ್ಯಾದಿ ತೈಲ

ಹತ್ತಿ ಬೀಜ, ಕಡಿರ ಬೇರು, ಉದ್ದು, ಹುರುಳಿ, ಕಷಾಯದಲ್ಲಿ ಎಳ್ಳೆಣ್ಣೆ ಮತ್ತು ಆಡಿನ ಹಾಲು ಸಹ ಕೂಡಿಸಿ, ಬುಗರಿ ಬೀಜ, ದೇವದಾರು, ಕಡಿರ ಬೇರಿನ ಸಿಪ್ಪೆ, ಕೆಂಪರತ್ತೆ, ಕಂಕುಷ್ಠ, ಸಾಸಿವೆ ಕಾಳು, ಸತಾಪೆ, ಹಿಪ್ಪಿಲಿ ಮೂಲ, ಕಾಡುಮೆಣಸಿನ ಬೇರು, ನುಗ್ಗೆ ಬೇರಿನ ಮೇಲಿನ ಸಿಪ್ಪೆ, ಪುನರ್ನವೆ ಬೇರು, ಇವುಗಳನ್ನು ಕಲ್ಕ ಸೇರಿಸಿ ಪಾಕ ಮಾಡಿ ಇಳಿಸಿದ ಈ ಕಾರ್ಪಾಸಾಸ್ಥ್ಯಾದಿ ತೈಲವು ಪಾನ, ನಾವನ, ಅಭ್ಯಂಗದಿಂದ ಸರ್ವ ವಾತ ವಿಕಾರ ವಿಶೇಷತಃ ಅಪಬಾಹುಕ ವಾತ, ಪಕ್ಷಾಘಾತ ವಾತ, ಅರ್ದಿತ ವಾತಗಳನ್ನು ಸಂಪೂರ್ಣ ಹೋಗಲಾಡಿಸಿ ಸುಖವನ್ನೀಯುವುದು.

॥ लाक्षादि तैलम् ॥

लाक्षारससमं तैलं तैलात्मस्तु चतुर्गुणम् ।
अश्वगंधानिशादारुकौंतीकुष्ठाब्दचंदनैः ॥ ४१ ॥
समूर्वारोहिणीरास्नाशताह्वामधुकैः समैः ।
सिद्धं लाक्षादिकं नाम तैलमभ्यञ्जनादिदम् ॥ ४२ ॥

सर्वज्वरक्षयोन्मादश्वासापस्मारपाप्मजित् ।
यक्षराक्षसभूतघ्नं गर्भिणीनां च शस्यते ॥ ४३ ॥

### ಲಾಕ್ಷಾದಿ ತೈಲ

ಕೋಲರಗಿನ ಕಷಾಯ ತೆಗೆದು ಎಳ್ಳೆಣ್ಣೆಯನ್ನು ಸೇರಿಸಿ, ನಾಲ್ಕು ಪಾಲು ಮೊಸರುನೀರು ಸೇರಿಸಿ ಕಲ್ಕಕ್ಕೆ ಅಶ್ವಗಂಧಿ, ಅರಸಿನ, ದೇವದಾರು, ಅರೇಣುಕ, ಕಂಕುಷ್ಠ, ಭದ್ರಮುಷ್ಟಿ, ಚಂದನ, ಪೆರಿಕುರುಂಬು, ಕಟುಕ ರೋಹಿಣಿ, ಕೆಂಪರತ್ತೆ, ಸತಾಪೆ, ಜ್ಯೇಷ್ಠಮಧು, ಕಲ್ಕ ಸೇರಿಸಿ ಪಾಕ ಮಾಡಿದ ಈ ಲಾಕ್ಷಾದಿ ತೈಲದ ಸೇಚನೆಯಿಂದ ಸರ್ವಜ್ವರ ಕ್ಷಯ ಉನ್ಮಾದ, ಶ್ವಾಸಕಾಸ, ಅಪಸ್ಮಾರ, ಭೂತಪೀಡಾದಿ ನಾನಾ ವಿಧದ ರೋಗ ಗಳು ಉಪಶಮನ ಹೊಂದುವುವು.

॥ आरनालादि तैलम् ॥

आरनालाढके तैलं पादसर्जरसे श्रुतम् ।
प्रभूते खजित्तं तोये ज्वरदाहार्तिनुत्परम् ॥ ४४ ॥

### ಆರನಾಳಾದಿ ತೈಲ

ಕಾಂಜಿಕ ಜಲ ಕುತ್ತಿ 4ಕ್ಕೆ (ಕಾಡಿವೆಳ್ಳಂ) ಎಳ್ಳೆಣ್ಣೆ ಕುತ್ತಿ 1ನ್ನು ಸೇರಿಸಿ ಒಂದು ಸೇರು ಚಂಚಲ್ಯ ಚೂರ್ಣ ಮಾಡಿ ಹಾಕಿ ಪಾಕ ಮಾಡಿ ಇಳಿಸಿ, ಸೇಚನಾದಿ ವಿಧಿಗಳಿಂದ ಜ್ವರ, ದಾಹ, ವಾತರಕ್ತ, ಮೊದಲಾದುವು ಗಳು ನಿವೃತ್ತಿಯಾಗುವುವು.

॥ पिंडतैलम् ॥

समधूच्छिष्टमञ्जिष्टंससर्जरससारिवम् ।
पिंडतैलंतदभ्यंगाद्वातरक्तरुजापहम् ॥ ४५ ॥

### ಪಿಂಡ ತೈಲ

ನಾಮದ ಬೇರನ್ನು ಜಜ್ಜಿ ಕಷಾಯ ಮಾಡಿ ಮಂಜಿಷ್ಠ ಕಡ್ಡಿಯುಸು ಕಲ್ಕಕ್ಕೆ ಸೇರಿಸಿ ಪಾತ್ರದ ಪಾಕಕ್ಕೆ ಜೇನುಮಯಣ, ಚಂಚಲ್ಯವನ್ನು

ಇಟ್ಟು ಆ ಮೇಲೆ ಅಭ್ಯಂಗ ಮಾಡುವುದರಿಂದ ಈ ಪಿಂಡತೈಲವು ವಾತ ರೋಗವನು ಹೋಗಲಾಡಿಸುವುದು.

॥ तेकरजादि तैलम् ॥

तेकराजरसविंशतिभागे ।
पक्त्वातैलमभयाप्रतिवापम् ॥
कासमाशु पीनिर्हंति नराणाम् ।
मेघवृंदमिव मारूतवेगः ॥ ४६ ॥

ತೇಕರಜಾದಿ ತೈಲ

ಗರುಗ ಸ್ವರಸಭಾಗ 20ಕ್ಕೆ, ಅಣಿಲೆ ಕಾಯಿಯ ಚೂರ್ಣವನ್ನು ಕಲ್ಕ ಸೇರಿಸಿ ಪಾಕಮಾಡಿದ ತೈಲದಿಂದ, ಪ್ರಬಲವಾದ ವಾಯುವಿನ ವೇಗದಿಂದ ಮೇಘವೃಂದವು ದೂರವಾಗುವಂತೆ, ಕಾಸರೋಗಗಳು ಮಾಯವಾಗುವುವು.

॥ पञ्चवल्कादि तैलम् ॥

पञ्चवल्कनिशागोपीकशाये तिलजं पचेत् ।
रंभादिकंदमधुकत्वक्लेव्यामयचंदनैः ॥ ४७ ॥
रक्तपित्तोत्तरे कुष्टे विसर्पे क्षुद्रवत्यपि ।

ಪಂಚವಲ್ಕಾದಿ ತೈಲ

5 ಬಗೆಯ ಕೆತ್ತೆಗಳು, ಅರಸಿನ, ನಾಮದ ಬೇರು, ಆಯಾ ಪ್ರಮಾಣ ಗಳಿಂದ ಸೇರಿಸಿ ಜಜ್ಜಿ ಕಷಾಯ ಮಾಡಿ ಎಳ್ಳೆಣ್ಣೆ, ಕದಳೀಬಾಳೆ ಗಡ್ಡೆ, ಆಂಬಲ್ ಗಡ್ಡೆ, ನೈದಿಲೆ ಗಡ್ಡೆ, ನೆಲಸಂಪಿಗೆ ಗಡ್ಡೆ. ತಾವರೆ ಗಡ್ಡೆ, ಜ್ಯೇಷ ಮಧು, ಲವಂಗಚೆಕ್ಕೆ, ಲಾಮಂಚ, ಅ. ಕಂಕುಷ್ಠ, ಚಂದನ ಈ ಬಗೆಯ ಔಷಧಿಗಳನ್ನು ಕಲ್ಕ ಸೇರಿಸಿ, ಪಾಕವಲ್ಲಿಳಿಸಿ ಸೇಚಿಸಲು, ರಕ್ತಪಿತ್ತೋಲ್ಬಣ

ಮತ್ತು ಕ್ಲೇದದಿಂದ ಕೂಡಿದ ಕುಷ್ಠರೋಗಗಳೂ, ವಿಸರ್ಪ ರೋಗಗಳೂ ನಾಶವಾಗುವುವು.

॥ दिनेशवल्यादि तैलम् ॥

दिनेशवल्लीरजनीदिनेश ।
व्यावातकक्षीरमहीरुहाणाम् ।
क्वाथेन कल्केन पचेत तैलं ।
त्वग्दोषशांत्यैवरवर्णकारी ॥ ४८ ॥

## ದಿನೇಶವಲ್ಯಾದಿ ತೈಲ

ವೆಂಬಾಡ, ಅರಸಿನ, ಎಕ್ಕೆಗಿಡದ ಬೇರು, ಕೊಂದೆ ಕೆತ್ತೆ, ನಾಲ್ಕು ಮರಗಳ ಕೆತ್ತೆ ಸೇರಿಸಿ ಜಜ್ಜಿ ಕಷಾಯ ಮಾಡಿ ಅದರಲ್ಲಿ ಎಳ್ಳೆಣ್ಣೆಯನ್ನು ಕೂಡಿಸಿ, ಕಷಾಯದ ಮದ್ದುಗಳನ್ನೇ ಕಲ್ಕವಾಗಿ ಸೇರಿಸಿ, ಪಾಕದಲ್ಲಿಳಿಸಿ ಸೇಚನೆ ಮಾಡುವುದರಿಂದ ತ್ವಗ್ರೋಗಗಳು ನಿವಾರಣೆಯಾಗಿ ಶರೀರಕ್ಕೆ ಅಧಿಕ ಕಾಂತಿಯುಂಟಾಗುವುದು.

॥ २ लाक्षादि तैलम् ॥

लाक्षीशीरबलाक्वाथे जले द्विप्रस्थमस्तुके ।
पृश्निपर्णीविषाद्वंद्व द्वे हरिद्रे शतावरी ॥ ४९ ॥
जीवकर्षभकौ रास्ना सरळं देवदारु च ।
मुस्ता विदारी मञ्जिष्ठा वालुकागुरुवरसकम् ॥ ५० ॥
कुष्ठं लोहितयष्टीं च मधुकं द्वे च सारिबे ।
अनंतामलकीमूर्वामयूरं शिशिरद्वयम् ॥ ५१ ॥
अश्वगंधा कणा कौंती तिक्ता श्योनाकदीप्यकम् ।
पाठां भार्ङ्गीं च संपिष्य तैलप्रस्थं विपाचयेत् ॥ ५२ ॥
ततो मंदाग्निना पक्वं तैलमभ्यञ्जनादिना ।

जीर्णज्वरक्षयोन्मादश्वासापस्मारपाप्मजित् ॥ ५३ ॥
बलपुष्ट्यर्थिनां नृणां गर्भिणीनां च शस्यते ॥ ५४ ॥

## ಮತ್ತೊಂದು ಲಾಕ್ಷಾದಿ ತೈಲ

ಕೋಲರಗು, ಲಾಮಂಚ, ಕಡಿರ ಬೇರು, ಇವುಗಳು ಪಲ 4ರಂತೆ ಕೂಡಿಸಿ ಕಷಾಯ ಕುತ್ತಿ 16ರಲ್ಲಿ ಬತ್ತಿಸಿ ಕುತ್ತಿ 4, ಎಳ್ಳೆಣ್ಣೆ ಕುತ್ತಿ 1, ಮೊಸರುನೀರು ಕುತ್ತಿ 2 ಸೇರಿಸಿ ಮೂರೆಲೆ ಬೇರು, ವಿಡಯ, ಅತಿವಿಡಯ, ಅರಸಿನ, ಮರದರಸಿನ ಸಿಪ್ಪೆ, ಶತಾವರಿ, ಜೀವಕ, ಋಷಭಕ, ಕೆಂಪರತ್ತೆ, ಚರಳ, ದೇವದಾರು, ಭದ್ರಮುಷ್ಟಿ, ನೆಲಕುಂಬುಳ ಗಡ್ಡೆ, ಮಂಜಿಷ್ಟಕಡ್ಡಿ, ಇರುವೇರಿ ದಂಡು, ಅಗಿಲುಗಂಧ, ಕೊಡಗಪಾಲರಿ, ಕಂಕುಷ್ಠ, ರಕ್ತ ಚಂದನ, ಜ್ಯೇಷ್ಠಮಧು, ಇಪ್ಪೆತಿರುಳು, ನಾಮುದ ಬೇರು, ಹಾಲುಬಳ್ಳಿ ಬೇರು, ಪಚ್ಚೆರಂಗಿ ಬೇರು, ನೆಲ್ಲಿಕಾಯಿ ಸಿಪ್ಪೆ, ಪೆರಿಕುರುಂಬ, ಉತ್ತರಣೆ, ಚಂದನ, ಪೀತಚಂದನ, ಅಶ್ವಗಂಧಿ, ಹಿಪ್ಪಲಿ, ಅರೇಣುಕ, ಪುತ್ತರಿಚ್ಚುಂಡ ಬೇರಿನ ಸಿಪ್ಪೆ, ಚೋನಕಹುಲ್ಲು, ಓಮುಕಾಳು, ಪಾಡಾವಳಿ ಬೇರು, ಕಿರು ತೇಗು ಇವುಗಳನ್ನು ಕಲ್ಕ ಸೇರಿಸಿ ಚೂರ್ಣಮಾಡಿ ಸೇರಿಸಿ ಪಾಕದಲ್ಲಿಳಿಸಿ ಉಪಯೋಗಿಸುವುದರಿಂದ ಜೀರ್ಣಜ್ವರ, ಕ್ಷಯ, ಉನ್ಮಾದ, ಶ್ವಾಸ, ಅಪ ಸ್ಮಾರಾದಿ ರೋಗಗಳು ನೀಗುವುದಲ್ಲದೆ ಈ ತೈಲವನ್ನು ಬಲಪುಷ್ಟಿಗೋಸ್ಕರ ಗರ್ಭಿಣೀ ಸ್ತ್ರೀಯರಿಗೂ, ಸರ್ವರಿಗೂ ಸಕಲಕಾಲಗಳಲ್ಲಿಯೂ ಉಪ ಯೋಗಿಸಬಹುದು.

॥ फेनोशीरादि तैलम् ॥

फेनोशीरनिशांबुकुष्टमधुकैर्मञ्जिष्टविश्वांबुभिः ।
मूर्वालोहितयष्टिसर्जकटुकासिंधूत्थलाक्षांजनैः ॥
सश्रीकंठकणानतैस्तिलरुहां तक्रे पचेत् षड्गुणे ।
तत्सद्यो हरति ज्वरान् ज्वरकृतान् दाहादिशीतादिकान् ॥ ५५ ॥

## ಫೇನೋಶೀರಾದಿ ತೈಲ

ಕಡಲುನುರೆ, ಲಾಮಂಚ, ಅರಸಿನ, ಇರಿವೇರಿದಂಡು, ಕಂಕುಷ್ಠ, ಜ್ಯೇಷ್ಠಮಧು, ಮಂಜಿಷ್ಠಕಡ್ಡಿ, ಒಣಶುಂಠಿ, ಭದ್ರಮುಷ್ಟಿ, ಪೆರಿಕುರುಂಬ,

ಅಗಿಲುಗಂಧ, ಜಂಚಲ್ಯ, ಕಟುಕರೋಹಿಣಿ, ಸೈಂಧವಲವಣ, ಕೋಲರಗು, ಅಂಜನಕಲ್ಲು, ಕಂಡಿಬೆಣ್ಣೆ, ಹಿಪ್ಪಲಿ, ತಗರ, ಈ ಬಗೆಯ ಮದ್ದುಗಳನ್ನು ಚೆನ್ನಾಗಿ ಚೂರ್ಣಮಾಡಿ ಎಳ್ಳೆಣ್ಣೆಗೆ ಸೇರಿಸಿ, ಎಳ್ಳೆಣ್ಣೆಯ ಆರುಪಾಲು ಮಜ್ಜಿಗೆಯಲ್ಲಿ ಪಕ್ವಮಾಡಿ ಇಳಿಸಿದ ತೈಲವನ್ನು ಸೇಚಿಸುವುದರಿಂದ ಜ್ವರಗಳೂ, ಜ್ವರದಿಂದುಂಟಾದ ದಾಹ ಶೀತಾದಿ ವಿಕಾರಗಳೂ ನಿವಾರಣೆಯಾಗುವುವು.

॥ भृंगाळर्कादि तैलम् ॥

भृंगाळर्कवृषव्याघ्रीवृश्चिकालीपुनर्नवाः ।
स्फूर्जकं सिंधुवारं च कपोतातामलक्यपि ॥ ५६ ॥
कुंडली कासमर्दं च द्वादशैषां रसे पचेत् ।
त्रयोदशांशतिलजं कल्कैरेभिर्विपाचयेत् ॥ ५७ ॥
पिप्पल्यग्निवचावत्सकोलग्रंथिकतोयदैः ॥
विशालातिविषाकौंतीचव्यत्र्यूषणजीरकैः ॥ ५८ ॥
भार्ङ्गीमूर्वामहानिंबफलदीप्यकसर्षपैः ।
हिङ्गुतिक्तविडङ्गैश्च तत्सिद्धं तिलजं जयेत् ॥ ५९ ॥
कासं पञ्चविधं श्वासमशेषं जयति क्षणात् ॥

## ಭೃಂಗಾಳರ್ಕಾದಿ ತೈಲ

ಗರ್ಗಸಮೂಲ, ಎಕ್ಕೆಗಿಡದ ಮೂಲ, ಆಡ್ಸೋಗೆ, ಸಣ್ಣ ಕುದನೆ ಬೇರು, ತೇಲ್ಗಡೆಬೇರು, ಪುನರ್ನವೆಬೇರು, ಪನಚ್ಚಿಕೆತ್ತೆ, ಕರಿನೆಕ್ಕಿ, ತೇಟಾಂಪರಳು, ನೆಲನೆಲ್ಲಿಬೇರು, ಅಮೃತಬಳ್ಳಿ, ಪೊನ್ನಾವೀರ ಇವುಗಳ ಕಷಾಯಕ್ಕೆ ಎಳ್ಳೆಣ್ಣೆ ಸೇರಿಸಿ ಹಿಪ್ಪಲಿ, ಚಿತ್ರಮೂಲ (ಶುದ್ಧಿ), ಬಜೆ, ಕೊಡಗಪಾಲರಿ, ಬುಗರಿ ಬೀಜ, ಹಿಪ್ಪಲಿಮೂಲ, ಭದ್ರಮುಷ್ಟಿ, ನುತುರ್ಗಂಗ, ಅತಿವಿಡಯ, ಅರೇಣುಕ, ಕಾಡುಕರಿಮೆಣಸಿನಬೇರು, ಒಣಶುಂಠಿ, ಕರಿಮೆಣಸು, ಹಿಪ್ಪಲಿ, ಕಿರುತೇಗು, ಪೆರಿಕುರುಂಬ, ಬೇವಿನಕೆತ್ತೆ, ಓಮುಕಾಳು, ಸಾಸಿವೆಕಾಳು, ಇಂಗು, ಪುತ್ತರಿಚ್ಚುಂಡಬೇರಿನ ಸಿಪ್ಪೆ, ವಾಯುವಿಳಂಗ, ಕಲ್ಕ ಸೇರಿಸಿ ಪಾಕದಲ್ಲಿಳಿಸಿ ಸೇಚಿಸಲು ಎಲ್ಲಾ ವಿಧದ ಕಾಸರೋಗಗಳೂ ಶ್ವಾಸರೋಗಗಳೂ, ನಿವಾರಣೆಯಾಗುವವು.

॥ कच्चूरादि तैलम् ॥

कच्चूरहेमरजतारिघनेंद्रवल्ली, सैरीयकारलतिकाबलभद्रश्रृङ्गी ।
इक्ष्वाकुकूलरजनीहरिपर्णिकास्नुक्, धर्माम्बुरोगरिपुरक्षतिकापमार्गौ ॥ ६० ॥
कीटारिकेतिकसुरस्यशुगाग्निजिह्वा, द्रोणेपिधानरससिद्धविशुद्धतैलम् ।
अक्यैकेवल्यगदपञ्चमहीरुहाणा, मक्षाभयामलकवर्णवतीयुगानाम् ॥ ६१ ॥
क्वाथे पचेत् गदफलत्रयकालयाब्द, माञ्जिष्ठयान्वितकषायगणैश्च पिष्टैः ।
पक्वं विगाष्य शशिजे सकले च कुष्टे ह्यभ्यज्यतां सति विषेषतएव भिन्नैः ॥६२॥

## ಕಚ್ಚೂರಾದಿ ತೈಲ

ಕಚ್ಚೂರಗಡ್ಡೆ, ಉನ್ಮತ್ತ, ವೇಳ್ಳಿಲಬೇರು, ಪೋಯ್ತಲಚ್ಚೀ. ಉಯಿಞ್ ಬಳ್ಳಿ, ಕರಿಕುರಿಞಬೇರು, ಹಾಗಲಬಳ್ಳಿ, ಕಡಿರಬೇರು, ಕರ್ಕಾಟಕ ಶೃಂಗಿ, ಚೆರೂಳಬೇರು, ಗರ್ಗ, ಇಕ್ಷ್ವಾಕುಮೂಲ, ಪಟುವಲಬಳ್ಳಿ, ಅರಸಿನ, ಮುತ್ತಿಳ್, ಕಳ್ಳಿಬೇರು, ಎರಿಕ್ಕಿಲ, ಕೊಂದೆಯೆಲೆ, ಮುರಿಪರಿತ್ತಿ ಎಲೆ, ಸಣ್ಣಕಡಲಾಡಿ, ವಿಶಾಲರಿ, ಕೇತಕೀಬೇರು. ಕರಿಪ್ಪು, ಅಶೋಕಯೆಲೆ, ಅಗ್ನಿಜಿಹ್ವಾ, ತುಂಬೆ, ತುಳಸೀ, ಇವುಗಳಿಂದ ತಯಾರಿಸಿದ ಸ್ವರಸ ಗಳಿಂದಲೂ ಎಕ್ಕೆಬೇರು, ವೇಂಬಾಡ, ಕೊಂದೆಕೆತ್ತೆ, ನಾಲ್ಕುಮರಗಳಕೆತ್ತೆ, ಕಲ್ಲು ಅಶ್ವತ್ಥಕೆತ್ತೆ, ಶಾಂತಿಕಾಯಿಸಿಪ್ಪೆ, ಅಣಿಲೆಕಾಯಿಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಅರಸಿನ, ಮರದರಸಿನಸಿಪ್ಪೆ, ಇವುಗಳ ಕಷಾಯಗಳಿಂದಲೂ, ಕಂಕುಷ್ಟ, ತ್ರಿಫಲೆಗಳು, ಕುಂಕುಮಪಟ್ಟ, ಭದ್ರಮುಷ್ಟಿ, ಮಂಜಿಷ್ಠಕಡ್ಡಿ, ಇವುಗಳ ಕಲ್ಕದಿಂದಲೂ ಕಾಯಿಸಿ ಪಾಕಮಾಡಿದ ತೈಲವು ಸಕಲ ವಿಧದ ಕುಷ್ಟಗಳಿಗೂ ಬಹಳ ಹಿತಕಾರಿಯು.

॥ गुग्गुल्वादि तैलम् ॥

गुग्गुलुमरीचविडङ्गैः सर्षपकासीससर्जरसमुस्तैः ।
श्रीवेष्टतालगंधैर्मनःशिलाकुष्ठकंपिल्लैः ॥ ६३ ॥
उभयाहरिद्रासहितैश्चक्रिकतैलेन मिश्रितैरेभिः ।
दिनकरकराभितप्तैः कुष्टं गृष्टं च नष्टं च ॥ ६४ ॥

## ಗುಗ್ಗುಲ್ವಾದಿ ತೈಲ

ಗುಗ್ಗುಲು, ಕರಿಮೆಣಸು, ವಾಯುವಿಳಂಗ, ಸಾಸಿವೆಕಾಳು, ಕಾಸೀಸ ಚಂಚಲ್ಯ. ಭದ್ರಮುಷ್ಟಿ, ಕಂಡಿವೆಣ್ಣೆ, ತಾಲ, ಗಂಧಕ, ಮನಶ್ಶಿಲೆ, ಕಂಕುಷ್ಟ, ಕಂಬಿಪ್ಪಾಲೆಬೇರಿನ ಸಿಪ್ಪೆ, ಅರಸಿನ, ಮರದರಸಿನ ಇವು ಪ್ರತಿಯೊಂದು ವಸ್ತುಗಳನ್ನು ಚೂರ್ಣಿಸಿ ಎಣ್ಣೆಯೊಂದಿಗೆ ಸೇರಿಸಿ ಸೂರ್ಯ ಕಿರಣಗಳಿಂದ ಬಿಸಿಮಾಡಿದ ತೈಲವು ಕುಷ್ಠರೋಗವನ್ನು ನಾಶಮಾಡುತ್ತದೆ.

॥ एलादि तैलम् ॥

एलायुग्मतुरुष्ककुष्ठफलिनीमांसीजलध्यामकं ।
स्पृक्काचौरकचोचपत्रतगरस्थौणेयजातीरसाः ।
शुक्तिर्व्याघ्रनखोऽमराह्वमगुरुःश्रीवासकं कुंकुमम् ।
चंडागुग्गुलुदेवधूपखपुराः पुन्नागनागाह्वयम् ॥ ६५ ॥
एलादिको वातकफौ विषं च विनियच्छति ।
वर्णप्रसादनः कंडूपिटिकाकोठ नाशनः ॥ ६६ ॥

## ಏಲಾದಿ ತೈಲ

ಏಲಕ್ಕಿ, ಸಣ್ಣಏಲಕ್ಕಿ, ಕಂಡಿಬೆಣ್ಣೆ, ಕಂಕುಷ್ಟ, ನೇರಳೆಪುಷ್ಪ, ಜಟಾಮಾಂಸಿ, ಇರುವೇರಿದಂಡು, ನಾಮರ್ಕಹುಲ್ಲು, ಚೋನಕಹುಲ್ಲು, ಕಚ್ಚೂರ, ಏಲಕ್ಕಿ, ತಮಾಲಪತ್ರೆ, ತಗರ, ಜಾಯಿಕಾಯಿ, ಮುತ್ತುಸಿಪ್ಪೆ, ವ್ಯಾಘ್ರನಖ, ದೇವದಾರು, ಅಗಿಲುಗಂಧ, ತಿರುವಟ್ಟಪಶ, ಕುಂಕುಮಕೇಸರಿ, ನೆಲಸಂಪಿಗೆಗೆಡ್ಡೆ, ಗುಗ್ಗುಲು, ಚಂಚಲ್ಯ, ಕಂಡಿವೆಣ್ಣೆ, ಪುನ್ನಾಗ, ನಾಗಕೇಸರಿ, ಈ ಏಲಾದಿ ಗಣವು ವಾತ, ಕಫ, ವಿಷ, ತುರಿಸುವಿಕೆ, ಪಿಡಕೆ ಮೊದಲಾದುವುಗಳನ್ನು ಹೋಗಲಾಡಿಸುವುದು.

॥ निशोशीरादि तैलम् ॥

निशोशीरबलाक्वाथे तैलमेलादिकल्कवत् ।
सिद्धमभ्यङ्गयोगेन पिडकामेहसूदनम् ॥ ६७ ॥

## ನಿಶೋಶೀರಾದಿ ತೈಲ

ಅರಸಿನ, ಲಾಮಂಚ, ಕಡಿರಬೇರು, ಕಷಾಯದಲ್ಲಿ ಎಳ್ಳೆಣ್ಣೆ ಸೇರಿಸಿ ಏಲಾದಿವರ್ಗದಲ್ಲಿ ಉಕ್ತವಾದ ಔಷಧಿಗಳನ್ನು ಕಲ್ಕ ಸೇರಿಸಿ ಪಕ್ವಮಾಡಿ ಇಳಿಸಿದ ತೈಲವು ಅಭ್ಯಂಗಯೋಗದಿಂದ ಮೇಹಪಿಡಕಾದಿ ಮೇಹರೋಗ ಗಳನ್ನು ಹೋಗಲಾಡಿಸಿ ಸುಖವನ್ನೀಯುವುದು.

॥ अष्टपत्र तैलम् ॥

बिल्वं कारस्करदळं भ्रमरं शक्रवल्लरी ।
सामृतं नागवल्यग्रं पटोलामलकं तथा ॥ ६८ ॥
आसुत्य द्विगुणं क्षीरं तैलप्रस्थं विपाचयेत् ।
अष्टपत्रमिदं तैलं शिरोरोग विनाशनम् ॥ ६९ ॥

## ಅಷ್ಟಪತ್ರ ತೈಲ

ಬಿಲ್ವಪತ್ರೆ ಎಲೆ, ಕಾಸರ್ಕನ ಎಲೆ, ಭೃಂಗರಾಜ ಎಲೆ, ಇಂದ್ರವಲ್ಲೀ ಎಲೆ, ಅಮೃತಬಳ್ಳಿ ಎಲೆ, ನಾಗವಲ್ಲೀ ಎಲೆ, ಕಾಡುಪಟವಲ ಎಲೆ, ನೆಲ್ಲಿ ಎಲೆ ಇವುಗಳು ಪ್ರಸ್ಥ 1ರಂತೆ ಸ್ವರಸ ಸೇರಿಸಿ ತೈಲಪ್ರಸವನ್ನು ಕೂಡಿಸಿ ಅದರ ದ್ವಿಗುಣ ಹಾಲನ್ನು ಸಹಾ ಸೇರಿಸಿ, ಸೇಚನೆ ಮಾಡುವುದರಿಂದ ಸಕಲ ಶಿರೋರೋಗಗಳನ್ನು ಹೋಗಲಾಡಿಸಿ ಸುಖವನ್ನೀಯುವುದು.

॥ दार्वीस्वरसादि तैलम् ॥

दार्वीस्वरसयष्ट्याह्वं गृहधूमनिशान्वितम् ।
तैलमभ्यञ्जनात् पक्वं मेढ्रोगं निवारयेत् ॥ ७० ॥

## ದಾರ್ವೀಸ್ವರಸಾದಿ ತೈಲ

ಮರದರಸಿನ ಕಷಾಯದಲ್ಲಿ ಜ್ಯೇಷ್ಠಮಧು, ಗೃಹಧೂಮ (ಹೊಗೆ ಕರಿ), ಇವುಗಳ ಕಲ್ಕವನ್ನು ಸೇರಿಸಿ ತಯಾರಿಸಿದ ತೈಲದ ಅಭ್ಯಂಜನ ದಿಂದ ಮೇಢ್ರರೋಗವು ನಿವಾರಣೆಯಾಗುತ್ತದೆ.

॥ अमृतोत्तर तैलम् ॥

गुडूच्याविपचेत्काथे तैलं क्षीरसमन्वितम् ।
चंदनोशीरकुष्टाब्दसारिबामलकात्पलैः ॥ ७१ ॥
कल्कैरेभिः शिरोदाहं पित्तगुल्ममपिज्वरम् ।
प्रमेहं विनिहंत्याशु नाम्नैतदमृतोत्तरम् ॥ ७२ ॥

## ಅಮೃತೋತ್ತರ ತೈಲ

ಅಮೃತಬಳ್ಳಿಯ ಕಷಾಯಕ್ಕೆ ತೈಲ ಸೇರಿಸಿ ಅಷ್ಟೇ ಹಾಲು ಕೂಡಿಸಿ ಚಂದನ, ಲಾಮಂಚ, ಕಂಕುಷ್ಠ, ಭದ್ರಮುಷ್ಟಿ, ನಾಮದಬೇರು, ನೆಲ್ಲಿಕಾಯಿಸಿಪ್ಪೆ, ನೆಲಸಂಪಿಗೆ ಗಡ್ಡೆ, ಇವುಗಳ ಕಲ್ಕವನ್ನು ಸೇರಿಸಿ ಪಾಕ ಮಾಡಿ ಇಳಿಸಿ ಸೇಚನೆಮಾಡುವುದರಿಂದ ಸಕಲವಿಧದ ತಲೆದಾಹ, ಪಿತ್ತ ಗುಲ್ಮ, ಜ್ವರ, ದಾಹ, ಪ್ರಮೇಹ ಮೊದಲಾದುವುಗಳು ನಾಶವಾಗುತ್ತವೆ.

॥ २ चंदनादि तैलम् ॥

चंदनोदीच्यनळद धात्रीयष्ट्याह्वसारिबाः ।
सबलास्सलिलद्रोणे पृथग्दशपलोन्मिताः ॥ ७३ ॥
पक्त्वा कषाये सक्षीरे क्षिपेत् ब्राह्मीवरीरसम् ।
कुमारीनाळिकेरांबु तैलमानं पृथक् पृथक् ॥ ७४ ॥
प्रपौंडरीकमञ्जिष्ठा धातकी पद्मकेसरम् ।
कुमुदोत्पलशालूक मृणाळबिसपद्मकम् ॥ ७५ ॥
अनंताकुशकासेक्षु क्षीरिश्शृङ्गं सवल्कलम् ।
गणं च जीवनीयाख्यं क्वाथे द्रव्याणि पेषयेत् ॥ ७६ ॥
प्रस्थं च दत्वा तैलस्य शनैर्मृद्वग्निना पचेत् ।
एतत्तैलप्रशमयेद्दाहमूर्छाशिरोग्रहान् ॥ ७७ ॥
कामिलासाध्यरोगं च रक्तपित्तं च नाशयेत् ।
प्रदरं पित्तविभ्रंशं विसर्पं पित्तवैकृतम् ॥ ७८ ॥
अभ्यङ्गपाननस्याद्यैर्हंतिवज्रमिवासुरान् ।

## ಮತ್ತೊಂದು ಚಂದನಾದಿ ತೈಲ

ಚಂದನ, ಇರಿವೇರಿದಂಡು, ಲಾಮಂಚ, ನೆಲ್ಲಿಕಾಯಿಸಿಪ್ಪೆ, ಜ್ಯೇಷ್ಠ ಮಧು, ನಾಮದಬೇರು, ಕಡಿರಬೇರು, ಇವುಗಳ ಕಷಾಯ, ಹಾಲು, ಎಳ್ಳೆಣ್ಣೆ, ಬ್ರಾಹ್ಮಿಸ್ವರಸ, ಶತಾವರೀಸ್ವರಸ, ಜೋಳೀಸ್ವರಸ (ಕುಮಾರೀ) 1 ಪ್ರಸ್ಥ, ಎಳನೀರು ಇವುಗಳು ಪ್ರತ್ಯೇಕಪ್ರತ್ಯೇಕ ಎಣ್ಣೆಯ ಪ್ರಮಾಣದಲ್ಲಿ ಕೂಡಿಸಿ ಕಲ್ಕಕ್ಕೆ ಪುಂಡರೀಕ, ಮಂಜಿಷ್ಟಕಡ್ಡಿ, ಧಾತಕೀಕುಸುಮ, ಪದ್ಮ ಕೇಸರ, ಕುಮುದ, ನೆಲಸಂಪಿಗೆಗಡ್ಡೆ, ತಾವರೆನಾಳ, ಪದ್ಮಕಾಷ್ಠ, ಪಚ್ಚೆ ರಂಗಿಬೇರು, ಕುಶಬೇರು, ಆಟ್‌ದರ್ಭೆಬೇರು, ಕಬ್ಬು ಈ ಮೂರರ ಬೇರುಗಳು ನಾಲ್ಕು ಮರಗಳ ಚಿಗುರು, ಲವಂಗಚಕ್ಕೆ ಮತ್ತು ಜೀವನೀಯ ಗಣ, (ಬುಗುಡಿಹೂವಿನಗಡ್ಡೆ, ಕಾಕೋಳಿ, ಕ್ಷೀರಕಾಕೋಳಿ, ಮೇದಾ, ಮಹಾ ಮೇದಾ, ಸಣ್ಣಹೆಸರುಬೇರು, ಕಾಡುದ್ದುಬೇರು, ಜೀವಕ, ಋಷಭಕ) ಇವು ಗಳನ್ನು ಸೇರಿಸಿ, ಮೃದು ಅಗ್ನಿಯಿಂದ ಪಕ್ವಮಾಡಿ ದಾಹ, ಮೂರ್ಛೆ, ಶಿರೋ ಗ್ರಹ, ಕಾಮಿಲಾ, ರಕ್ತಪಿತ್ತ, ಭ್ರಾಂತಿ, ಆಢ್ಯವಾತ, ಪ್ರದರ, ಚಿತ್ತವಿಭ್ರಂಶ, ವಿಸರ್ಪ, ಪಿತ್ತವಿಕಾರಗಳನ್ನು ಅಭ್ಯಂಗಪಾನನಾವನಗಳಿಂದ ಹೋಗ ಲಾಡಿಸುವುದು.

॥ माषादि तैलम् ॥

माषमुद्गबलासिद्धं तैलं सर्वशिरोर्तिनुत् ॥ ७९ ॥

## ಮಾಷಾದಿ ತೈಲ

ಉದ್ದು, ಹೆಸರು, ಕಡಿರಬೇರು, ಇವುಗಳಿಂದ ಮಾಡಿದ ತೈಲವು ಶಿರೋರೋಗಹರ.

॥ तुळसीस्वरसादि तैलम् ॥

तुळसीस्वरसे सिद्धं कुंदुरुष्कसमन्वितम् ।
पूतिना संभ्रतं हन्यात्तैलं दुष्टजलस्रुतिम् ॥ ८० ॥

## ತುಳಸೀಸ್ವರಸಾದಿ ತೈಲ

ತುಳಸೀಸ್ವರಸಕ್ಕೆ ಕುಂಧ್ರಿಕ ಕಲ್ಕ ಸೇರಿಸಿ ಎಳ್ಳೆಣ್ಣೆ ಕೂಡಾ ಹಾಕಿ ಮೃದುಪಾಕದಲ್ಲಿ ಮಾಡಿದ ತೈಲದ ನೇಜನೆಯು ಮೂಗಿನಿಂದ ಬರುವ

ದುರ್ಗಂಧಯುಕ್ತ, ಪೂಯಸ್ರಾವ, ದುಷ್ಟಜಲಸ್ರಾವವನ್ನು ಕೂಡಾ ಗುಣ ಪಡಿಸುತ್ತದೆ.

॥ तिंत्रिणीस्वरसादि तैलम् ॥

तिंत्रिणीस्वरसे तैलप्रस्थं सम्यक् पचेत् भिषक् ।
अत्र कल्कं प्रवक्ष्यामि सर्ववातहरश्च यत् ॥ ८१ ॥

**ತಿಂತ್ರಿಣೀಸ್ವರಸಾದಿ ತೈಲ**

ಹುಣಸೆ ಎಲೆಯ ಸ್ವರಸ ಪ್ರಸ್ಥ 2ಕ್ಕೆ ತೈಲಪ್ರಸ್ಥ ½ ಸೇರಿಸಿ ವಾತಹರಗಳಾದ ಮದ್ದುಗಳನ್ನು ಕಲ್ಕಸೇರಿಸಿ ಪಾಕಮಾಡಿದ ತೈಲವು ಕಿವಿಯಲ್ಲಿ ಉಂಟಾಗುವ ಎಲ್ಲಾತರದ ರೋಗಗಳನ್ನು ಹೋಗಲಾಡಿಸುವುದು.

॥ कुष्टांतक तैलम् ॥

द्वात्रिंशद्बाकुचीबीजं जलद्रोणे विपाचयेत् ।
चतुर्भागावशेषं तु कषायमवतारयेत् ॥ ८२ ॥
पूते तस्मिन् कषाये तु त्रिकांतं च रसं तथा ।
पृथक् पृथक् पञ्चनिष्कं चतुर्विंशश्च निष्ककम् ॥ ८३ ॥
गंधकं चैव संयोज्य नागवल्लीरसेन तु ।
याममात्रं सुपिष्ट्वा तु सूक्ष्मं दृषदि डोलयेत् ॥ ८४ ॥
तैलप्रस्थं पचेत्सम्यक् शनैर्द्रव्यावाहयेत् ।
यावत् चिक्कणतां याति तत्तैलमवतारयेत् ॥ ८५ ॥
धान्यमध्ये तु निखनेत् पक्षद्वयमुपेक्षया ।
शुभे मुहूर्ते नक्षत्रे सकल्कं तैलमुत्तमम् ॥ ८६ ॥
लेहयेत्प्रातरुत्थाय मानवोऽमरतां व्रजेत् ।
क्षीराज्याशी परिहरन् व्यायामादीन् जितेंद्रियः ॥ ८७ ॥
प्रलेपात्सर्वकुष्टानि नाशयेत्सहजानि च ।
कुष्टांतकमिदं नाम्ना तैलमात्रेयनिर्मितम् ॥ ८८ ॥

## ಕುಷ್ಠಾಂತಕ ತೈಲ

ಕಾಕೋ೯ಲರಿಬೀಜ ಪಲ 32, ಕಷಾಯಕ್ಕೆ ನೀರುಕುತ್ತಿ 32, ಸೇರಿಸಿ, ಕಷಾಯದ 1/4 ಅಂಶ ಬತ್ತಿಸಿ ಕುತ್ತಿ 8ನ್ನು ಗಾಳಿಸಿ ಶುದ್ಧಮಾಡಿದ ಮೇಲೆ, ಅದೇ ಕಷಾಯಕ್ಕೆ, ಮೂರು ವಿಧದ ಕಾಂತಗಳನ್ನು (ಅಯಸ್ಕಾಂತ, ಸೂರ್ಯಕಾಂತ, ಚಂದ್ರಕಾಂತ), ರಸವನ್ನೂ ಬೇರೆಬೇರೆ 5-5 ಕ್ಯಾಂಜಿಗಳಂತೆ ತೆಗೆದು, ಹಾಗೆಯೇ 24 ಕ್ಯಾಂಜಿ ಗಂಧಕವನ್ನೂ ತೆಗೆದು ಇವೆಲ್ಲವನ್ನೂ ಒಂದಾಗಿ ಸೇರಿಸಿ, ನಾಗವಲ್ಲೀರಸ (ವೀಳ್ಯದೆಲೆಯ ಸ್ವರಸ) ದಿಂದ ಒಂದು ಯಾಮುಪರ್ಯಂತ ಚೆನ್ನಾಗಿ ಅರೆದು, ಆದಮೇಲೆ ಹಿಂದೆ ಹೇಳಿದ ಕಷಾಯಕ್ಕೆ ಒಂದು ಕುತ್ತಿ ಎಳ್ಳೆಣ್ಣೆಯನ್ನೂ ಕೂಡಿಸಿ, ವೀಳ್ಯದೆಲೆಯಿಂದ ಮರ್ದಿಸಿದ ಚೂರ್ಣವನ್ನೂ ಸೇರಿಸಿ, ಮೃದ್ವಗ್ನಿಯಿಂದ ಕೂಡಿದ ಒಲೆಯ ಮೇಲಿಟ್ಟು ಸಟ್ಟುಗದಿಂದ ಕ್ರಮದಂತೆ ಮರ್ದಿಸುತ್ತಾ, 'ಚಿಕ್ಕಣ' ಪಾಕವಾಗುವಾಗ ಒಲೆಯಿಂದ ಕೆಳಗಿಳಿಸಿ, ಸ್ವಚ್ಛವಾದ ಪಾತ್ರದಲ್ಲಿ ಹಾಕಿ ಭದ್ರಪಡಿಸಿ, ಒಂದು ತಿಂಗಳವರೆಗೆ ಭತ್ತದರಾಶಿಯಲ್ಲಿ ಹೂತಿಟ್ಟು, ಶುಭಮುಹೂರ್ತ, ಶುಭನಕ್ಷತ್ರ, ತಾರಾಬಲಗಳನ್ನು ಪರಾಂಬರಿಸಿ, ಧಾನ್ಯರಾಶಿಯಿಂದ ತೆಗೆದು, ಪ್ರತಿದಿನ ಬೆಳಗ್ಗೆ ಮಿತಪ್ರಮಾಣದಲ್ಲಿ ಸೇವಿಸಿ, ನಂತರ ಕ್ಷೀರದಿಂದ ಕೂಡಿದ ಅನ್ನವನ್ನು ಭುಂಜಿಸಬೇಕು. ಈ ಔಷಧಾಮೃತವನ್ನು ಸೇವಿಸುವಕಾಲದಲ್ಲಿ, ದೇಹಶ್ರಮವನ್ನು ಮಾಡದೇ ಸರ್ವವಿಧದಲ್ಲಿಯೂ ಇಂದ್ರಿಯನಿಗ್ರಹವುಳ್ಳವನಾಗಬೇಕು. ಈ ರೀತಿಯಿಂದ ವರ್ತಿಸಿದ ಮನುಷ್ಯನು, ದೇವತೆಗಳಂತೆ ತೇಜಸ್ವಿಯಾಗುವನು. ಮತ್ತು ಈ ತೈಲವನ್ನು ಶರೀರದ ಬಹಿರ್ಭಾಗಕ್ಕೂ ಲೇಪಿಸುವುದರಿಂದ, ಸರ್ವವಿಧದ ಕುಷ್ಠರೋಗಗಳನ್ನು ಕಳೆದು ವಿಶೇಷತಃ ಸಹಜ ಕುಷ್ಠರೋಗಗಳನ್ನೂ ಕೂಡಾ ಹೋಗಲಾಡಿಸುವುದು. ಮತ್ತು ರೋಗದಿಂದ ಬಿಳುಪೇರಿದ ರೋಮರಾಜಿಗಳನ್ನೂ, ಶ್ವಿತ್ರಗಳನ್ನೂ, ಬೆಂಕಿ ಬಿದ್ದು ಉಂಟಾದ ಶ್ವಿತ್ರಕಲೆಗಳಂತಿರುವುದನ್ನೂ ನಿವೃತ್ತಿಪಡಿಸಿ, ಸುಖಾಭಿವೃದ್ಧಿಯನ್ನೀಯುವುದು. ಈ ತೈಲವು ಪೂಜ್ಯಪಾದರಾದ ಆತ್ರೇಯ ಮಹರ್ಷಿಗಳಿಂದ ಉಪದೇಶಿಸಲ್ಪಟ್ಟಿರುವುದು.

॥ त्रिफलादि तैलम् ॥

एकाबाकुचिकीटहृत्तुवरकै, रावेदितावेद्यकै ।
रन्योरुष्करतेजनीहरियवैर्युक्ता फलानां त्रयैः ॥
अक्षेणामलकेन लोहितकया चान्यापिसङ्कीर्तिता ।
त्रीण्येतानि फलत्रयाणि शरणं कुष्टातुराणां नृणाम् ॥ ८९ ॥

## ತ್ರಿಫಲಾದಿ ತೈಲ

ಕಾಕೋಡಲರಿ, ವಿಶಾಲರಿ, ನೀರಟ್ಟಿಕ್ಕುರು, ಇವು ಮೂರು ಬಗೆಯು ಮದ್ದುಗಳು ಕೂಡಿ 1; ಗಟ್ಟಿದ ಗೇರು, ಚೆರ್ಪುನ್ನಯರಿ, ಕೊಡಗಪ್ಪಾಲಯರಿ ಇವು ಕೂಡಿ 1; ಶಾಂತಿಕಾಯಿ, ನೆಲ್ಲಿಕಾಯಿ, ಅಣಿಲೆಕಾಯಿ, ಇವುಗಳು ಮೂರು ಕೂಡಿ 1, ಈ ವಿಧದಿಂದ ಕೂಡಿಸಿ ಪಾಕಮಾಡಿದ ತೈಲವು, ಕುಷ್ಠರೋಗದವರಿಗೆ ಅತಿ ಹಿತದಾಯಕವು.

॥ सहचरादि तैलम् ॥

समूलशाखस्य सहाचरस्य ।
तुलां समेतां दशमूलतश्च ।
पलानि पञ्चाशदभीरुतश्च ।
पादावशेषं विपचेद्धटेऽपाम् ॥ ९० ॥

तत्र सेव्यनखकुष्टहिमैला ।
स्पृक्प्रियङ्गुनलिकांबुशिलाजैः ।
लोहितानलदसुराह्वैः ।
कोपनामिसितुरुष्कनतैश्च ॥ ९१ ॥

कंपाक्षेपस्तंभशोषादियुक्तान् ।
गुल्मोन्मादौ पीनसं योनिरोगन् ।
तुल्यक्षीरं पालिकैस्तैलपात्रं ।
सिद्धं कृच्छ्रान् शीलितं हंति वातान् ॥ ९२ ॥

## ಸಹಚರಾದಿ ತೈಲ

ಕರಿಕುರಿಂಞಾಬೇರೂ ಎಲೆಯೂ ಕೂಡಿ ಪಲ 100, ದಶಮೂಲಗಳು ಪಲ 50, ಶತಾವರಿಬೇರು ಪಲ 50 ಸೇರಿಸಿ ಕಷಾಯುವಿಟ್ಟು ಪಾದಾವಶೇಷ ಬತ್ತಿಸಿ; ಎಳ್ಳೆಣ್ಣೆ ಸೇರಿಸಿ, ಎಣ್ಣೆಯಷ್ಟೇ ಹಾಲು ಕೂಡ ಹಾಕಿ ಲಾಮಂಚ, ನಾಗಗುಣ (ನಖಂ) ಕಂಕುಷ್ಠ, ಚಂದನ, ಏಲಕ್ಕಿ, ಚೋನಕ ಹುಲ್ಲು, ನೇರಳೆಪುಷ್ಪ, ಮಾಂಸಿವಿಶೇಷ, ಇರಿವೇರಿದಂಡು ಕಲ್ಮದ, ಮಂಜಿಷ್ಠ ಕಡ್ಡಿ, ಜಟಾಮಾಂಸಿ, ಅಗಿಲುಗಂಧ, ದೇವದಾರು, ತಿರುವಟ್ಟಪಶ, ಸತಾಪೆ, ಕುಂದ್ಲಿಕ, ತಗರ, ಇವುಗಳ ಕಲ್ಕ ಸೇರಿಸಿ ಪಾಕಮಾಡಿದ ತೈಲವು ಸಕಲ ವಿಧದ ವಾತರೋಗಗಳನ್ನೂ ಹೋಗಲಾಡಿಸುವುದು.

॥ करंभशाकोडादि तैलम् ॥

करंभशाकोडवरानिशानां ।
प्राचीनकाल्लूपकचित्रकानाम् ।
दंतीयुतानां क्वथिते कषाये ।
प्राचीनकल्कं तिलजं पचेत् ॥ ९३ ॥

आक्रूपमिथ्यास्वरसैरुपेतं ।
सपादचित्राभवतैलमेतत् ।
श्लीपादनाशायवदंति तैलम् ।
घृतं तु पित्तप्रभवे विकारे ॥ ९४ ॥

## ಕರಂಭಶಾಕೋಡಾದಿ ತೈಲ

ಉಮ್ಮತ್ತದಬೇರು, ಚೆರುಪರುವಬೇರು (ಶಾಕೋಡ), ತ್ರಿಫಲೆಗಳು, ಅರಸಿನ, ಪುಳಿಯಾರಿಲೆ, ಅಳೂಪಗಡ್ಡೆ (ಈರಚ್ಚೆಂಬಿನ್ ಗಡ್ಡೆ), ಇವುಗಳ ಸ್ವರಸ, ಸಣ್ಣಹರಳೆಣ್ಣೆ ಇವುಗಳಿಂದ ತಯಾರಿಸಿದ ತೈಲವು ಶ್ಲೀಪದರೋಗಗಳನ್ನು ಹೋಗಲಾಡಿಸುವುದು. ಅದಲ್ಲದೆ ಪಿತ್ತೋಲ್ಬಣ ಶ್ಲೀಪದರೋಗದಲ್ಲಿ ಮುಂಚೆ ಹೇಳಿದ ಸ್ವರಸಗಳಿಂದ ತಯಾರಿಸಿದ ಘೃತವೂ ಕೂಡಾ ಅತಿ ಹಿತಕಾರಿಯು.

॥ वचादि तैलम् ॥

वचाहरीतकीलाक्षाकटुरोहिणीचंदनैः ।
निर्गुंडीस्वरसैः सिद्धं तैलमाश्वपचीं नयेत् ॥ ९५ ॥

## ವಚಾದಿ ತೈಲ

ಕರಿನೆಕ್ಕಿಯ ಸ್ವರಸಕ್ಕೆ ಎಳ್ಳೆಣ್ಣೆ ಸೇರಿಸಿ ಬಜೆ, ಅಣಿಲೆಕಾಯಿ, ಕೋಲರಗು, ಕಟುಕರೋಹಿಣಿ, ಚಂದನ, ಇವುಗಳನ್ನು ಕಲ್ಕನೇರಿಸಿ ಪಾಕ ಮಾಡಿ ಇಳಿಸಿ ಸೇಚಿಸಲು, ಅಪಚೀರೋಗವು ದೂರಸರಿಯುವುದು.

॥ त्रिफलादि तैलम् ॥

त्रिफलामृतवल्यौ च केतक्यसनकौ बलाम् ॥
एरंडमिंद्रवल्लीं च जलद्रोणे विपाचयेत् ॥ ९६ ॥
रसेन तेकराजस्य हठस्य स्वरसेन च ।
तैलप्रस्थं पचेद्धीमान् द्विगुणक्षीरसंयुतम् ॥ ९७ ॥
कल्कं च कुष्टयष्ट्याह्वपद्मकोशीरचंदनैः ।
मुस्तैलापत्रमांसी च हयगंधामृता बला ॥ ९८ ॥
सारिबामरकुष्टं च लवङ्गनतचोरकान् ।
उत्पलाद्यञ्जनेनीलीश्लक्ष्णपिष्टान् समावपेत् ॥ ९९ ॥
शिरोरोगप्रतिश्यायौ विशेषेण विनाशयेत् ।
खालित्यं चैव पालित्यं केशानां भञ्जनं तथा ।
त्रिफलाद्यमिदं तैलमूर्ध्वजत्रुगदापहम् ॥ १०० ॥

## ತ್ರಿಫಲಾದಿ ತೈಲ

ತ್ರಿಫಲೆಗಳು, ಅಮೃತಬಳ್ಳಿ, ಕೇತಕೀಮೂಲ, ಬೇಂಗತಿರುಳು, ಕಡಿರ ಬೇರು, ಸಣ್ಣಹರಳುಬೇರು, ಇಂದ್ರುವಲ್ಲಿ, ಇವುಗಳು ಪಲ 2ರಂತೆ ಕೂಡಿಸಿ ಕಷಾಯಕ್ಕೆ ನೀರು ಕುತ್ತಿ 16, ಬತ್ತಿಸಿ ಕುತ್ತಿ 4ಕ್ಕೆ ಭೃಂಗರಾಜರಸ

ಕುತ್ತಿ 1, ಹಸಿನೆಲ್ಲಿಕಾಯಿರಸ ಕುತ್ತಿ 1, ಈ ರಸಗಳಿಗೆ ಎಳ್ಳೆಣ್ಣೆಕುತ್ತಿ 1, ಹಾಲು ಕುತ್ತಿ 2ನ್ನೂ ಸೇರಿಸಿ, ಕಲ್ಕಕ್ಕೆ–ಜ್ಯೈಷ್ಠಮಧು, ಚಂದನ, ಕಂಕುಷ್ಠ ಲಾಮಂಚ, ಭದ್ರಮುಷ್ಟಿ, ಏಲಕ್ಕಿ, ಪಚ್ಚೆಲೆ, ಮಾಂಸಿ, ಅಶ್ವಗಂಧಿ, ಅಮೃತ ಬಳ್ಳಿ, ಕಡಿರಬೇರು, ನಾಮದಬೇರು, ದೇವದಾರು, ಲವಂಗಚಕ್ಕೆ, ತಗರ, ಕಚ್ಚೂರ, ನೆಲಸಂಪಿಗೆಗಡ್ಡೆ, ಆಂಬಲಗೆಡ್ಡೆ, ನೈದಿಲೆಗಡ್ಡೆ, ಕರಿಕೂವಳಗಡ್ಡೆ, ತಾವರೆವಳಯುಂ, ಅಂಜನಕಲ್ಲು, ಅಮರಿಬೇರು ಇವು ಪ್ರತಿಯೊಂದನ್ನು, ಕೈಂಚಿ 2ರಂತೆ ಸೇರಿಸಿ ಚೂರ್ಣಮಾಡಿ ಕಲ್ಕಸೇರಿಸಿ ಪಕ್ವಮಾಡಿದ ತಿಃಫಲಾದಿತೈಲವು ಶಿರೋರೋಗ, ಪ್ರತಿಶ್ಯಾಯ, ಖಲಿತ, ಪಲಿತ, ಕೇಶ ಭಂಜನ, ಊರ್ಧ್ವಜತ್ರು ರೋಗಗಳನ್ನು ಹೋಗಲಾಡಿಸುವುದು.

॥ असनबिल्वादि तैलम् ॥

असनबिल्वबलामृतपाचिते ।
मधुकनागरकत्रिफलान्विते ॥
पयसि तैलमिदं पयसा पचेत् ।
नयनकर्णशिरोहितमुत्तमम् ॥ १०१ ॥

## ಅಸನಬಿಲ್ವಾದಿ ತೈಲ

ಬೇಂಗತಿರುಳು, ಬಿಲ್ವಪತ್ರೆತಿರುಳು, ಕಡಿರಬೇರು, ಅಮೃತಬಳ್ಳಿ, ಈ ಮದ್ದುಗಳ ಕಷಾಯುಮಾಡಿ ಜ್ಯೇಷ್ಠಮಧು, ಒಣಶುಂಠಿ, ತ್ರಿಫಲೆಗಳಸಿಪ್ಪೆ, ಇವುಗಳ ಕಲ್ಕಮಾಡಿ ಸೇರಿಸಿ, ಎಳ್ಳೆಣ್ಣೆಯುನ್ನೂ, ಹಾಲನ್ನೂ ಹಾಕಿ ಮಾಡಿದ ತೈಲದ ಸೇಚನೆಯಿಂದ ನಯುನರೋಗ, ಕರ್ಣರೋಗ, ಶಿರೋರೋಗಗಳು ನಾಶವಾಗುತ್ತವೆ.

॥ नागरादि तलम् ॥

नागरस्य तुले द्वे तु स्यातुलाचित्रकस्य तु ।
देवदारुतदर्धं स्यात्तदर्धं द्विकरञ्जकम् ॥ १०२ ॥
मुस्तारिमेदत्रिफलाछन्नीदंस्यार्कगुग्गुलुः ।

तदर्धमिति संगृह्य द्विद्रोणे सलिले पचेत् ॥ १०३ ॥
तैलाढकं विपक्तव्यं कार्षिकैः कल्कितैरिमैः ।
शटीपुष्करशार्ङ्गेष्टाहपुषापिप्पलीत्रयम् ॥ १०४ ॥
भार्ङ्गी रास्ना मधूच्छिष्टं निशाद्वयवचांबुदम् ।
चातुर्जातं च मञ्जिष्ठाचंदनागुरुपद्मकैः ॥ १०५ ॥
मांसीलोध्रावराकुष्ठैर्द्विगुणं क्षीरसंयुतम् ।
तत्पक्वं विनिहंत्याशु मुखजान् सकलामयान् ॥ १०६ ॥
पानाभ्यञ्जनगंडूषनस्योन्मर्दनबस्तिभिः ।

## ನಾಗರಾದಿ ತೈಲ

ಒಣಶುಂಠಿ ಪಲ 200, ಚಿತ್ರಮೂಲ ಪಲ 100, ದೇವದಾರು ಪಲ 50, ಕೊಂಗ್ರ್ಮರದಕೆತ್ತೆ, ರಾವುಬೀಜದಕೆತ್ತೆ ಪಲ 50, ಭದ್ರಮುಷ್ಟಿ, ಅರಿಮೇದ (ಕರಿವೇಲತ್ತೊವಿ), ತ್ರಿಫಲೆಗಳು, ಛತ್ರಿ, ನಾಗದಂತಿಬೇರು, ಎಕ್ಕೆಗಿಡದ ಬೇರು, ಗುಗ್ಗುಲು ಇವು ಎಲ್ಲಾ ಕೂಡಿ 25 ಪಲ, 32 ಕುತ್ತಿ ಕಷಾಯದಲ್ಲಿ ಬತ್ತಿಸಿ 8 ಕುತ್ತಿಗೆ, 4 ಕುತ್ತಿ ತೈಲ, ಕಚ್ಚೂರ, ಪುಷ್ಕರ ಮೂಲ, ಕರಚ್ಚೂಳೀ, ಬೆಟ್ಟುಕರಂಡೆಬೇರು, ಹಿಪ್ಪಿಲಿ, ಹಿಪ್ಪಿಲಿಮೂಲ, ಅತ್ತಿ ಹಿಪ್ಪಿಲಿ, ಕಿರುತೇಗು. ಕೆಂಪರತ್ತೆ, ಜೇನುಮಯಣ, ಅರಸಿನ, ಮರದರಸಿನ ಸಿಪ್ಪೆ, ಭದ್ರಮುಷ್ಟಿ, ಏಲಕ್ಕಿ, ಲವಂಗಚಕ್ಕೆ, ತಮಾಲಪತ್ರೆ, ನಾಗಕೇಸರಿ, ಮಂಜಿಷ್ಟಕಡ್ಡಿ, ಚಂದನ, ಅಗಿಲುಗಂಧ, ಪದ್ಮಕಾಷ್ಠ, ಮಾಂಸಿ, ಪಾಚೋಟಕೆತ್ತೆ, ತ್ರಿಫಲೆಗಳು, ಕಂಕುಷ್ಠ, ಎಣ್ಣೆಗಿಂತ ದ್ವಿಗುಣಹಾಲು, ಇವುಗಳ ತೈಲವನ್ನು ಪಾನ ಅಭ್ಯಂಜನ, ಗಂಡೂಷ, ವಿಧಿಗಳಿಂದ ಉಪ ಯೋಗಿಸಿದ್ದಲ್ಲಿ ಎಲ್ಲಾ ಮುಖರೋಗಗಳು ನಿವಾರಣೆಯಾಗುವುವು.

## ॥ मञ्जिष्ठादि तैलम् ॥

मञ्जिष्ठाञ्जनसारिवाब्दकटुकातक्कोलजातीफल ।
श्रीकंठत्रिफलाजटातगररूग्यष्टिचातुर्जातकैः ।

सौगीरागुरुचोरयुग्ममृगनाभींतुत्पलांभोविसैः ।
तैलं नेत्रशिरोर्तिहारि सपयः सिद्धं कुमारीरसे ॥ १०७ ॥

## ಮಂಜಿಷ್ಠಾದಿ ತೈಲ

ಲೋಳಿರಸ (ಕುಮಾರೀ) ಕುತ್ತಿ 4ರಲ್ಲಿ ಎಳ್ಳೆಣ್ಣೆ ಕುತ್ತಿ1, ದನದ ಹಾಲು ಕುತ್ತಿ 4ನ್ನು ಸೇರಿಸಿ, ಕಲ್ಕಕ್ಕೆ–ಮಂಜಿಷ್ಟಕಡ್ಡಿ, ಅಂಜನಕಲ್ಲು, ನಾಮದಬೇರಿನಸಿಪ್ಪೆ, ಭದ್ರಮುಷ್ಟಿ, ಕಟುಕರೋಹಿಣಿ, ತಕ್ಕೋಲ, ಜಾಯಿ ಕಾಯಿ, ಕಂಡಿವೆಣ್ಣೆ, ಅಣಿಲೆಕಾಯಿಸಿಪ್ಪೆ, ನೆಲ್ಲಿಕಾಯಿಸಿಪ್ಪೆ, ಶಾಂತಿ ಕಾಯಿಸಿಪ್ಪೆ, ಜಟಾಮಾಂಸಿ, ತಗರ, ಕಂಕುಷ್ಠ, ಜ್ಯೇಷ್ಠಮಧು, ಏಲಕ್ಕಿ, ಲವಂಗಚಕ್ಕೆ, ತಮಾಲಪತ್ರೆ, ನಾಗಕೇಸರಿ, ಲಾಮಂಚ, ಅಗಿಲು, ಕಚ್ಚೂರ, ಅಡವಿಕಚ್ಚೂರ, ಪುಣುಗು, ಪಚ್ಚೆಕರ್ಪೂರ, ನೆಲಸಂಪಿಗೆ ಗಡ್ಡೆ, ಇರುವೇರಿದಂಡು, ತಾವರೆಕುಸುಮ, ಇವು ತೊಲೆ ಅರ್ಧ ಅರ್ಧ ಪ್ರಕಾರ ಕಲ್ಕ ಸೇರಿಸಿ ಪಾಕಮಾಡಿ ಗಾಳಿಸಿ ಹಚ್ಚಿಕೊಳ್ಳುವುದರಿಂದ ನೇತ್ರರೋಗಗಳೂ ಶಿರೋರೋಗಗಳೂ ಶಮನ.

॥ बलाहठादि तैलम् ॥

बलाहठामृतामुद्गमाषक्वाथे तिलोद्भवम् ।
पक्वं शिरोरुजं हंति चंदनामययष्टिभिः ॥ १०८ ॥

## ಬಲಾಹಠಾದಿ ತೈಲ

ಕಡಿರಬೇರು, ನೆಲ್ಲಿಕಾಯಿ, ಅಮೃತಬಳ್ಳಿ, ಹೆಸರು, ಉದ್ದು ಇವು ಗಳ ಕ್ವಾಥಕ್ಕೆ ಎಳ್ಳೆಣ್ಣೆ ಸೇರಿಸಿ ಚಂದನ, ಕಂಕುಷ್ಠ, ಜ್ಯೇಷ್ಠಮಧು, ಕಲ್ಕ ಹಾಕಿ ಸುಪಾಕದಿಂದ ಇಳಿಸಿದ ತೈಲವನ್ನು ಸೇಚಿಸುವುದರಿಂದ ಶಿರೋರೋಗಗಳು ನಾಶವಾಗುವುವು.

॥ भृङ्गामलकादि तैलम् ॥

भृङ्गामलकरसप्रस्थे ।
तैलप्रस्थं पलं च मधुकस्य ।

क्षीराढकं विपक्वं बलाका ।
  न्पिकोकिलां कुरुते ॥ १०९ ॥
अंधमनंधं कुरुते ।
  बधिरमबधिरं तथा ।
चलदंतमुपाचित ।
  पीनोरस्को भवति नरो मासमात्रेण ॥ ११० ॥

## ಭೃಂಗಾಮಲಕಾದಿ ತೈಲ

ಭೃಂಗರಾಜ (ಗರ್ಗಸಮೂಲ), ತಂದು ಜಜ್ಜಿ ತೆಗೆದ ಸ್ವರಸ ಕುತ್ತಿ 2, ಹಸಿ ನೆಲ್ಲಿಕಾಯಿ ರಸ ಕುತ್ತಿ 2ಕ್ಕೆ ಎಳ್ಳೆಣ್ಣೆ ಕುತ್ತಿ 1 ಸೇರಿಸಿ ಕಲ್ಕಕ್ಕೆ ಜ್ಯೇಷ್ಠಮಧು ತೊಲೆ 14ನ್ನು ಚೂರ್ಣಿಸಿ ಕಲ್ಕಮಾಡಿ ಸೇರಿಸಿ, ಪಾಕದಲ್ಲಿಳಿಸಿ ಮಾಸಮಾತ್ರೋಪಯೋಗದಿಂದ ಕೋಕಿಲಾಪಕ್ಷಿಯಂತೆ ಸುಸ್ವರವನ್ನೂ, ಕುರುಡನಿಗೆ ನೇತ್ರದಾನವನ್ನೂ, ಬಧಿರನಿಗೆ ಕರ್ಣದಾನವನ್ನೂ, ಹಲ್ಲುಗಳಿಗೆ ಸ್ಥಿರತೆಯನ್ನೂ ಕೊಡುವುದು.

॥ बलाधात्र्यादि तैलम् ॥

एको भागो बलाधात्र्योर्गुडूच्यास्तु तदर्धकम् ।
उशीरस्य तदर्धं स्यात्तदर्धं हिरुबेरकम् ॥ १११ ॥
तदर्धं चंदनं यष्टी प्रसूनं बकुलस्य च ।
द्रोणेऽपां साधयेत्सम्यक् चतुर्भागावशेषिते ॥ ११२ ॥
अत्र कल्कं प्रदातव्यं मधुका चंदनद्वयम् ।
कुष्ठमुत्पलमब्दं च सारिबा च त्रिजातकम् ॥ ११३ ॥
जातीफलं च तक्कोलं कर्पूरं च शतावरी ।
जीवकर्षभकौ मेदा मृद्वीका कुंकुमं तथा ॥ ११४ ॥
लासजकं च शालूकं चोरकद्वयपुष्करम् ।
नागपुष्पं नखं स्पृक्का मञ्जिष्ठा कटुरोहिणी ॥ ११५ ॥
अञ्जनं सरळं दारु चंपकं मृगनाभिकम् ।
मधूकपुष्पं श्योनाक त्रिफला फलिनी मिसिः ॥ ११६ ॥

मुस्तागुरू तथा मांसी तगरं पद्मकेसरम् ।
कषायस्य समं क्षीरं सममामलकं तथा ॥ ११७ ॥
दत्वा तद्वच्छतावर्यास्तैलप्रस्थं विपाचयेत् ।
एतत्तैलं निहंत्याशु पानाभ्यञ्जननावनैः ॥ ११८ ॥
शिरोनेत्रगतान् रोगानन्यान्पित्ताऽनिलोद्भवान् ।
अङ्गदाहे शिरोदाहे नेत्रदाहे च शस्यते ॥ ११९ ॥
क्षतक्षयहरं वृष्यं रक्तमांसबलप्रदम् ।
ऊर्ध्वजत्रुगतान् रोगान् विशेषेण विनाशयेत् ॥ १२० ॥

## ಬಲಾಧಾತ್ರ್ಯಾದಿ ತೈಲ

ಕಡಿರಬೇರು, ನೆಲ್ಲಿಕಾಯಿಸಿಪ್ಪೆ, ಇವು ಭಾಗ 1, ಅದರ ಅರ್ಧಭಾಗ ಮೃತಬಳ್ಳಿ, ಅಮೃತಬಳ್ಳಿಯ ಅರ್ಧಭಾಗ ಲಾಮಂಚ, ಲಾಮಂಚದ ರ್ಧಭಾಗ ಇರುವೇರಿದಂಡು, ಇರುವೇರಿದಂಡಿನ ಅರ್ಧಭಾಗ ಚಂದನ, ್ಯೇಷ್ಠಮಧು, ರೆಂಜೆಪುಷ್ಪ, ಇವುಗಳನ್ನು ಹಾಕಿ 16 ಕುತ್ತಿ ಕಷಾಯವನ್ನು ಾದಾವಶೇಷ (4 ಕುತ್ತಿ) ಮಾಡಿ ಅದಕ್ಕೆ ಒಂದು ಕುತ್ತಿ ಎಳ್ಳೆಣ್ಣೆ ಹಾಕಿ, 4 ುತ್ತಿ ದನದ ಹಾಲು, ಅಷ್ಟೇ ನೆಲ್ಲಿಕಾಯಿರಸ, ಮತ್ತು ಅಷ್ಟೇ ಶತಾವರಿ ಸ, ಇವುಗಳನ್ನು ಸೇರಿಸಿ, ಕಲ್ಕಕ್ಕೆ—ಜ್ಯೇಷ್ಠಮಧು, ಚಂದನ, ರಕ್ತ ಂದನ, ಕುಂಕುಮ, ನೆಲಸಂಪಿಗೆ ಗಡ್ಡೆ, ಭದ್ರಮುಷ್ಟಿ. ಏಲಕ್ಕಿ ನಾಮದ ೇರು, ಲವಂಗಚಕ್ಕೆ, ತಮಾಲಪತ್ರೆ ಜಾಯಿಕಾಯಿ, ತಕ್ಕೋಲ, ಪಚ್ಚ ಪೂರ, ಶತಾವರಿಬೇರು, ಜೀವಕ, ಋಷಭಕ, ಮೇದಾ, ದ್ರಾಕ್ಷೆ, ುಂಕುಮಕೇಸರಿ, ಲಾಮಂಚ, ನೀರ್ಗಡ್ಡೆ, ಕಚ್ಚೂರ, ಅಡವಿಕಚ್ಚೂರ, ುಷ್ಕರಮೂಲ, ನಾಗಕೇಸರಿ, ನಾಗುಣ, ನಾಮರ್ಕಹುಲ್ಲು, ಮಂಜಿಷ್ಠ ಡ್ಡಿ. ಕಟುಕರೋಹಿಣಿ, ಅಂಜನಕಲ್ಲು, ಚರಳ, ದೇವದಾರು, ಸಂಪಿಗೆ ುಷ್ಪ, ಪುಣುಗು, ಇಪ್ಪೆಹೂ, ಚೋನಕಹುಲ್ಲು, ಅಣಿಲೆಕಾಯಿ ಸಿಪ್ಪೆ, ಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ನೇರಳೆಪುಷ್ಪ, ಸತಾಪೆ, ದೊಡ್ಡ ದ್ರಮುಷ್ಟಿ, ಅಗಿಲುಗಂಧ, ಮಾಂಸಿ, ತಗರ, ತಾವರೆಕುಸುಮ, ಕ್ರೆಂಜಿ ರಂತೆ ಅರೆದು ಸೇರಿಸಬೇಕು. ಈ ತೈಲವು ಸೇವಿಸುವುದಕ್ಕೂ ಲೇಪಿಸು

ವುದಕ್ಕೂ ನಸ್ಯಕ್ಕೂ, ಉಪಯೋಗಿಸಿದರೆ, ತಲೆಯಲ್ಲಿ ಉಂಟಾದ ರೋಗಗಳನ್ನೂ, ಕಣ್ಣಿನಲ್ಲಿ ಸಂಭವಿಸಿದ ರೋಗಗಳನ್ನೂ, ಪಿತ್ತರೋಗಗಳನ್ನೂ, ವಾತದಿಂದುಂಟಾದ ರೋಗಗಳನ್ನೂ ಹೋಗಲಾಡಿಸುವುದು. ಶರೀರದಾಹ, ನೇತ್ರದಾಹ, ಶಿರೋದಾಹ ಇವುಗಳಿಗೂ ಕ್ಷಯಕ್ಕೂ ಹಿತಕರವು. ಅಲ್ಲದೆ ಇದರಿಂದ ದೇಹಬಲವೂ, ರಕ್ತಬಲವೂ ಉಂಟಾಗುತ್ತದೆ.

॥ तुंगद्रुमादि तैलम् ॥

तुंगद्रुमस्य तरुणस्य रसे सुगंधं ।
लामज्जयष्टिमधुकोत्पलचंदनानाम् ।
कल्केन दुग्धसहितेन विपक्वमेते ।
तैलं शिरोनयनतर्पणमर्पणेन ॥ १२१ ॥

## ತುಂಗದ್ರುಮಾದಿ ತೈಲ

ಎಳನೀರು ಕುತ್ತಿ 4 ರಲ್ಲಿ ಎಳ್ಳೆಣ್ಣೆ ಕುತ್ತಿ 1, ದನದ ಹಾಲು ಕು. 4 ಕೂಡಾ ಸೇರಿಸಿ, ಕಲ್ಕಕ್ಕೆ ನಾಮದ ಬೇರಿನ ಸಿಪ್ಪೆ, ಲಾಮಂಚ. ಜ್ಯೇಷ್ಠಮಧು, ನೆಲಸಂಪಿಗೆ ಗಡ್ಡೆ, ಚಂದನ ಇವು ಕೈಂಚಿ 8ರಂತೆ ಚೂರ್ಣಿಸಿ ಕಲ್ಕಹಾಕಿ ಪಕ್ವಮಾಡಿದ ತೈಲವು ಶಿರೋರೋಗಗಳಿಗೂ ನಯನರೋಗಳಿಗೂ ಅತೀವ ಹಿತಕಾರಿಯು.

॥ चंदनादि तैलम् ॥

चंदनं मधुकं कुष्टमश्वगंधां सुरद्रुमम् ।
उशीरमुत्पलं मांसी पत्रागुरू निशा बला ॥ १२२ ॥
ह्रीबेरं नागकुसुमं स्पृक्कामञ्जिष्टसारिवाः ।
तगरं मृगनाभिश्च शतपुष्पा हरेणुकम् ॥ १२३ ॥
सूक्ष्मैलाब्दं त्वचा चोर बर्बरं तैः सुकल्कितैः ।
केतकीमूलजक्वाथे सक्षीरं तिलजं पचेत् ॥ १२४ ॥
तदभ्यङ्गादिभिस्तैलं वातशोणितनाशनम् ।

## ಚಂದನಾದಿ ತೈಲ

ಚಂದನ, ಜ್ಯೇಷ್ಠಮಧು, ಕಂಕುಷ್ಠ, ಅಶ್ವಗಂಧಿ, ದೇವದಾರು, ಲಾಮಂಚ, ನೆಲಸಂಪಿಗ ಗಡ್ಡೆ, ಜಟಾಮಾಂಸಿ, ತಮಾಲಪತ್ರೆ, ಅಗ

ಗಂಧ, ಅರಸಿನ, ಕಡಿರಬೇರು, ಇರುವೇರಿದಂಡು, ನಾಗಕುಸ
ನಾಮರ್ಗಕಹುಲ್ಲು, ಮಂಜಿಷ್ಠಕಡ್ಡಿ, ನಾಮದಬೇರು, ತಗರ, ಪುಣ
ಸತಾಪೆ, ಅರೇಣುಕ, ಸಣ್ಣ ಏಲಕ್ಕಿ (ಚಿಟ್ಟೇಲಾ), ಭದ್ರಮುಷ್ಟಿ, ಕಚ
ಕಿರುತೇಗು ಬೇರು, ಇವುಗಳು ಪ್ರತಿಯೊಂದು ಕ್ವೆಂಜಿ 2ರಂತೆ ಚೂರ್ಣವ
ಕಲ್ಕ ಸೇರಿಸಿ, ಕೇತಕೀಮೂಲ ಕಷಾಯ (ಸ್ವರಸ ಕುತ್ತಿ 4), ಎಳ್ಳೆಣ್ಣೆ
1 ಕೂಡಿಸಿ ದನದ ಹಾಲು ಕುತ್ತಿ 4 ಹಾಕಿ, ಪಾಕಮಾಡಿದ ತೈ
ಅಭ್ಯಂಗಾದಿ ವಿಧಿಗಳಿಂದ ವಾತಶೋಣಿತ ರೋಗವನ್ನು ಹೋಗಲಾ
ವುದು.

॥ अमृतादि तैलम् ॥

अमृताक्वाथसंसिद्धं तैलं चंदन सर्षपैः ॥ १२५ ॥
सारिवोशीरकुष्टाब्दधात्रीसोत्पलतस्करैः ।
कल्कैर्वा वातपित्तास्रशिरोरोगहरं परम् ॥ १२६ ॥

## ಅಮೃತಾದಿ ತೈಲ

ಅಮೃತಬಳ್ಳಿ ಕಷಾಯ ಕುತ್ತಿ 4ರಲ್ಲಿ ಎಳ್ಳೆಣ್ಣೆ ಕುತ್ತಿ 1 ಸೇ
ಕಲ್ಕಕ್ಕೆ ಚಂದನ, ಸಾಸಿವೆ, ನಾಮದಬೇರಿನ ಸಿಪ್ಪೆ, ಲಾಮಂಚ,
ಕಂಕುಷ್ಠ, ಭದ್ರಮುಷ್ಟಿ, ನೆಲ್ಲಿಕಾಯಿ ಸಿಪ್ಪೆ, ನೆಲಸಂಪಿಗೆ ಗಡ್ಡೆ, ಕಚ
ಗಡ್ಡೆ. ಇವುಗಳನ್ನು ಕ್ವೆಂಜಿ 4½ಯಂತೆ ಚೂರ್ಣಿಸಿ ಕಲ್ಕ ಸೇರಿಸಿ ತಯ
ಸಿದ ತೈಲದ ಸೇಚನೆಯಿಂದ ವಾತರಕ್ತ, ಪಿತ್ತರಕ್ತ, ಶಿರೋರೆ
ಇವುಗಳು ಶಮನ.

॥ धुर्धूरादि तैलम् ॥

धुर्धूरपत्रस्वरसे तद्वीजैः श्लक्ष्णचूर्णितैः ।
पक्वं तैलं निहंत्याशु कंडूं केशच्युतिं नृणाम् ॥ १२७ ॥

## ದುರ್ಧೂರಾದಿ ತೈಲ

ಉಮ್ಮತ್ತಪತ್ರಸ್ವರಸ, ಮತ್ತು ಅದರ ಬೀಜಗಳನ್ನು ಕಲ್ಕ
ಸೇರಿಸಿ ತಯಾರಿಸಿದ ತೈಲದ ಸೇಚನೆಯಿಂದ ತಲೆತುರಿಸುವಿಕೆ,
ಕೂದಲು ಬೀಳುವಿಕೆ ಇವುಗಳು ಶಮನವಾಗಿ, ಶಿರೋರೋಗಗಳಲ್ಲಿ
ಹಿತಕಾರಿಯಾಗುವುದು.

॥ जीमूतादि तैलम् ॥

जीमूतभृंगकरवीरनिशार्कनाल्यः ।
तेषां रसे तिलजमेकरसेन तुल्यं ।
कार्पासमूलसहितं मृदुवह्निपक्व ।
मर्वाङ्कसकेशपतनं विनिहंति कंडूम् ॥ १२८ ॥

## ಜೀಮೂತಾದಿ ತೈಲ

ಕಹಿಬೇವಿನ ಎಲೆಯ ರಸ, ಭೃಂಗರಾಜ ರಸ, ಕರವೀರ ರಸ, ಹಸಿ ಅರಸಿನ ರಸ, ಎಕ್ಕೆಗಿಡದ ಎಲೆಯ ರಸ, ಅಮರಿ ಎಲೆಯ ರಸ, ಹತ್ತಿ ಬೇರು, ಈ ಮದ್ದುಗಳು ಪ್ರತಿಯೊಂದರ ಸ್ವರಸ ಕುತ್ತಿ 1ರಂತೆ ಕೂಡಿಸಿ ತಯಾರಿಸಿದ ತೈಲವು ಕೇಶಪತನ ನಿವೃತ್ತಿಪಡಿಸಿ, ತುರಿಸುವಿಕೆಯನ್ನೂ ಹೋಗಲಾಡಿಸುವುದು.

॥ नीलीभृंगादि तैलम् ॥

नीलीभृंगरजःशतक्रतुलताधात्रीफलानां रसे ।
क्षीरैराढकनाळिकेरमहिषीधेनूद्भवैः साधितम् ।
तैलं तत्पयसैव पिष्टलुलितैर्यष्ट्याह्वगुञ्जाञ्जनैः ।
केशान् सञ्जनयेत्तलेऽपि करयोरास्तामकेशं शिरः ॥ १२९ ॥

## ನೀಲೀಭೃಂಗಾದಿ ತೈಲ

ಅಮರಿಎಲೆ, ಭೃಂಗರಾಜ, ಇಂದ್ರವಲ್ಲಿ (ಉಯಿಞಾಬಳ್ಳಿ), ಹಸಿ ನೆಲ್ಲಿಕಾಯಿ, ಇವುಗಳ ಪ್ರತಿಯೊಂದರ ಸ್ವರಸ ಕುತ್ತಿ 1, ಎಳ್ಳೆಣ್ಣೆ, ಕುತ್ತಿ 1 ಆಡಿನಹಾಲು, ತೆಂಗಿನಹಾಲು, ಎಮ್ಮೆ ಹಾಲು, ದನದ ಹಾಲು ಇವು ಪ್ರತಿಯೊಂದು ಕುತ್ತಿ 1ರಂತೆ, ಜ್ಯೇಷ್ಠಮಧು, ಮಂಜಿಷ್ಟೆ ಬೀಜ, ಅಂಜನ ಕಲ್ಲು ಇವು ಕೈಂಜಿ 12ರಂತೆ ನುಣ್ಣಗೆ ಅರೆದು ಕಲ್ಕ ಕೂಡಿಸಿ ಪಾಕದಲ್ಲಿಳಿಸಿ ತಲೆಗೆ ಹಚ್ಚುವುದರಿಂದ ಕೂದಲು ಬರುವುದಕ್ಕೂ, ತಲೆಯ ರೋಗರುಜೆಗಳು ನಿಲ್ಲುವುದಕ್ಕೂ ಫಲಕಾರಿಯು.

॥ अंकोलादि तैलम् ॥

अंकोलबीजमरिचकुष्टैः कल्कीकृतैर्भिषक् ।
पचेत् बकुलपत्रस्य जंबीरस्य रसाढके ॥ १३० ॥
तैलप्रस्थं शिरोऽभ्यङ्गात् शिरः कुष्ठविनाशनम् ।

## ಅಂಕೋಲಾದಿ ತೈಲ

ಅಂಕೋಲಬೀಜ, ಕರಿಮೆಣಸು, ಕಂಕುಷ್ಠ ಇವು ಕ್ರೈಂಜಿ 12ರಂ: ಇವುಗಳ ಕಲ್ಕ, ರೆಂಜೆ ಪತ್ರಸ್ವರಸ ಕುತ್ತಿ 2, ನಿಂಬೇಹುಳಿ ರಸ ಕುತ್ತಿ ಇವುಗಳೊಂದಿಗೆ ಎಣ್ಣೆ ಕುತ್ತಿ 1, ಕೂಡಾ ಹಾಕಿ, ಪಾಕದಲ್ಲಿಳಿಸಿದ ತೈ ವನ್ನು ತಲೆಗಿಡಲು ತಲೆಯ ಹುಣ್ಣು ತುರಿಸುವಿಕೆ ಹೋಗಲಾಡಿಸುವುದು

॥ नीलीनिर्गुंड्यादि तैलम् ॥

नीलीनिर्गुंडिकाभृंगदुर्धूररजसीस्तथा ॥ १३१ ॥
कोशातकी च चिञ्चार्कौ तेषां सारे चतुर्गुणे ।
त्रिजातबाकुचीकुष्ठैस्तैलं सम्यग्विपाचितम् ॥ १३२ ॥
सप्तरात्रप्रयोगेण कपालार्शो विनाशनम् ।

## ನೀಲೀನಿರ್ಗುಂಡ್ಯಾದಿ ತೈಲ

ಅವುರಿ ಎಲೆ, ಕರಿನೊಚ್ಚಿ ಎಲೆ, ಭೃಂಗರಾಜ (ಗರ್ಗ), ದುರ್ಧೂ ಪತ್ರ (ಉಮ್ಮತ್ತ ಎಲೆ), ಹಸಿಅರಸಿನ, ಸೊರೆಕಾಯಿ, ಹುಣಸೆ ಎಲೆ ರ. ಎಕ್ಕೆ ಗಿಡದ ಎಲೆಯ ರಸ, ಇವು ಪ್ರತಿಯೊಂದು ಕುತ್ತಿ ½, ಕಲ್ಕ ಏಲಕ್ಕಿ, ಲವಂಗಚೆಕ್ಕೆ, ತಮಾಲಪತ್ರೆ, ಕಾರ್ಕೋಲರಿ, ಕಂಕುಷ್ಠ, ಕ್ರೈಂ 6ರಂತೆ ಇವುಗಳನ್ನು ಚೂರ್ಣಿಸಿ ಕಲ್ಕ ಹಾಕಿ, ಎಳ್ಳೆಣ್ಣೆ ಕುತ್ತಿ 1 ಕೂಡಿ ತಯಾರಿಸಿದ ತೈಲವನ್ನು ತಲೆಗೆ ಹಚ್ಚುವುದರಿಂದ ಕಪಾಲಾರ್ಶಸ್ಸು ಶಮ.

॥ नीलीनिशादि तैलम् ॥

नीलीनिशेङ्गुदीक्षीरवल्कवैकुंटजे रसे ।
तैलं सजंबीररसे कपालव्याधिनुत् स्मृतम् ॥ १३३ ॥

## ನೀಲೀನಿಶಾದಿ ತೈಲ

ಅಮರಿ ಎಲೆ, ಹಸಿ ಅರಸಿನ, ಇಂಗುದಿವಲ್ಕಲ, ನಾಲ್ಕುಮರಗಳ ಕೆತ್ತೆ, ತುಂಬೆ ಇವುಗಳ ಸ್ವರಸ, ನಿಂಬೆಹುಳಿ ರಸದಿಂದ ಪಾಕಮಾಡಿದ ತೈಲವು ಕಪಾಲಾರ್ಶಸ್ಸಿಗೆ ಹಿತಕಾರಿಯು.

॥ वचालशुनादि तैलम् ॥

वचालशुनदार्षाभिर्बिल्वपत्ररसे श्रुतम् ।
तैलं श्रवणदोषघ्नं विशेषात्पूयनाशनम् ॥ १३४ ॥

## ವಚಾಲಶುನಾದಿ ತೈಲ

ಬಜೆ, ಬೆಳ್ಳುಳ್ಳಿ, ಅರಸಿನ, ಇವುಗಳನ್ನು ಕಲ್ಕ ಕೂಡಿಸಿ, ಬಿಲ್ವಪತ್ರೆಯ ಸ್ವರಸದಿಂದ, ಪಾಕಮಾಡಿ ಸಿದ್ಧವಾದ ತೈಲವು ಕಿವಿನೋವು, ಕಿವಿಯಿಂದ ಹೊರಗೆ ಬರುವ ಪೂಯವನ್ನೂ ನಾಶಮಾಡುವುದು.

॥ निर्गुंडीरजन्यादि तैलम् ॥

निर्गुंडीरजनीबिल्वस्नुह्यालर्करसे श्रुतम् ।
रसोनदार्वबिल्वाभ्यां विश्वभेषजकल्कितम् ॥ १३५ ॥
तैलं श्रवणदोषघ्नं विशेषात्पूयनाशनम् ।

## ನಿರ್ಗುಂಡೀರಜನ್ಯಾದಿ ತೈಲ

ಕರಿನೊಚ್ಚಿ ಎಲೆಯ ರಸ, ಹಸಿ ಅರಸಿನ, ಬಿಲ್ವಪತ್ರೆ ಎಲೆಯ ರಸ, ಕಳ್ಳಿ ಎಲೆಯ ರಸ, ಎಕ್ಕೆಗಿಡದ ಎಲೆಯರಸ, ಇವುಗಳ ಸ್ವರಸಕ್ಕೆ ಒಣ ಶುಂಠಿ ಕಲ್ಕಹಾಕಿ ಪಾಕಮಾಡಿದ ತೈಲವು ಶ್ರವಣದೋಷ, ಕಿವಿಯಿಂದ ಪೂಯ ಬರುವಿಕೆ, ಇವುಗಳನ್ನು ಹೋಗಲಾಡಿಸುವುದು.

॥ अरिमेदत्वगादि तैलम् ॥

अरिमेदत्वचो ग्राह्यं नवं पलशतं भवेत् ॥ १३६ ॥

न्यग्रोधोदुंबराश्वत्थप्लक्षवल्काच्छतं तथा ।
चतुर्द्रोणे जले पक्त्वा चतुर्भागाऽवशेषिते ॥ १३७ ॥
तैलाढकं पचेत्तत्र कार्षिकैः कल्कितैरिमैः ।
यष्टीत्रिजातमञ्जिष्ठागायत्रीलोध्रकट्फले ॥ १३८ ॥
क्षीरिवृक्षारिमेदत्वक्मुस्तागुरुहिमद्वयै ।
कर्पूरजातीतक्कोलमांसीधातकिगैरिकैः ॥ १३९ ॥
मृणालमिसिवैदेहीपद्मकेसरकुङ्कुमैः ।
लाक्षासमङ्गाबृहतीबिल्वमध्यसुरद्रुमैः ॥ १४० ॥
शैलेयं सरळं स्पृक्का पलाशरजनीद्वयैः ।
प्रियङ्गुतेजिनीपार्थशरपुङ्खफलत्रयैः ॥ १४१ ॥
कालेयपुष्करजटाव्याघ्रीमदनसंयुतैः ।
जाते चिक्कणपाके तु परिस्राव्य निधापयेत् ॥ १४२ ॥
तन्नस्यपानगंडूषबस्त्यभ्यङ्गेषु योजयेत् ।
सुखजानामयान् हंति विशेषाद्दंतरोगजित् ॥ १४३ ॥

## ಅರಿಮೇದತ್ವಗಾದಿ ತೈಲ

'ಅರಿಮೇದೋವಿಟ್ಖದಿರೆ, ಇತ್ಯಮರಃ' ದುರ್ಗಂಧಕಾಚಗೆ ತಿರುಳಿಗೆ ಅರಿಮೇದ ಎಂದು ಹೆಸರು.

ಹೊಸ ಅರಿಮೇದ ಚಕ್ಕೆ (ಕರಿವೇಲತೊಗಲಿ) ಪಲ 100, ಅತ್ತಿ ಗೋಳಿ, ಕಿನ್ನಿಗೋಳಿ, ಅಶ್ವತ್ಥ, ಇವುಗಳ ಚಕ್ಕೆ ಪಲ 100, ಚತುರ್ದ್ರೋಣ (64 ಕುತ್ತಿ) ನೀರಿನಲ್ಲಿ ಚತುರ್ಭಾಗಾವಶೇಷ ಮಾಡಿ ತೈಲಪ್ರಸ್ಥ 4, ಜ್ಯೇಷ್ಠ ಮಧು, ಏಲಕ್ಕಿ. ಲವಂಗಚಕ್ಕೆ, ತಮಾಲಪತ್ರೆ, ಮಂಜಿಷ್ಠ ಕಡ್ಡಿ, ಕಾಚಿ ತಿರುಳು, ಪಾಚೋಟಿ ಕೆತ್ತೆ, ಕುಮಿಳು ಬೇರು, ನಾಲ್ಕುಮರಗಳ ಕೆತ್ತೆ, ಅರಿ ಮೇದ ಕೆತ್ತೆ, ಭದ್ರಮುಷ್ಟಿ, ಅಗಿಲುಗಂಧ, ಚಂದನ, ರಕ್ತಚಂದನ, ಪಚ್ಚೆ ಕರ್ಪೂರ ಜಾಯಿಕಾಯಿ, ತಕ್ಕೋಲ, ಮಾಂಸೀ, ಧಾತಕೀಕುಸುಮ, ಕಾವಿಮಣ್ಣು, ತಾವರೆ ದಂಡು, ಸತಾಪೆ, ಹಿಪ್ಪಲಿ, ತಾವರೆ ಕುಸುಮ, ಕುಂಕುಮಕೇಸರಿ, ಕೋಲರಗು, ಪರಚ್ಚುಂಡಬೇರು, ಸಣ್ಣ ಕಂಟಕಾರಿ

ಬೇರು, ಬಿಲ್ವಪತ್ರಿ ಕೆತ್ತೆ, ದೇವದಾರು, ಕಲ್ನಾರು, ಚರಳ, ಚೋನಕಹುಲು ಪಲಾಶ ಕೆತ್ತೆ, ಅರಸಿನ, ಮರದರಸಿನ ಸಿಪ್ಪೆ, ನಾಣಿಲು, ಚೆರ್ಪ್ಪನ್ನಯುರಿ, ಬಜಾಪು, ಶರಪುಂಖ, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿ ಕಾಯಿ ಸಿಪ್ಪೆ, ಪುಷ್ಕರಮೂಲ, ತಾವರೆದಂಡು, ಸಣ್ಣ ಕುದನೆ ಬೇರು, ಜೇನು ಮಯಣ ಪ್ರತಿಯೊಂದು ಕ್ಷಂಜಿ 3ರಂತೆ ಈ ಔಷಧಿಗಳನ್ನು ಕಲ್ಕಮಾಡಿ ಸೇರಿಸಿ ಚಿಕ್ಕಣ ಪಾಕದಲ್ಲಿಳಿಸಿ ನಸ್ಯ, ಪಾನ, ಗಂಡೂಷ, ಶಿರೋಬಸ್ತಿ, ಅಭ್ಯಂಗಾದಿ ರೀತಿಗಳಿಂದ ಉಪಯೋಗಿಸಿದ್ದಲ್ಲಿ ಮುಖದಲ್ಲಿ ಉಂಟಾಗುವ ಎಲ್ಲಾ ರೋಗಗಳೂ ವಿಶೇಷತಃ ದಂತರೋಗಗಳೂ ನಿವೃತ್ತಿಯಾಗುವುವು.

॥ पुंखादि तैलम् ॥

पुंखक्वाथेऽभयाकल्कसिद्धं तैलं द्विजातिनुत् ।

## ಪುಂಖಾದಿ ತೈಲ

ಶರಪುಂಖಬೇರು, ಇದರ ಕಷಾಯಕ್ಕೆ ಅಣಿಲೆಕಾಯಿಸಿಪ್ಪೆ ಕಲ್ಕ ಹಾಕಿ ಪಾಕಮಾಡಿದ ತೈಲವು ಹಲ್ಲುನೋವುಗಳನ್ನು ಹೋಗಲಾಡಿಸು ವುದು.

॥ रामठादि तैलम् ॥

रामठलवणोपतं तैलं तन्नालिकेरस्य ।
विधिना सपयःसिद्धं रदशूलानाशु नाशयति ॥ १४४ ॥

## ರಾಮಠಾದಿ ತೈಲ

ಇಂಗು, ಇಂದುಪ್ಪು ಇವೆರಡು ಬಗೆಗಳ ಕಲ್ಕ ಸೇರಿಸಿ ಎಳ್ಳೆಣ್ಣೆ, ನಾಳಿ ಕೇರತೈಲದಲ್ಲಿ ಹಾಲು ಸೇರಿಸಿ ಪಾಕಮಾಡಿದ ತೈಲವನ್ನು ಹಲ್ಲುನೋವು ಗಳಿಗೆ ಉಪಯೋಗಿಸುವುದರಿಂದ ಉಪಶಮನ ಹೊಂದುವುದು.

॥ अञ्झटादि तैलम् ॥

अंझटानिंबनिर्गुंडीस्वरसेन विपाचितम् ।
निशाकल्कयुतं नलसोष्ठरोगाविनाशनम् ॥ १४५ ॥

### ಅಂರ್ಝುಡಾದಿ ತೈಲ

ನೆಲನೆಲ್ಲಿಬೇರು, ಕಹಿಬೇವು, ಕರಿಯುನೆಕ್ಕಿ ಇವುಗಳ ಸ್ವರಸಕ್ಕೆ ಅರಸಿನ ಕಲ್ಕ ಕೂಡಿಸಿ ಪಾಕಮಾಡಿದ ತೈಲವು ಓಷ್ಠ ರೋಗಗಳಿಗೆ ಹಿತಕರವು.

॥ २ दिनेशवल्यादि तैलम् ॥

दिनेशवल्लीस्वरसे विपक्वं ।
तच्चर्मकल्केन पुनर्नवस्य ॥
सारे च तैलं व्रणरोपणार्थं ।
प्रशस्तमित्येत द्वदन्ति तज्ञाः ॥ १४६ ॥

### ಮತ್ತೊಂದು ದಿನೇಶವಲ್ಯಾದಿ ತೈಲ

ವೆಂಬಾಡಸ್ವರಸ, ಅದರ ಕೆತ್ತೆಯ ಕಲ್ಕ, ತೆಗ್ಗಾಮೆ ಕಷಾಯ ಈ ತೈಲವು ವೃಣರೋಪಣಕ್ಕೆ ವಿಶೇಷ ಉಪಕಾರಿಯು.

॥ दूर्वादि तैलम् ॥

दूर्वास्वरसकल्काभ्यां सिद्धं तैलं व्रणे हितम् ।

### ದೂರ್ವಾದಿ ತೈಲ

ದೂರ್ವಾರಸದಲ್ಲಿ (ಕದಿಕೆಹುಲ್ಲು), ಅದರ ಕಲ್ಕವನ್ನೂ ಕೂಡ ಎಣ್ಣೆ ಸೇರಿಸಿ ಪಾಕಮಾಡಿದ ತೈಲವನ್ನು ವೃಣಗಳಿಗೆ ಹಚ್ಚಲು ಕೂಡಲೆ ಉಪಶಮನಹೊಂದುವುವು.

॥ तिलादि तैलम् ॥

तिलयष्ट्याह्वयोः कल्कं महिषीक्षीरसंयुतम् ।
शीर्यमाणेषु केशेषु केशस्थापनमुत्तमम् ॥ १४७ ॥

### ತಿಲಾದಿ ತೈಲ

ಎಳ್ಳುಕಾಳು, ಜ್ಯೇಷ್ಠಮಧು ಇವುಗಳ ಕಲ್ಕ ಸೇರಿಸಿ, ಎಮ್ಮೆಹಾಲು ಕೂಡಾ ಹಾಕಿ ಪಾಕಮಾಡಿದ ತೈಲವು ತಲೆಕೂದಲುಗಳು ಸ್ಥಿರವಾಗಿ, ಕೇಶಪತನವಾಗದೆ ಇರಲಿಕ್ಕೆ ಹಿತಕಾರಿಯು.

॥ नागरादि तैलम् ॥

नागरसैंधवमागधिमुस्ता ।
गोक्षुरवासालशुनैस्तैलम् ॥
अर्कसुपर्णरसेन विमिश्र ।
कर्णरुजं शतकोटि निहान्त ॥ १४८ ॥

### ನಾಗರಾದಿ ತೈಲ

ಒಣಶುಂಠಿ, ಇಂದುಪ್ಪು, ಹಿಪ್ಪಲಿ, ಭದ್ರಮುಷ್ಟಿ, ನೆಗ್ಗಿನಮುಳ್ಳು, ಆಡುಸೋಗೆ ಬೇರು, ಬೆಳ್ಳುಳ್ಳಿ ಇವುಗಳ ಕಲ್ಕ, ಎಕ್ಕೆಗಿಡದ ಎಲೆಯ ಸ್ವರಸ ದಲ್ಲಿ ಪಾಕಮಾಡಿದ ತೈಲದಿಂದ ಶತಕೋಟಿ ಕರ್ಣರೋಗಗಳು ಶಮನ ವಾಗುವುವು.

॥ अणुतैलम् ॥

जीवंती जलदेवदारुजलदत्वक्सेव्यगोपीहिमं ।
दार्वीत्वङ्मधुकप्लवागुरुवरापुंड्राह्वबिल्वोत्पलम् ॥
धावन्यौ सुरभिः स्थिरे क्रिमिहरं पत्रं त्रुटिं रेणुकम् ।
किञ्जल्कं कमलाह्वयं शतगुणे दिव्येऽम्भसि क्वाथयेत् ॥ १४९ ॥

तैलाद्रसं दशगुणं परिशोष्य तेन ।
तैलं पचेच्च सलिलेन दशैव वारान् ॥
पाके क्षिपेच्च दशमे समसाजदुग्धं ।
नस्यं महागुणमुशंत्यणुतैलमेतत् ॥ १५० ॥

### ಅಣು ತೈಲ

ಬುಗುಡಿಹೂವಿನ ಗಡ್ಡೆ, ಭದ್ರಮುಷ್ಟಿ, ಇರುವೇರಿದಂಡು, ದೇವದಾರು, ಲವಂಗಚಕ್ಕೆ, ಲಾಮಂಚ, ನಾಮದ ಬೇರು, ಚಂದನ, ಮರದರಸಿನ ಸಿಪ್ಪೆ, ಜ್ಯೇಷ್ಟಮಧು, ಕರಿಭದ್ರಮುಷ್ಟಿ, ಅಗಿಲುಗಂಧ, ಶತಾವರಿ ಬೇರು, ಪುಂಢರೀಕ ಕಬ್ಬು, ನೆಲಸಂಪಿಗೆ ಗಡ್ಡೆ, ಬಿಲ್ವಪತ್ರೆ ಬೇರು, ಕಂಟಕಾರಿ ಬೇರು, ಕುದನೆಬೇರು, ಸುರಭೀಬೇರು(ಚಿಟ್ಟಂತಿನ ಬೇರು), ಓರೆಲೆಬೇರು, ಮೂರೆಲೆ ಬೇರು, ವಿಶಾಲರಿ, ತಮಾಲಪತ್ರೆ, ಏಲಕ್ಕಿ, ಅರೇಣುಕ, ತಾವರೆಕುಸುಮ, ಕಡಿರಬೇರು, ಇವುಗಳನ್ನು ಈ ಔಷಧಿಗಳ ಶತಗುಣ ದಿವ್ಯಜಲದಲ್ಲಿ ಸೇರಿಸಿ, ಎಣ್ಣೆಯ ಹತ್ತುಪಾಲು ಉಳಿಯುವಂತೆ ಕುದಿಸಿ, ಕುದಿಸಿದ ಕಷಾಯಕ್ಕೆ ಪುನಃ ಮುಂಚಿನಂತೆ ಸೇರಿಸಿ, ಹಾಗೆಯೇ ನಿಲ್ಲಿಸಿ, ಈ ರೀತಿಯಿಂದ ಹತ್ತು ಸಲ ಕುದಿಸಿ ಬತ್ತಿಸುತ್ತಾ ಇನ್ನೂ ಹತ್ತನೇ ಸಲ, ಎಣ್ಣೆಗೆ ಸರಿಯಾಗಿ ಆಡಿನ ಹಾಲು ಕೂಡಿಸಿ ಸುಪಾಕಮಾಡಿ ಇಳಿಸಿ ಗಾಳಿಸಿ ಸ್ವಚ್ಛವಾದ ಪಾತ್ರಗಳಲ್ಲಿಟ್ಟು ಶಿರೋರೋಗಗಳಿಗೆ ನಸ್ಯವಿಧಿಯಿಂದ ಉಪಯೋಗಿಸಿದರೆ ಶಮನವಾಗುವುದು.

॥ सहदेव्यादि तैलम् ॥

सहदेवीरसे तैलं साधयेन्मतिमान् भिषक् ।
षडङ्गकल्कं सक्षीरं सर्वज्वरहरं परम् ॥ १५१ ॥

### ಸಹದೇವ್ಯಾದಿ ತೈಲ

ಸಹದೇವಿ ರಸಕ್ಕೆ ಎಣ್ಣೆ ಸೇರಿಸಿ ಷಡಂಗ ಕಲ್ಕ ಹಾಕಿ ಪಾಕಮಾಡಿ ಹಚ್ಚಲು ಜ್ವರ ಶಮನ.

॥ व्रणरोपण तैलम् ॥

महावृक्षार्कजे दुग्धे मधूच्छिष्टेन साधितम् ।
तैलं सकृत्प्रयोगेण दुष्टव्रणविरोपणम् ॥ १५२ ॥

## ವ್ರಣರೋಪಣ ತೈಲ

ಕಳ್ಳಿಯ ಹಾಲು, ಎಕ್ಕೆಗಿಡದ ಹಾಲು ಇವುಗಳಲ್ಲಿ ಎಳ್ಳೆಣ್ಣೆಯನ್ನು ಸೇರಿಸಿ ಪಾತ್ರಪಾಕದಲ್ಲಿ ಜೇನುಮೇಣವನ್ನು ಬೆರಸಿ ತಯಾರಿಸಿದ ತೈಲವನ್ನು ದುಷ್ಟವ್ರಣಗಳಿಗೆ ಒಂದೇ ಒಂದು ಸಲ ಹಚ್ಚುವುದರಿಂದ ಕೂಡಲೇ ಗುಣವಾಗುವುದು.

### ॥ बलातैलम् ॥

बलाशतं छिन्नरुहापादं रास्नाष्टभागिकम् ।
जलाढकशते पक्त्वा शतभागस्थिते रसे ॥ १५३ ॥

दधिमस्त्विक्षुनिर्यासशुक्तैस्तैलाढकं समैः ।
पचेदाजपयोऽर्धांशं कल्कैरेभिः पलोन्मितैः ॥ १५४ ॥

शटीसरलदार्वेलामञ्जिष्ठागुरुचंदनैः ।
पद्मकातिबलामुस्तासूर्पपर्णीहरेणुभिः ॥ १५५ ॥

यष्ट्याह्वसुरसव्याघ्रीनखर्षभकजीवकैः ।
पलाशरसकस्तूरीनालिकाजातिकोशकैः ॥ १५६ ॥

स्पृक्काकुंकुमशैलेयजातीकटुवचांबुभिः ।
त्वक्कुंदुरुष्ककर्पूरं तुंबुरुश्रीनिवासकैः ॥ १५७ ॥

लवङ्गनतकक्कोलकुष्ठमांसीप्रियङ्गुभिः ।
स्थौणेयतगरध्यामवचामदनकप्लवैः ॥ १५८ ॥

सनागकेसरैः सिद्धे दद्याच्चात्रावतारिते ।
पत्रं कल्कं ततः पूतं विधिना तत्प्रपूजितम् ॥ १५९ ॥

कासं श्वासं ज्वरं मूर्छां छर्दिं गुल्मं क्षतं क्षयम् ।
प्लीहशोषावपस्मारमलक्ष्मीं च प्रणाशयेत् ॥ १६० ॥

बलातैलमिदं श्रेष्ठं वातव्याधिविनाशनम् ।
पाने नस्ये ऽन्वासने ऽभ्यञ्जने च ।
स्नेहाः काले सम्यगेते प्रयुक्ताः ॥
दुष्टान् वातानाशु शांतिं नयेयुः ।
वंध्यानार्यपुत्रभाजश्च कुर्युः ॥ १६१ ॥

## ದೊಡ್ಡ ಬಲಾತೈಲ

ಕಡಿರಬೇರು ಪಲ 100. ಅಮೃತಬಳ್ಳಿ ಪಲ 25, ಕೆಂಪರತ್ತೆ ಪಲ 12½ ಇವನ್ನು ಚೆನ್ನಾಗಿ ಜಜ್ಜಿ 400 ಕುತ್ತಿ ಜಲದಲ್ಲಿ ಕಷಾಯ ಬತ್ತಿಸಿ ಕುತ್ತಿ 4 ಆಗುವಾಗ ಗಾಳಿಸಿ ತೆಗೆದು, 4 ಪ್ರಸ್ಥ ಎಳ್ಳೆಣ್ಣೆ ಅದಕ್ಕೆ ಸರಿಯಾಗಿ ಮೊಸರುನೀರು, ಕಬ್ಬಿನರಸ, ಚುತ್ತಪ್ಪುಳಿಯ ರಸ ಹಾಕಿ 2 ಪಾಲು ಆಡಿನ ಹಾಲು ಕೂಡಿಸಿ, ಕಲ್ಕಕ್ಕೆ ಕಚ್ಚೂರ, ಚರಳ, ದೇವದಾರು, ಏಲಕ್ಕಿ, ಮಂಜಿಷ್ಠ ಕಡ್ಡಿ, ಅಗಿಲುಗಂಧ, ಚಂದನ, ಪದ್ಮಕ, ದೊಡ್ಡ ಕಡಿರಬೇರು, ಭದ್ರಮುಷ್ಟಿ, ಕಾಡುದ್ದು ಬೇರು, ಅರೇಣುಕ, ಜ್ಯೇಷ್ಠಮಧು, ತಾತಾರ್ವಲ್ ಬೇರು, ವ್ಯಾಘ್ರನಖ, ಜೀವಕ, ಋಷಭಕ, ಪಲಾಶ, ಪುಣುಗು, ಕಲ್ಮದ, ಜಾಜಿಮಲ್ಲಿಗೆ, ಕಟುಕರೋಹಿಣಿ, ಇರುವೇರಿದಂಡು, ಲವಂಗಚೆಕ್ಕೆ, ಕುಂದ್ಲಿಕ, ಕರ್ಪೂರ, ತಿರುವಟ್ಟಪಶ, ಬಜೆ, ಕಂಡಿಬೆಣ್ಣೆ, ಲವಂಗ, ತಗರ, ತಕ್ಕೋಲ, ಕಂಕುಷ್ಠ, ಮಾಂಸೀ, ನಾಮರ್ಚಕಹುಲ್ಲು, ಕರಿಭದ್ರಮುಷ್ಟಿ, ಜಾಯಿಪತ್ರೆ, ಬಿಲ್ವಪತ್ರೆಕಾಯಿ, ಲವಂಗಚೆಕ್ಕೆ, ಕೊತ್ತಂಬರಿ, ತಾವರೆ ದಂಡು, ನೇರಳೆಪುಷ್ಪ, ತೂಣಿನಾಗ, ನಾಗಕೇಸರಿ ಇವನ್ನು ಸೇರಿಸಿ ಚೂರ್ಣ ಮಾಡಿ ಕಲ್ಕ ಕೂಡಿಸಿ ಮಂದಾಗ್ನಿಯಿಂದ ಪಾಕಮಾಡಿ ಗಾಳಿಸಿ ಆದಮೇಲೆ ಪಾತ್ರಪಾಕಕ್ಕೆ ಪಚ್ಚೆಲೆ ಚೂರ್ಣಹಾಕಿ ಅತಿ ಜಾಗರೂಕತೆಯಿಂದ ಭದ್ರ ವಾಗಿಟ್ಟು ಪ್ರಯುಕ್ತ ಪ್ರಮಾಣಾನುಸಾರ ಸೇವಿಸಲು ಕಾಸ, ಶ್ವಾಸ, ಜ್ವರ, ಮೂರ್ಛಾ, ವಮನ, ಗುಲ್ಮ, ವೃಣ, ಪ್ಲೀಹ, ಶೋಫ, ಅಪಸ್ಮಾರ, ಅಲಕ್ಷ್ಮೀ ಇವುಗಳನ್ನು ಉಪಶಮನ ಮಾಡುವುದಲ್ಲದೆ ಈ ಬಲಾತೈಲವು ಹಿಂದೆ

ಸೂಚಿಸಿದ ಬಲಾತೈಲಕ್ಕಿಂತಲೂ ವಾತರೋಗವನ್ನು ಹೋಗಲಾಡಿಸು ವುದರಲ್ಲಿ ಎಷ್ಟೋ ಪಾಲು ಶ್ರೇಷ್ಠವಾಗಿರುವುದು. ಪಾನದಲ್ಲಿ, ನಸ್ಯದಲ್ಲಿ, ಅಭ್ಯಂಗದಲ್ಲಿ, ಅನುವಾಸನದಲ್ಲಿ, ಯೋಗ್ಯವಾದ ಕಾಲಗಳಲ್ಲಿ ಪ್ರಯೋಗಿಸಿದರೆ ಪ್ರಬಲವಾದ ದುಷ್ಟ ವಾತರೋಗಗಳನ್ನು ಹೋಗಲಾಡಿಸುವುದಲ್ಲದೆ, ಪುತ್ರೋತ್ಪತ್ತಿ ಇಲ್ಲವೆಂದು ಹಂಬಲಿಸುವ ಬಂಜೆ ಸ್ತ್ರೀಯರು ಇದರ ಸೇವನೆಯಿಂದ ಪುತ್ರವತಿಯರಾಗುವರು. ಮತ್ತು ಪಕ್ವಾಶಯಗಳು ಕಫೋದ್ರೇಕದ ಸ್ಥಿತಿಯಲ್ಲಿದ್ದರೆ, ಅಥವಾ ಪಿತ್ತವು ದ್ರವವಾಗಿದ್ದು ಕಷ್ಟ ಪಡಿಸುವುದಾದರೆ, ಈ ಮಹಾಬಲಾ ತೈಲವು, ಸ್ನೇಹ ಸ್ವೇದ ವಿಧಿಗಳಿಂದ ತುಂಬಾ ಪ್ರಯೋಜನವನ್ನು ನಿಸ್ಸಂಶಯವಾಗಿ ಉಂಟುಮಾಡುವುದು.

॥ प्रसारिणी तैलम् ॥

प्रसारिणीतुलाक्वाथे तैलप्रस्थं पयस्समम् ।
द्विमेदामिसिमंजिष्टाकुष्ठरास्नाकुचंदनैः ॥ १६२ ॥
जीवकर्षभकाकोलीयुगळामरदारुभिः ।
कल्कैर्विपाचयेत्सर्वमारुतामयनाशनम् ॥ १६३ ॥

## ಪ್ರಸಾರಿಣೀ ತೈಲ

ಪ್ರಸಾರಿಣೀ 100 ಪಲ, ತೈಲ ಕುತ್ತಿ 1, ಹಾಲು ಕುತ್ತಿ 1, ಮೇದಾ, ಮಹಾಮೇದಾ, ಸತಾಪೆ, ಮಂಜಿಷ್ಟಕಡ್ಡಿ, ಕಂಕುಷ್ಠ, ಕೇಪರತ್ತೆ, ರಕ್ತ ಚಂದನ, ಜೀವಕ, ಋಷಭಕ, ಕಾಕೋಳೀ, ಕ್ಷೀರಕಾಕೋಳೀ, ದೇವ ದಾರು ಈ ಎಲ್ಲ ಔಷಧಿಗಳನ್ನು ಕಲ್ಕ ಸೇರಿಸಿ ಪಾಕಮಾಡಿ ಇಳಿಸಿ, ಗಾಳಿಸಿ ತಯಾರಿಸಿದ ತೈಲವು ಸಕಲ ವಿಧದ ವಾತರೋಗಗಳಿಗೂ ಹಿತಕಾರಿಯಾಗಿ ಪರಿಣಮಿಸುವುದು.



ಇತಿ ಸಹಸ್ರಯೋಗದರ್ಪಣದೋಳ್
ತೈಲಯೋಗ ಪ್ರಕರಣವು
ಸಂಪೂರ್ಣವು.



# ॥ अथ चूर्णप्रकरणम् ॥

# ಅಥ ಚೂರ್ಣ ಪ್ರಕರಣಮ್

---

### ॥ सुदर्शन चूर्णम् ॥

त्रिफला रजनीयुग्मं कंटकारीयुगं शठी ।
त्रिकटु ग्रंथिकं मूर्वा गुडूची धन्वयासकः ॥ १ ॥

कटुका पर्पटो मुस्तं त्रायमाणा च वालकम् ।
निंबः पुष्करमूलं च मधुयष्टी च वत्सकम् ॥ २ ॥

यवानींद्रयवो भार्ङ्गी शिग्रुबीजं सुराष्ट्रजा ।
वचा त्वक् पद्मकोशीरं चंदनातिविषाबला ॥ ३ ॥

शालिपर्णी पृष्ठपर्णी विडङ्गं तगरं तथा ।
चित्रको देवकाष्ठं च चव्यं पत्रं पटोलजम् ॥ ४ ॥

जीवकर्षभकौ चैव लवङ्गं वंशलोचना ।
पुंडरीकं च काकोली पत्रकं जातिपत्रकम् ॥ ५ ॥

तालीसपत्रं च तथा समभागानि चूर्णयेत् ।
सर्वचूर्णस्य चार्धांशं कैरातं निक्षिपेत् सुधीः ॥ ६ ॥

एतत्सुदर्शन नाम चूर्णं दोषत्रयापहम् ।
ज्वरांश्च निखिलान् हन्यान्नात्र कार्या विचारणा ॥ ७ ॥

पृथग्द्वंद्वागंतुजांश्च धातुस्थान्विषमज्वरान् ।
सन्निपातोद्भवांश्चापि मानसानपि नाशयेत् ॥ ८ ॥

शीतज्वरैकाहिकादीन्मोहं तंद्रां भ्रमं तृषाम् ।
श्वासं कासं च पांडुं च हृद्रोगं हंति कामलाम् ॥ ९ ॥

त्रिकपृष्ठकटीजानुपार्श्वशूलनिवारणम् ।
शीतांबुना पिबेद्धीमान् सर्वज्वरनिवृत्तये ॥ १० ॥

सुदर्शनं यथाचक्रं दानवानां विनाशनम् ।
तद्वज्ज्वराणां सर्वेषामिदं चूर्णं प्रणाशनम् ॥ ११ ॥

### ಸುದರ್ಶನ ಚೂರ್ಣ

ತ್ರಿಫಲೆಗಳು, ಅರಸಿನ. ಕಂಟಕಾರಿ ಬೇರು, ಕಲ್ಯಟಿ ಬೇರು, ಕಚ್ಚೂರ, ಕರಿಮೆಣಸು, ಹಿಪ್ಪಲಿ, ಒಣಶುಂಠಿ, ಹಿಪ್ಪಲಿಮೂಲ, ಪೆರಿ ಕುರುಂಬ, ಅಮೃತಬಳ್ಳಿಸತ್ವ, ಆಕಿರೆಬೇರು, ಕಟುಕರೋಹಿಣಿ, ಪರ್ಪಟಕ ಹುಲ್ಲು, ಭದ್ರಮುಷ್ಟಿ, ಬ್ರಾಹ್ಮಿ, ಇರಿವೇರಿದಂಡು, ಕಹಿಬೇವಿನ ಚೆಕ್ಕೆ, ಪುಷ್ಕರಮೂಲ, ಜ್ಯೇಷ್ಠಮಧು, ಕೊಡಗಪಾಲರಿ, ಜೀರಿಗೆ, ಇಂದ್ರಯುವ, ಕಿರುತೇಗು, ನುಗ್ಗೆಬೀಜ, ಸುರಾಷ್ಟ್ರಲವಣ, (ಕುವರಿಮಣ್ಣು) ಬಜೆ, ಲವಂಗ ಚೆಕ್ಕೆ, ಪದ್ಮಕಾಷ್ಠ, ಲಾಮಂಚ, ಚಂದನ, ಅತಿವಿಷಯ, ಕಡಿರಬೇರು, ಕಾಡುದ್ದು, ಕಾಡುಹೆಸರು, ವಾಯುವಿಳಂಗ, ತಗರ, ಚಿತ್ರಮೂಲ (ಶುದ್ಧಿ), ದೇವದಾರು, ಕಾಡುಕರಿಮೆಣಸಿನ ಬೇರು, ಕಾಡುಪಟೋಲದ ಎಲೆ, ಜೀವಕ, ಋಷಭಕ, ಲವಂಗ. ವಂಶಲೋಚನ, ಪುಂಡರೀಕ, ಕಾಕೋಲೀ, ತಮಾಲಪತ್ರೆ, ಜಾತಿಪತ್ರೆ, ತಾಲೀಸಪತ್ರೆ ಇವುಗಳು ಪ್ರತಿಯೊಂದು ಬಗೆಯೂ ತೊಲೆ ಒಂದೊಂದರಂತೆ ಈ ಎಲ್ಲಾ ಮದ್ದುಗಳ ಎರಡು ಪಾಲು ಕಿರಾತಕಡ್ಡಿ ಇಷ್ಟನ್ನು ವಸ್ತ್ರಗಾಳಿತ ಚೂರ್ಣಮಾಡಿ,— ವಾತ ಜ್ವರ, ಪಿತ್ತಜ್ವರ, ಕಫಜ್ವರ, ವಾತಪಿತ್ತಜ್ವರ, ವಾತಕಫಜ್ವರ, ಪಿತ್ತಕಫ ಜ್ವರ, ಆಗಂತುಜ್ವರ, ಧಾತುಗತಜ್ವರ, ವಿಷಮಜ್ವರ, ಸನ್ನಿಪಾತಜ್ವರ, ದಿನಬಿಟ್ಟು ಬರುವ ಏಕಾಹಿಕಾದಿಜ್ವರಗಳು, ಮೋಹತಂದ್ರಾ, ಭ್ರಮ, ಶ್ವಾಸ, ಕಾಸ, ಪಾಂಡು, ಹೃದ್ರೋಗ, ಕಾಮಲಾ, ತ್ರಿಕ, ಪೃಷ್ಠ, ಪಾರ್ಶ್ವಾದಿ ನೋವು ಇವೇ ಮೊದಲಾದ ರೋಗಗಳಲ್ಲಿ ಅತೀವ ಫಲ ಕಾರಿಯು. ಕುದಿಸಿ ಆರಿಸಿದ ಜಲದ ಅನುಪಾನದಿಂದ ಸೇವಿಸಲು

ಸಕಲ ವಿಧದ ಜ್ವರಗಳು ಉಪಶಮನ ಹೊಂದುವವು. ಸುದರ್ಶನ ಚಕ್ರವು ದಾನವರನ್ನು ವಿನಾಶಗೊಳಿಸುವಂತೆ ಈ ಪ್ರಶಸ್ತತಮವಾದ ಚೂರ್ಣವು ಅತ್ಯಂತ ಫಲದಾಯಕವು.

## ಸಕಲ ಜ್ವರಗಳಲ್ಲಿ ತಲೆಗಿಡುವ ಕಚ್ಚೂರಾದಿ ಚೂರ್ಣ

ಕಚ್ಚೂರಗಡ್ಡೆ, ಬಿಳಿಕಂಕುಷ್ಠ, ಜ್ಯೇಷ್ಠಮಧು, ಇರಿವೇರಿದಂಡು, ಭದ್ರಮುಷ್ಟಿ, ಕಡಿರಬೇರಿನ ಸಿಪ್ಪೆ, ನೆಲ್ಲಿಕಾಯಿಯ ಸಿಪ್ಪೆ, ಕುಂಕುಮ ಕೇಸರಿ, ಸಹಸ್ರವೇಧಿ, ಚಂದನ, ರಕ್ತಚಂದನ, ಲಾಮಂಚ, ಹುಣಸೆ ಎಲೆಯ ದಂಡು, ಮಂಜಿಷ್ಠ ಕಡ್ಡಿ, ದೇವದಾರು, ಹೊದಳು, ಕಲ್ಮದ, ಕಂಡಿ ಬೆಣ್ಣೆ, ಕಟುಕರೋಹಿಣಿ, ಪಚ್ಚೆಕರ್ಪೂರ ಈ ಬಗೆಯ ಮದ್ದುಗಳನ್ನು ಸಮತೂಕ ತೆಗೆದು ವಸ್ತ್ರಗಾಳಿತ ಚೂರ್ಣಿಸಿ, ನಾರೀಸ್ತನ್ಯದಿಂದ(ಮೊಲೆ ಹಾಲು) ಅರೆದು ಉತ್ತಮಾಂಗಕ್ಕೆ ಹಚ್ಚುವುದರಿಂದ ಕಠಿಣವಾದ ಜ್ವರ, ನೇತ್ರರೋಗ, ತಲೆನೋವು, ಬುದ್ಧಿಭ್ರಮೆ ಇವುಗಳು ಶಮನ ಹೊಂದುವುವು.

## ಸನ್ನಿಪಾತಜ್ವರಗಳಲ್ಲಿ ತಲೆಗಿಡುವ ರಾಸ್ನಾದಿ ಚೂರ್ಣ

ಕೆಂಪರತ್ತೆ, ಅಶ್ವಗಂಧಿ, ದೇವದಾರು, ಕಟುಕರೋಹಿಣಿ, ರಕ್ತ ಬೋಳ, ಚಂಚಲ್ಯ, ಬಿಳಿಕಂಕುಷ್ಠ, ಬಜೆ, ಕಾವಿಕಲ್ಲು, ಅರಸಿನ, ಜ್ಯೇಷ್ಠ ಮಧು, ಕಡಿರಬೇರಿನಸಿಪ್ಪೆ, ಭದ್ರಮುಷ್ಠಿ, ಒಣಶುಂಠಿ, ಕರಿಮೆಣಸು, ಹಿಪ್ಪಲಿ, ವಿಟ್ಖದಿರ(ಅರಿಮೇದ), ಸಹಸ್ರವೇಧಿ, ಇರಿವೇರಿದಂಡು, ಲಾಮಂಚ, ಅಫೀಮು, ಚಂದನ, ಹುಣಸೆಎಲೆಯ ದಂಡು ಈ ಎಲ್ಲಾ ಔಷಧಿಗಳನ್ನು ಸಮಭಾಗ ತೆಗೆದು ಚೂರ್ಣಿಸಿ, ನಾರೀಸ್ತನ್ಯದಿಂದ ಮರ್ದಿಸಿ, ಸ್ವಲ್ಪ ಸಣ್ಣ ಹರಳೆಣ್ಣೆಯನ್ನೂ ಕೂಡಿಸಿ, ಉತ್ತಮಾಂಗದಲ್ಲಿ ಇಡುವುದರಿಂದ ಸಕಲ ವಿಧದ ಸನ್ನಿಪಾತಗಳೂ ತಲೆವೇದನೆಯೂ ಪ್ರಶಮನವಾಗುವುವು.

## ಸನ್ನಿಪಾತ ಜ್ವರಗಳಲ್ಲಿ ಶಿರಸ್ಸಿಗೆ ಹಚ್ಚುವ ಮತ್ತೊಂದು ಬಗೆಯ ಕಚ್ಚೂರಾದಿ ಚೂರ್ಣ

ಕಚ್ಚೂರಗಡ್ಡೆ, ನೆಲ್ಲಿಕಾಯಿಸಿಪ್ಪೆ, ಮಂಜಿಷ್ಠಕಡ್ಡಿ, ಜೇಷ್ಠಮಧು, ಚಂದನ, ರಕ್ತಚಂದನ, ಕಲ್ನಾರು, ಕಲ್ಮದ, ಸಹಸ್ರವೇಧಿ, ಕಟುಕ

ರೋಹಿಣಿ, ಕರಿಜೀರಿಗೆ, ರಾಸ್ನೆ, ಹುಣಸೆಎಲೆಯ ನಾರು, ನಾಮದ ಬೇರಿನ ಸಿಪ್ಪೆ, ಕುಂಕುಮಕೇಸರಿ, ಜಂಚಲ್ಯ, ಭದ್ರಮುಷ್ಟಿ, ಕಂಡಿಬೆಣ್ಣೆ, ಕಡಿರ ಬೇರಿನ ಮೇಲಿನ ಸಿಪ್ಪೆ, ಹೊದಳು, ಕುಂದ್ಲಿಕ, ಇರಿವೇರಿಡಂಡು, ಕಂಕುಷ್ಠ, ರಕ್ತಬೋಳ, ಅಫೀಮು, ಕಾವಿಕಲ್ಲು, ಜಾಯಿಕಾಯಿ ಇವುಗಳನ್ನೆಲ್ಲಾ ಸಮಭಾಗ ತೆಗೆದು ಚೂರ್ಣಮಾಡಿ, ನಾರೀಸ್ತನ್ಯದಿಂದ ಅರೆದು ತಲೆಗೆ ಲೇಪಿಸುವುದರಿಂದ, ವಾತಪಿತ್ತದೋಷಗಳಿಂದುಂಟಾದ ತಲೆನೋವು, ಜ್ವರ, ಬುದ್ಧಿಭ್ರಮೆ, ಹಿಧ್ಮಾ, ನೇತ್ರರೋಗ, ಪೀನಸ, ಕಫರೋಗ, ಕರ್ಣರೋಗ, ಸನ್ನಿಪಾತ ಈ ಎಲ್ಲಾ ರೋಗಗಳನು ನಿವಾರಿಸಿ ಸುಖಶಾಂತಿ ಯನ್ನೀಯುವುದು.

॥ अतिसारे लघुगंगाधर चूर्णम् ॥

मुस्तसिंद्रयवं बिल्वं लोध्रं मोचरसं तथा ।
धातकीं चूर्णयेत्तक्रगुडाभ्यां पाययेत्सुधीः ॥ १२ ॥
सर्वातीसार शमनं निरुणाद्धि प्रवाहिकाम् ।
लघुगंगाधरं नाम चूर्णं संग्राहकं परम् ॥ १३ ॥

**ಅತಿಸಾರದಲ್ಲಿ ಲಘುಗಂಗಾಧರ ಚೂರ್ಣ.**

ಭದ್ರಮುಷ್ಟಿ, ಕೊಡಗಪಾಲರಿ, ಬಿಲ್ವಪತ್ರೆ, ಪಾಚೋಟಕೆತ್ತೆ, ಆಲದ ಮಯಣ, ಧಾತಕೀಕುಸುಮ ಇವುಗಳನ್ನು ಸಮಭಾಗ ಸೇರಿಸಿ, ಪುರಾತನ ಬೆಲ್ಲ ಕೂಡಿಸಿ ಮಜ್ಜಿಗೆಯ ಅನುಪಾನದಿಂದ ಸೇವಿಸಲು, ಈ ಲಘು ಗಂಗಾಧರ ಚೂರ್ಣವು ಪ್ರವಾಹಿಕಾರೋಗವನ್ನು ನಿವಾರಿಸುವುದು.

॥ अतिसारे वृद्ध गंगाधर चूर्णम् ॥

मुस्तारलुकशुंठीभिर्धातकीलोध्रवालकैः ।
बिल्वमोचरसाभ्यां च पाठेंद्रयववत्सकैः ॥ १४ ॥
आम्रबीजं प्रतिविषा लज्जालुरिति चूर्णितम् ।
क्षौद्रतंडुलपानीयैः पीतैर्याति प्रवाहिका ॥ १५ ॥

सर्वातीसारग्रहणीप्रशमं याति वेगतः ।
वृद्धगङ्गाधरं चूर्णं सरिद्वेगविबंधकम् ॥ १६ ॥

## ಅತಿಸಾರದಲ್ಲಿ ವೃದ್ಧಗಂಗಾಧರ ಚೂರ್ಣ

ಭದ್ರಮುಷ್ಟಿ, ಆನೆಮುಂಗೆ ಬೇರು, ಒಣಶುಂಠಿ, ಧಾತಕೀಕುಸುಮ, ಪಾಚೋಟ ಕೆತ್ತೆ, ಇರಿವೇರಿದಂಡು, ಬಿಲ್ವಪತ್ರೆ, ಆಲದ ಮಯಣ, ಪಾಡಾವಳಿ ಬೇರು, ಇಂದ್ರಯವ, ಕೊಡಗಪಾಲರಿ, ಮಾವಿನಕಾಯಿಯ ಒಳಗಿನ ತಿರುಳು (ಅಂಡಿ) ಅತಿವಿಡಯ, ಲಜ್ಜಾಲು (ನಾಚಿಕೆಮುಳ್ಳು) ಇವುಗಳನ್ನು ಚೂರ್ಣಿಸಿ, ಅಕ್ಕಿತೊಳೆದ ನೀರಿನ ಅನುಪಾನದಿಂದ ಸೇವಿಸಲು, ಅತಿಸಾರ, ಪ್ರವಾಹಿಕಾ, ಗ್ರಹಣೀರೋಗಗಳು ನಿವಾರಣೆಯಾಗುವುವು. ಈ ಚೂರ್ಣವು ನದಿಯ ವೇಗದಂತಿರುವ ಅತಿಸಾರಾದಿಗಳ ವೇಗವನ್ನು ನಿಲ್ಲಿಸುವ ವೃದ್ಧಗಂಗಾಧರ ಚೂರ್ಣವಾಗಿರುವುದು.

॥ रक्तपित्ते चंदनादि चूर्णम् ॥

चंदनं नलदं रोध्रमुशीरं पद्मकेसरम् ।
नागपुष्पं तथबिल्वं भद्रमुस्तं सशर्करम् ॥ १७ ॥
ह्रीबेरं चैव पाठा च कुटजस्य फलं त्वचम् ।
शृङ्गबेरं विषा चैव धातकी च रसाञ्जनम् ॥ १८ ॥
आम्रास्थि जंबुसारं च तथा मोचरसः स्मृतः ।
निलोत्पलं समंगा च सूक्ष्मैला दाडिमत्वचः ॥ १९ ॥
चतुर्विंशतिमेतानि समभागानि कारयेत् ।
तंडुलोदक संयुक्तं क्षौद्रेण सह योजयेत् ॥ २० ॥
चलतां चासगर्भाणां स्तंभनं परमुच्यते ।
अश्विभ्यां विहितं पूर्वं रक्तपित्तविनाशनम् ॥ २१ ॥
हितं लोहितपित्तिभ्यो ह्यर्शस्सु लोहितेषु च ।
तमो मूर्च्छोपसृष्टानां तृषार्तानां च दापयेत् ॥ २२ ॥

## ರಕ್ತಪಿತ್ತದಲ್ಲಿ ಚಂದನಾದಿ ಚೂರ್ಣವು

ಚಂದನ, ಲಾಮಂಚ, ಲೋಧ್ರಚಕ್ಕೆ, ಇರಿವೇರಿದಂಡು, ಪದ್ಮಕೇಸರ, ನಾಗಕುಸುಮ, ಬಿಲ್ವಪತ್ರೆ, ಭದ್ರಮುಷ್ಠಿ, ಪಾಡಾವಳಿಬೇರು, ಕೊಡಗ ಪಾಲರಿ, ಸಣ್ಣಕೊಡಸಿಗನಕೆತ್ತೆ, ಶುಂಠಿ, ವಿಡಯ, ಧಾತಕೀಕುಸುಮ, ರಸಾಂಜನ, ಮಾವಿನಕಾಯಿಯ ಒಳಗಿನ ತಿರುಳು, ನೇರಳೆಕೆತ್ತೆ, ಆಲದ ಮುಯಣ, ನೆಲಸಂಪಿಗೆಗಡ್ಡೆ, ಪರಚ್ಚುಂಡಬೇರು, ಸಣ್ಣ ಏಲಕ್ಕಿ, ದಾಳಿಂಬ ಸಿಪ್ಪೆ, ಹಿಂದೆ ಹೇಳಿದ 24 ಬಗೆಯ ಮದ್ದುಗಳನ್ನು ಸಮತೂಕ ಸೇರಿಸಿ ಚೂರ್ಣಮಾಡಿ, ಅಕ್ಕಿತೊಳೆದ ನೀರಿನಲ್ಲಿ ಮತ್ತು ಜೇನುತುಪ್ಪದೊಂದಿಗೆ ಕೂಡಿಸಿ, ಸೇವಿಸಲು ಚಲಿಸುತ್ತಿರುವ ಆಮಗರ್ಭವನ್ನು ಸ್ತಂಭನ ಮಾಡು ವುದರಲ್ಲಿಯೂ ರಕ್ತಪಿತ್ತದಲ್ಲಿ, ರಕ್ತಾರ್ಶಸ್ಸಿನಲ್ಲಿ, ಮೂರ್ಛಾರೋಗದಲ್ಲಿ, ಬಾಯಾರಿಕೆಯಿಂದ ಬಳಲುವ ರೋಗಗಳಲ್ಲಿ, ಈ ಚೂರ್ಣವು ದಿವ್ಯಾಷಧವು.

॥ राजयक्ष्मणि चूर्णामृतयोगम् ॥

तालीसपत्रं मरिचं पृथगर्धपलं भवेत् ।
द्राक्षायाश्च पलं तद्वत् परूषकतकाह्वयात् ॥ २३ ॥
बलामूलं च पलिकं पिप्पल्याश्च पलं भवेत् ।
शुंठीपलत्रयं चैवं चव्यकांश्च त्रिजातकम् ॥ २४ ॥
कणामूलं तथैवास्य शर्करायाश्चतुष्पलम् ।
भार्गीपलद्वयं चैतत् सूक्ष्मचूर्णानि कारयेत् ॥ २५ ॥
मधुनावलिहेत् प्रातः शोषमेकादशान्विते ।
हरेच्चूर्णामृतमिदं सर्वव्याधिविनाशनम् ॥ २६ ॥

## ರಾಜಯಕ್ಷ್ಮಾ ರೋಗದಲ್ಲಿ ಚೂರ್ಣಾಮೃತಯೋಗವು

ತಾಲೀಸಪತ್ರ, ಕರಿಮೆಣಸು ಇವು ಪಲ ಅರ್ಧರ್ಧ, ದ್ರಾಕ್ಷೆ ಪಲ ¼ ಪರೂಷಕ, ತೇಟಾಂಪರಳು, ಕಡಿರಬೇರು, ಹಿಪ್ಪಲಿ ಇವುಗಳು ಪಲ

ಒಂದೊಂದು. ಒಣಶುಂಠಿ, ಆಣಿಲೆಕಾಯಿಸಿಪ್ಪೆ, ಶಾಂತಿಕಾಯಿಸಿಪ್ಪೆ, ನೆಲ್ಲಿ ಕಾಯಿಸಿಪ್ಪೆ, ಕಾಡುಕರಿಮೆಣಸಿನ ಬೇರು, ಎಲಕ್ಕಿ, ಲವಂಗಚೆಕ್ಕೆ, ತಮಾಲ ಪತ್ರೆ, ಹಿಪ್ಪಲಿಮೂಲ, ಇವು ತೊಲೆ 1ರಂತೆ, ಕಿರುತೇಗುಬೇರು ಪಲ 2, ಈ ಬಗೆಯ ಮದ್ದುಗಳನ್ನು ಚೆನ್ನಾಗಿ ಒಣಗಿಸಿ, 4 ಪಲ ಸಕ್ಕರೆಯನ್ನು ಸೇರಿಸಿ, ತೊಲೆ 1ರಂತೆ ಜೇನುತುಪ್ಪದಿಂದ ಸೇವಿಸಲು ಕ್ಷಯರೋಗ ದಿಂದ ಕೂಡಿದ 11 ವಿಧದ ಉಪದ್ರವಗಳನ್ನೂ ಸರ್ವವಿಧದ ವಿಪತ್ತು ಗಳನ್ನೂ ಹೋಗಲಾಡಿಸುವುದು.

## ದೊಡ್ಡ ಕರ್ಪೂರಾದಿ ಚೂರ್ಣ

ಶುದ್ಧಪಚ್ಚೆಕರ್ಪೂರ, ಜಾಪತ್ರೆ, ಬಾಲಮೆಣಸು, ಕಸ್ತೂರಿ, ಚಂದನ, ಮಾಯಿಕಾಯಿ, ಇರಿವೇರಿದಂಡು, ವತ್ಸನಾಭಿ (ಶುದ್ಧಿ), ಹೊದಳು, ಜಾಯಿ ಕಾಯಿ, ಅಂಜನಕಲ್ಲು, ಪಾಡಾವಳಿಬೇರು, ಜೀರಿಗೆ, ಕರಿಜೀರಿಗೆ, ಒಣ ಶುಂಠಿ, ಕರಿಮೆಣಸು, ಹಿಪ್ಪಲಿ, ಅಫೀಮು, ರಾಸ್ನೆ, ಕಂಕುಷ್ಠ, ಪಾಚೋಟಿ ಕೆತ್ತೆ, ತ್ರಿಗಡೆ, ನಾಗಕೇಸರ, ದೊಡ್ಡಭದ್ರಮುಷ್ಠಿ, ಭದ್ರಮುಷ್ಠಿ, ಲಾಮಂಚ, ಆಶಾಳೀ, ಬಜೆ, ದೇವದಾರು, ಜ್ಯೇಷ್ಠಮಧು, ಕಿರಾತಕಡ್ಡಿ, ಕಚ್ಚೂರಗಡ್ಡೆ, ಪುತ್ತರಿಚ್ಚುಂಡಬೇರಿನ ಸಿಪ್ಪೆ, ತಮಾಲಪತ್ರೆ, ಬ್ರಾಹ್ಮಿ, ಪಾಷಾಣಭೇದಿ, ಅಗಿಲುಗಂಧ, ರಕ್ತಚಂದನ, ಏಲಕ್ಕಿ, ಲವಂಗ, ಲವಂಗಚೆಕ್ಕೆ ಸೈಂಧವ ಲವಣ, ಸತಾಪೆ, ಮೆಂತೆಕಾಳು, ತಕ್ಕೋಲ, ರುದ್ರಾಕ್ಷ, ಅತ್ತಿಹಿಪ್ಪಲಿ, ಈ ಬಗೆಯ ಔಷಧಿಗಳನ್ನು ಸಮತೂಕ ತೆಗೆದು, ಚೆನ್ನಾಗಿ ಚೂರ್ಣಮಾಡಿ ಚೂರ್ಣದ ಸಮಭಾಗ ಕಲ್ಲುಸಕ್ಕರೆ ಸಹ ಕೂಡಿಸಿ, 3 ಪಾವಲಿತೂಕದಂತೆ ಜೇನುತುಪ್ಪದೊಂದಿಗೆ ಸೇರಿಸಿ ಸೇವಿಸುವದರಿಂದ ವಾಯುಕ್ಷೋಭ, ಛರ್ದಿ, ಹಿಕ್ಕಾ, ಕಾಸ, ಎದೆಯಲ್ಲಿರುವ ನೋವು, ಪಿತ್ತ, ಗುಲ್ಮ, ಕಫಶೂಲ, ಪಾಂಡು ಮೊದಲಾದ ರೋಗಗಳನ್ನು ಹೋಗಲಾಡಿಸುವ ಈ ಕರ್ಪೂರಾದಿ ಚೂರ್ಣವು ಶ್ರೇಷ್ಠಗುಣಕಾರಿಯಾಗಿರುವುದು.

## ॥ सितोपलादि चूर्णम् ॥

सितोपला षोडश स्याद्दष्टौ स्याद्वंशरोचना ।
पिप्पली स्याच्चतुष्कर्षा स्यादेला च द्विकार्षकी ॥ २७ ॥

एकः कर्षस्त्वचः कार्यश्चूर्णयेत्सर्वमेकतः ।
सितोपलादिकं चूर्णं मधुसर्पिर्युतं लिहेत् ॥ २८ ॥

श्वासकासक्षयहरं हस्तपादांगदाहजित् ।
मंदाग्निं सुप्तजिह्वत्वं पार्श्वशूलमरोचकम् ॥ २९ ॥

ज्वरमूर्ध्वगतं रक्तपित्तमाशु व्यपोहति ।

## ಸಿತೋಪಲಾದಿ ಚೂರ್ಣ

ಕಲ್ಲು ಸಕ್ಕರೆ 16 ಭಾಗ, ವಂಶಲೋಚನಾ 8 ಭಾಗ, ಹಿಪ್ಪಲಿ 4 ಭಾಗ, ಏಲಕ್ಕಿ 2 ಭಾಗ, ಲವಂಗಚೆಕ್ಕೆ 1 ಭಾಗ ಕೂಡಿಸಿ ಚೆನ್ನಾಗಿ ಚೂರ್ಣಿಸಿ, ರೋಗಾನುಸಾರ ಅನುಪಾನವಿಶೇಷದಿಂದ ಸೇವಿಸಲು ಶ್ವಾಸ, ಕಾಸ, ಕ್ಷಯ, ಹಸ್ತ-ಪಾದ-ಅಂಗದಾಹ, ಮಂದಾಗ್ನಿ, ಪಾರ್ಶ್ವನೋವು, ಅರುಚಿ, ಜ್ವರ, ಊರ್ಧ್ವಗತರಕ್ತಪಿತ್ತ, ಈ ರೋಗಗಳು ಕೂಡಲೇ ಉಪಶಮನ ಹೊಂದುವುವು.

### ॥ पांडुरोगे खंडसमक चूर्णम् ॥

त्रिफलाव्योषबिल्वाब्दपिप्पलीमूलचित्रकैः ।
त्वगेलापत्रचविकातिंतिडीकाम्लवेतसैः ॥ ३० ॥

समांशैर्धातुमाक्षीकं सर्वैस्तुल्यं प्रदापयेत् ।
लोहचूर्णं समं तैश्च सर्वैः खंडं समांशकम् ॥ ३१ ॥

चूर्णितं मधुना लेह्यं वटकान् वा समाक्षिकान् ।
भक्षयित्वा यथासात्म्यमनुपानं प्रयोजयेत् ॥ ३२ ॥

नाशयेत्कुष्ठमालस्यं प्रमेहोदरकामलाः ।
पांडुरोगं तथा कासं हलीमकशिरोरुजम् ॥ ३३ ॥

प्रसेकमरुचिं मूर्च्छां हृल्लासं मंदवह्निता ।
रक्तपित्तं परीसर्पं श्वयथुं च नियच्छति ॥ ३४ ॥

## ಪಾಂಡುರೋಗದಲ್ಲಿ ಖಂಡಸವುಕಚೂರ್ಣ

ತ್ರಿಫಲೆಗಳು, ಕರಿಮೆಣಸು, ಹಿಪ್ಪಲಿ, ಶುಂಠಿ, ಬಿಲ್ವಪತ್ರೆಬೇರು, ಭದ್ರಮುಷ್ಠಿ, ಹಿಪ್ಪಲಿಮೂಲ, ಚಿತ್ರಮೂಲ(ಶುದ್ಧಿ), ಲವಂಗಚೆಕ್ಕೆ, ಏಲಕ್ಕಿ, ತಮಾಲಪತ್ರೆ, ಕಾಡುಕರಿಮೆಣಸಿನಬೇರು, ಹುಣಸೆಕೆತ್ತೆ, ಅಮ್ಲವೇತಸ (ಪುನರ್ಪುಳಿ), ಈ ಎಲ್ಲಾ ಬಗೆಯ ಮದ್ದುಗಳ ಸಮಭಾಗ, ಶುದ್ಧಧಾತು ಮಾಕ್ಷಿಕ, ಸಮಭಾಗ ಶುದ್ಧ ಲೋಹಚೂರ್ಣ, ಈ ಮೊದಲು ಹೇಳಿದ ಎಲ್ಲಾ ಮದ್ದುಗಳ ಸಮತೂಕ ಕಲ್ಲುಸಕ್ಕರೆಯನ್ನು ಕೂಡಿಸಿ, ರೋಗಾನುಸಾರ ಅನುಪಾನವಿಶೇಷದಿಂದ ಸೇವಿಸಲು, ಕುಷ್ಠರೋಗ, ಆಲಸ್ಯ, ಪ್ರಮೇಹ, ಉದರ, ಕಾಮಿಲಾ, ಪಾಂಡುರೋಗ, ಕಾಸ, ಹಲೀಮಕ, ಶಿರೋವೇದನೆ, ಪ್ರಸೇಕ, ಅರುಚಿ, ಮೂರ್ಛಾ, ವಹ್ನಿಮಾಂದ್ಯ, ರಕ್ತಪಿತ್ತ, ಪರೀಸರ್ಪ, ಶ್ವಯಥು ಈ ಮೊದಲಾದ ರೋಗಗಳನ್ನು ನಿವಾರಿಸುತ್ತದೆ.

॥ शोफरोगे पाटादि चूर्णम् ॥

पाठा सकृष्णा गजपिप्पली च निदग्धिकादिगरचित्रकौ च ।
सपिप्पलीमूलमजाजिरात्रिसुस्तं च चूर्णं सुखतोयपीतम् ॥
हन्यात्त्रिदोषं चिरजं च शोफं कुष्टं च चूर्णस्य हि सुप्रयोगात् ॥ ३५ ॥

## ಶೋಫರೋಗದಲ್ಲಿ ಪಾಠಾದಿಚೂರ್ಣ

ಪಾಡಾವಳಿಬೇರು, ಹಿಪ್ಪಲಿ, ಗಜಹಿಪ್ಪಲಿ, ಕಿರುತೇಗು, ಒಣಶುಂಠಿ, ಚಿತ್ರಮೂಲ(ಶುದ್ಧಿ), ಹಿಪ್ಪಲಿಮೂಲ, ಜೀರಿಗೆ, ಅರಸಿನ, ಭದ್ರಮುಷ್ಠಿ, ಇವುಗಳನ್ನು ಬಿಸಿನೀರಿನಿಂದ ಯಾ ಬೇರೆ ಅನುಪಾನವಿಶೇಷದಿಂದ ಸೇವಿಸಲು, ತ್ರಿದೋಷಾತ್ಮಕವಾದ, ಬಹಳಕಾಲದಿಂದಿರುವ, ಶೋಫ, ಕುಷ್ಠ, ಇವುಗಳನ್ನೆಲ್ಲಾ ಹೋಗಲಾಡಿಸುವುದು.

॥ कुष्टरोगे पृथुनिंबपंचकं चूर्णम् ॥

काले त्वक् छदःसारबीजकुसुमैर्निम्बस्य तुल्यांशकैः ।
कृत्वा चूर्णमदः कटुत्रिकनिशाधान्यक्षपथ्यायुतैः ॥

पञ्चारिष्टमिदं पयोमधुघृतैरुष्णांबुना वा पुमान् ।
पीत्वा कासगरप्रमेहपिटिकाकुष्टादिभिर्मुच्यते ॥ ३६ ॥

## ಕುಷ್ಠರೋಗದಲ್ಲಿ ಪೃಥುನಿಂಬಪಂಚಕ ಚೂರ್ಣ

ಕಹಿಬೇವಿನ ಕೆತ್ತೆ, ಎಲೆ, ತಿರುಳು, ಬೀಜ, ಕುಸುಮ ಇವುಗಳನ್ನೆಲ್ಲಾ ಸಮಾಂಶ ಸೇರಿಸಿ, ಅದಕ್ಕೆ ಕರಿಮೆಣಸು, ಹಿಪ್ಪಲಿ, ಶುಂಠಿ, ಅರಸಿನ, ನೆಲ್ಲಿಕಾಯಿಸಿಪ್ಪೆ, ಶಾಂತಿಕಾಯಿಸಿಪ್ಪೆ, ಅಣಲೆಕಾಯಿಸಿಪ್ಪೆ, ಇವುಗಳ ಚೂರ್ಣವನ್ನು ಮುಂಚಿನ ಚೂರ್ಣದೊಡನೆ ಮಿಶ್ರಣಮಾಡಿ, ದನದ ಹಾಲು, ಜೇನುತುಪ್ಪ, ದನದ ತುಪ್ಪ, ಬಿಸಿನೀರು, ಇವುಗಳಲ್ಲಿ ಯಾವುದಾದರೊಂದರಿಂದ ಸೇವಿಸಲು, ಕೆಮ್ಮು, ವಿಷ, ಪ್ರಮೇಹ, ಪ್ರಮೇಹಪಿಟಿಕಾ ಕುಷ್ಠಾದಿಗಳು ನಿವಾರಣೆಯಾಗುವುವು.

### ॥ महाखांडव चूर्णम् ॥

मरिचं नागपुष्पाणि तालीसं लवणानि च ।
प्रत्येकमेकभागाः स्युः पिप्पलीमूलचित्रकैः ॥ ३७ ॥

त्वक्कणा तिंतिडीकं च जीरकं च द्विभागिकम् ।
धान्याम्लवेतसौ विश्वं भल्लैला बदराणि च ॥ ३८ ॥

अजमोदा जलधरः प्रत्येकं स्युस्त्रिभागिकाः ।
सर्वौषधिचतुर्थांशं दाडिमस्यफलं भवेत् ॥ ३९ ॥

द्रव्येभ्यो निखिलेभ्यश्च सिता देयार्धमात्रया ।
महाखांडवसंज्ञं स्याच्चूर्णमेतत्सुरोचनम् ॥ ४० ॥

अग्निदीप्तिकरं हृद्यं कासातीसारनाशनम् ।
हृद्रोगकंठजठरमुखरोगप्रणाशनम् ॥ ४१ ॥

विषूचिकां तथाध्मानमर्शो गुल्मकृमीनपि ।
छर्दिं पञ्चविधां श्वासं चूर्णमेतद्व्यपोहति ॥ ४२ ॥

## ಮಹಾಖಾಂಡವ ಚೂರ್ಣ

ಕರಿಮೆಣಸು, ನಾಗಕೇಸರ, ತಾಲೀಸಪತ್ರಿ, ಪಂಚಲವಣಗಳು, ಈ ಎಲ್ಲಾಮದ್ದುಗಳು ತೊಲೆ 1 ರಂತೆ, ಹಿಪ್ಪಲಿಮೂಲ, ಚಿತ್ರಮೂಲ(ಶುದ್ಧಿ), ಲವಂಗಚಕ್ಕೆ, ಹಿಪ್ಪಲಿ, ಹುಣಸೆಕೆತ್ತೆ, ಜೀರಿಗೆ, ಇವುಗಳೆಲ್ಲಾ ತೊಲೆ 2 ರಂತೆ, ಕೊತ್ತಂಬರಿ ಬೀಜ, ಅಮ್ಲವೇತಸ (ಪುನರ್ಪುಳಿ), ಒಣಶುಂಠಿ, ಏಲಕ್ಕಿ, ಬುಗರಿ ಬೀಜ, ಓಮುಕಾಳು, ಭದ್ರಮುಷ್ಠಿ, ಇವುಗಳು ತೊಲೆ 3 ರಂತೆ ಕೂಡಿಸಿ, ದಾಳಿಂಬಸಿಪ್ಪೆ ತೊಲೆ 10, ಸಕಲ ಔಷಧಿಗಳ ಅರ್ಧಭಾಗ ಸಕ್ಕರೆಯನ್ನು ಕೂಡಿಸಬೇಕು. ಈ "ಮಹಾಖಾಂಡವ ಚೂರ್ಣವು" ಅಗ್ನಿದೀಪನ, ಕಾಸ, ಅತಿಸಾರ, ಹೃದ್ರೋಗ, ಕಂಠರೋಗ, ಜಠರರೋಗ, ಮುಖರೋಗ, ವಿಸೂಚಿಕಾ, ಆಧ್ಮಾನ, ಅರ್ಶಸ್ಸು, ಗುಲ್ಮ, ಪಂಚವಿಧ ಛರ್ದಿರೋಗ, ಶ್ವಾಸರೋಗ, ಈ ತರದ ಸಕಲ ರೋಗಗಳನ್ನು ನಿಸ್ಸಂಶಯವಾಗಿ ಗುಣಮಾಡುವುದು.

॥ ग्रहणीरोगे लवङ्गादि चूर्णम् ॥

लवङ्गं शुद्धकर्पूरमेलात्वङ्नागकेसरम् ।
जातीफलमुशीरं च नागरं कृष्णजीरकम् ॥ ४३ ॥

कृष्णागुरुस्तुगाक्षीरी मांसी नीलोत्पलं कणा ।
चंदनं तगरं वालं कङ्कोलं चेति चूर्णयेत् ॥ ४४ ॥

समभागानि सर्वाणि सर्वेभ्योऽर्धा सिता भवेत् ।
लवङ्गाद्यमिदं चूर्णं राजार्हं वह्निदीपनम् ॥ ४५ ॥

रोचनं तर्पणं वृष्यं त्रिदोषघ्नं बलप्रदम् ।
हृद्रोगं कंठरोगं च कासं हिक्कां च पीनसम् ॥ ४६ ॥

यक्ष्माणं तमकं श्वासमतीसारमुरःक्षतम् ।
प्रमेहारुचिगुल्मादीन् ग्रहणीमपि नाशयेत् ॥ ४७ ॥

## ಗ್ರಹಣೀ ಮುಂತಾದ ರೋಗಗಳಲ್ಲಿ ಲವಂಗಾದಿ ಚೂರ್ಣ

ಲವಂಗ, ಶುದ್ಧ ಪಚ್ಚೆಕರ್ಪೂರ, ಏಲಕ್ಕಿ, ಲವಂಗಚಕ್ಕೆ, ನಾಗ ಕೇಸರ, ಜಾಯಿಕಾಯಿ, ಲಾಮಂಚ, ಒಣಶುಂಠಿ, ಕರಿಜೀರಿಗೆ, ಹಿಪ್ಪಲಿ, ಅಗಿಲುಗಂಧ, ವಂಶಲೋಚನ, ಜಟಾಮಾಂಸಿ, ನೆಲಸಂಪಿಗೆಗಡ್ಡೆ, ಸಣ್ಣ ಹಿಪ್ಪಲಿ, ಚಂದನ, ತಗರ, ಇರಿವೇರಿದಂಡು, ತಕ್ಕೋಲ, ಇವುಗಳನ್ನು ಸಮ ಭಾಗ ಕೂಡಿಸಿ, ಚೂರ್ಣದ ಅರ್ಧಾಂಶ ಸಕ್ಕರೆಯನ್ನು ಕೂಡಿಸಬೇಕು. ಈ ಲವಂಗಾದಿ ಚೂರ್ಣವನ್ನು ಜೇನುತುಪ್ಪದಿಂದ (ರೋಗಾನುಸಾರ ಅನು ಪಾನವಿಶೇಷದಿಂದ) ಸೇವಿಸಲು ಅಗ್ನಿದೀಪನ, ಅರುಚಿ, ಹೃದ್ರೋಗ, ಕಂಠ ರೋಗ, ಕಾಸ, ಹಿಕ್ಕಾ, ಪೀನಸ, ರಾಜಯಕ್ಷ್ಮ, ಶ್ವಾಸ, ಅತಿಸಾರ, ಉರ ಕ್ಷತ, ಪ್ರಮೇಹ, ಗುಲ್ಮ, ಗ್ರಹಣೀ ಮೊದಲಾದ ರೋಗಗಳನ್ನು ನಿವಾರಿಸಿ ಸುಖಾಭಿವೃದ್ಧಿಯನ್ನೀಯುವುದು.

॥ अष्टचूर्णम् ॥

त्रिकटुकमजमोदा सैंधवं जीरके द्वे ।
समधरणघृतानामष्टमो हिंगुभागः ॥
प्रथमकवलभोज्यः सर्पिषा चूर्णकोऽयं ।
जनयति भृशमग्निं वातगुल्मं निहंति ॥ ४८ ॥

## ಅಷ್ಟ ಚೂರ್ಣ

ಒಣಶುಂಠಿ, ಹಿಪ್ಪಲಿ, ಕರಿಮೆಣಸು, ಓಮುಕಾಳು, ಜೀರಿಗೆ, ಕರಿ ಜೀರಿಗೆ, ಇವುಗಳೆಲ್ಲವನ್ನೂ ಸಮಭಾಗ ಕೂಡಿಸಿ, ಇವುಗಳ 8ನೇ ಭಾಗ ಶುದ್ಧಮಾಡಿದ ಹಿಂಗನ್ನು ಕೂಡಿಸಿ, ಆ ಚೂರ್ಣವನ್ನು ಚೆನ್ನಾಗಿ ತುಪ್ಪ ದಿಂದ ಮಿಶ್ರಿಸಿ ಒಂದು ಗ್ರಾಸ ಅನ್ನವನ್ನು ಮೊದಲು ಭುಂಜಿಸಿ, ಆಮೇಲೆ ಈ ಚೂರ್ಣದ ಸೇವನೆಯಿಂದ ಜಠರಾಗ್ನಿಯು ಅಭಿವೃದ್ಧಿಯನ್ನೈದಿ, ವಾತ ಗುಲ್ಮವು ನಿವಾರಣೆಯಾಗುತ್ತದೆ.

ಸಮಾಸಃ—ಧರಣೀ ಧೃತಾಃ= ಧರಣಧೃತಾಃ, ಸಮಾಶ್ಚತೇ ಧರಣಧೃತಾಶ್ಚ= ಸಮಧರಣಧೃತಾಃ ॥ –ತೇಷಾಂ= ಸಮಧರಣಧೃತಾನಾಂ ॥

ಒಣಶುಂಠಿ ಕ್ವೆಂಜಿ 7, ಕರಿಮೆಣಸು ಕ್ವೆಂಜಿ 5, ಹಿಪ್ಪಲಿ ಕ್ವೆಂಜಿ 9, ಅಯಮೋದಕ ಕ್ವೆಂಜಿ 2, ಸ್ಯೆಂಧವಲವಣ ಕ್ವೆಂಜಿ 5, ಜೀರಿಗೆಕಾಳು ಕ್ವೆಂಜಿ 9, ಕರಿಜೀರಿಗೆ ಕ್ವೆಂಜಿ 6, ಇಂಗು(ಶುದ್ಧವಮಾಡಿದ) ಕ್ವೆಂಜಿ 8. (ಕೆಲವರ ಅಭಿಪ್ರಾಯ ಹೀಗೆಯೂ ಇರುವುದು.)

## ॥ ಕುಕ್ಕುಟ ಲವಣ ॥

ಕಾಡುಕರಿಮೆಣಸಿನ ಬೇರು, ಕಾಡುಹಿಪ್ಪಲಿ ಬೇರು, ಶುದ್ಧವಮಾಡಿದ ಚಿತ್ರಮೂಲದ ಬೇರು, ಒಣಶುಂಠಿ, ಹಿಪ್ಪಲಿ, ತ್ರಿಗಡೆ, ಇವುಗಳು ಪ್ರತಿಯೊಂದು 3 ಪಲಗಳಂತೆ ಕೂಡಿಸಿ ಚೆನ್ನಾಗಿ ಜಜ್ಜಿ 16 ಕುತ್ತಿ ನೀರಿನಲ್ಲಿ ಕುದಿಸಿ ಬತ್ತಿಸಿ ಕುತ್ತಿ 4ರಲ್ಲಿ ಪುಷ್ಟಿಯುಳ್ಳ ಗಂಡುಕೋಳಿಯ ಚರ್ಮ ಮೊದಲಾದ ತೆಗೆಯಬೇಕಾದ ಅಂಶಗಳನ್ನು ತ್ಯಜಿಸಿ ಶುದ್ಧ ಮಾಂಸ ಪಲ 16ನ್ನು ಮೊದಲಿನ ಕಷಾಯದಲ್ಲಿ ಹಾಕಿ 16ಪಲ ಸ್ಯೆಂಧವಲವಣ, ಅಷ್ಟೇ ತೆಂಗಿನಕಾಯಿಯ ಹಾಲನ್ನೂ, ಎಣ್ಣೆಯನ್ನೂ, ದನದ ತುಪ್ಪವನ್ನೂ ಹಾಕಿ ಕುದಿಸಿ ಪಾಕವಾಗುವ ಕಾಲದಲ್ಲಿ ಶುಂಠಿ, ಕರಿಮೆಣಸು, ಹಿಪ್ಪಲಿ, ಹಿಂಗು, ಜೀರಿಗೆ, ಏಲಕ್ಕಿ ಇವುಗಳು ಪ್ರತಿಯೊಂದು ಕ್ವೆಂಜಿ 3ರಂತೆ ವಸ್ತ್ರಗಾಳಿತ ಚೂರ್ಣವನ್ನು ಹಾಕಿ ಸುಪಾಕದಲ್ಲಿಳಿಸಿ, ಪ್ರತಿದಿನ ಪ್ರಾತಃಕಾಲ ಕ್ವೆಂಜಿ 3ರಂತೆ ಸೇವಿಸಿ, ಕೂಡಲೆ ಮಜ್ಜಿಗೆಯನ್ನು ಸೇವಿಸಬೇಕು. ಹಾಗೆ ಉಪಯೋಗಿಸಿದರೆ ವಾತ, ಗುಲ್ಮ, ಶೂಲ, ಹೊಟ್ಟೆಉಬ್ಬರಿಸಿ ಬರುವಿಕೆ, ತೂನಿ, ಪ್ರತೂನಿ, ಅಷ್ಠೀಲಾ, ಬಸ್ತಿಪ್ರದೇಶದಲ್ಲಿರುವ ಎಲ್ಲಾಬಗೆಯ ನೋವು, ಈ ಸರ್ವವಿಧದ ವಿಪತ್ತುಗಳನ್ನು ಈ "ಕುಕ್ಕುಟಲವಣ"ವೆಂಬ ದಿವ್ಯೌಷಧವು ನಿವಾರಿಸುವುದು.

## ॥ तुकादि चूर्णम् ॥

तुगाक्षीरिचिणिलाजैश्च कोलव्योषात्रेजातकैः ।
सचंद्रैर्मोदकं रुच्यं क्रमात्द्विगुणशर्करम् ॥ ४९ ॥
छर्दसृक् पित्तहृद्रोगकासक्षयज्वरापहम् ।

## ತುಕಾದಿ ಚೂರ್ಣ

ತುಗಾಕ್ಷೀರಿ, ಹುಣಸೆ, ಹೊದಳು, ಬುಗರಿ, ಒಣಶುಂಠಿ, ಹಿಪ್ಪಲಿ, ಕರಿಮೆಣಸು, ಏಲಕ್ಕಿ, ಲವಂಗಚೆಕ್ಕೆ, ತಮಾಲಪತ್ರೆ, ಪಚ್ಚೆಕರ್ಪೂರ

ಇವು ಸಮಭಾಗ, ಇವುಗಳ 2 ಪಾಲು ಸಕ್ಕರೆಯನ್ನು ಸೇರಿಸಿ ಸೇವಿಸಲು ಈ ಚೂರ್ಣವು ರಕ್ತಪಿತ್ತ, ಛರ್ದಿ, ಹೃದ್ರೋಗ, ಕಾಸ, ಕ್ಷಯಜ್ವರ ಇವುಗಳನ್ನು ನಾಶಮಾಡುತ್ತದೆ.

॥ श्वासकासादि चूर्णम् ॥

तेकराजरसप्रस्थे कुडुबं मरिचं पचेत् ॥ ५० ॥
अभया पिप्पली भार्ङ्गी सैंधवं पुष्कराह्वयम् ।
अक्षप्रमाणं सञ्चूर्ण्य मिश्रयित्वा मधुप्लुतम् ॥ ५१ ॥
तत्खादेत् प्रातरुत्थाय श्वासकासविनाशनम् ।

ಶ್ವಾಸಕಾಸಗಳಿಗೆ ಚೂರ್ಣ

ಭೃಂಗರಾಜ ರಸ ಪ್ರಸ್ಥ 1, ಅದರಲ್ಲಿ ಕುಡವ(16 ತೊಲೆ) ಕರಿಮೆಣಸು ಪಾಕಮಾಡಿ ಅಣಿಲೆಕಾಯಿ ಸಿಪ್ಪೆ, ಹಿಪ್ಪಲಿ, ಕಿರುತೇಗು, ಸೈಂಧವಲವಣ, ಪುಷ್ಕರಮೂಲ, ಇವುಗಳು ಪ್ರತಿಯೊಂದು 3 ಕೈಂಜಿ ಪ್ರಕಾರ ಕೂಡಿಸಿ ತಯಾರಿಸಿದ ಈ ಚೂರ್ಣವನ್ನು ಬೆಳಿಗ್ಗೆ ಎದ್ದು ಸೇವಿಸಲು, ಶ್ವಾಸಕಾಸಗಳು ಶಮನ.

॥ जीवंत्यादि चूर्णम् ॥

जीवंतीमुस्तसुरसत्वगेलाद्वयपौष्करम् ॥ ५२ ॥
चंडातामलकीलोहभार्ङ्गीनागरवाळकम् ।
कर्कटस्य शठीकृष्णानागकेसरचोरकम् ॥ ५३ ॥
उपयुक्तं यथाकामं चूर्णात्द्विगुणशर्करम् ।
पार्श्वरुग्ज्वरकासघ्नं हिध्माश्वासहरं परम् ॥ ५४ ॥

ಜೀವಂತ್ಯಾದಿ ಚೂರ್ಣ

ಬುಗುಡಿಹೂವಿನ ಗಡ್ಡೆ, ಭದ್ರಮುಷ್ಠಿ, ತುಳಸಿ, ಲವಂಗಚೆಕ್ಕೆ, ಏಲಕ್ಕಿ, ಸಣ್ಣಏಲಕ್ಕಿ, ಪುಷ್ಕರಮೂಲ, (ಚಂಡಕಿಯಿಜ್,) ನೆಲನೆಲ್ಲಿಬೇರು, ಅಗಿಲು ಗಂಧ, ಕಿರುತೇಗು ಬೇರು, ಒಣಶುಂಠಿ, ಇರಿವೇರಿದಂಡು, ಕರ್ಕಾಟಕ

ಶೃಂಗಿ, ಕಚ್ಚೂರ, ಹಿಪ್ಪಲಿ, ನಾಗಕೇಸರಿ, ಅಡವಿಕಚ್ಚೂರ, ಇವುಗಳು ಸಮ ಭಾಗ, ಎರಡುಪಾಲು ಸಕ್ಕರೆ ಕೂಡಿಸಿ ಉಪಯೋಗಿಸಲು ಈ ಚೂರ್ಣವು ಪಾರ್ಶ್ವನೋವು, ಜ್ವರ, ಕಾಸ, ಶ್ವಾಸ, ಇವುಗಳನ್ನು ಹೋಗಲಾಡಿಸುವುದು.

॥ त्रिकट्वादि चूर्णम् ॥

त्रिकटु त्रिफला मुस्ता विडङ्गं चवि चित्रकम् ।
त्वक् शठी पिप्पलीमूलं माक्षिकं सुरदारु च ॥ ५५ ॥
तुंबुरुः पौष्करं मूलं पाठेला रजनीद्वयम् ।
बिडं सौवर्चलंक्षारः सैंधवो हस्तिपिप्पली ॥ ५६ ॥
यावंत्येतानि द्रव्याणि तावंतं गुग्गुलुं समम् ।
कोलप्रमाणं गुटिका कृत्वेदं मधुसर्पिषा ॥ ५७ ॥
कासश्वासस्तथानाहमर्शांसि च भगंदरम् ।
गुल्मं प्लीहां तथाशोफमंत्रवृद्धिं च नाशयेत् ॥ ५८ ॥
सप्तविंशतिको ह्येषु गुग्गुलुः कथितो मया ।

## ತ್ರಿಕಟ್ವಾದಿ ಚೂರ್ಣ

ಒಣಶುಂಠಿ, ಹಿಪ್ಪಲಿ, ಕರಿಮೆಣಸು, ತ್ರಿಫಲೆಗಳು, ಭದ್ರಮುಷ್ಠಿ, ವಾಯುವಿಳಂಗ, ಕಾಡುಮೆಣಸಿನ ಬೇರು, ಚಿತ್ರಮೂಲದ ಬೇರು, ಲವಂಗ ಚಕ್ಕೆ, ಕಚ್ಚೂರ, ಹಿಪ್ಪಲಿಮೂಲ, ಮಾಕೀರಕಲ್ಲು, ದೇವದಾರು, ತುಂಬನ ಯರಿ, ಪುಷ್ಕರಮೂಲ, ಪಾಡಾವಳಿಬೇರು, ಏಲಕ್ಕಿ, ಅರಸಿನ, ಮರದರಸಿನ ಸಿಪ್ಪೆ, ಬೆಡಿಯುಪ್ಪು, ತುವರ್ಚಲಕ್ಷಾರ, ಸೈಂಧವಲವಣ, ಗಜಹಿಪ್ಪಲಿ, ಇವುಗಳು ಸಮತೂಕ, ಈ ಹಿಂದೆ ಹೇಳಿದ ಔಷಧಿಗಳಷ್ಟೇ ಶುದ್ಧಿಮಾಡಿದ ಗುಗ್ಗುಲು, ಜೇನುತುಪ್ಪ, ದನದತುಪ್ಪ ಇವುಗಳನ್ನು ಸೇರಿಸಿ ಬುಗರಿಹಣ್ಣಿನ ಪ್ರಮಾಣ ಮಾತ್ರೆಗಳಾಗಿ ಮಾಡಿ ಸೇವಿಸಿದರೆ, ಕಾಸ, ಶ್ವಾಸ, ಅನಾಹ, ಅರ್ಶಸ್, ಭಗಂದರ, ಗುಲ್ಮ, ಪ್ಲೀಹ, ಅಂತ್ರವೃದ್ಧಿ, ಈ ಬಗೆಯ ರೋಗಗಳನ್ನು ಹೋಗಲಾಡಿಸುವುದು.

॥ पुष्यानुगं चूर्णम् ॥

पाठाजंब्वाम्रयोरस्थि शिलोद्भेदं रसाञ्जनम् ॥ ५९ ॥
अंबष्ठां शाल्मलीपिच्छां समङ्गां वत्सकत्वचम् ।
बाह्लीकबिल्वातिविषालोध्रतोयदगैरिकम् ॥ ६० ॥
शुंठीमधूकमृद्वीकारक्तचंदनकट्फलम् ।
कट्वङ्गवत्सकानंता धातकी मधुकार्जुनम् ॥ ६१ ॥
पुष्ये गृहीत्वा संचूर्ण्य सक्षौद्रं तंडुलांभसा ।
पिबेदर्शःस्वतीसारे रक्तं यश्चोपवेश्यते ॥ ६२ ॥
दोषजंतुकृता ये च बालानां तांश्च नाशयेत् ।
योनिदोषं रजोदोषं श्यावं श्वेतारुणासितम् ॥ ६३ ॥
चूर्णं पुष्यानुगं नाम हितमात्रेयपूजितम् ।

## ಪುಷ್ಯಾನುಗ ಚೂರ್ಣ

ಪಾಡಾವಳಿ ಬೇರು, ನೇರಳೆಬೀಜದ ತಿರುಳು, ಮಾವಿನ ಅಂಡಿ, ಪಾಷಾಣಭೇದಿ, ರಸಾಂಜನ, ಬಿಳಿ ಅಂಬಡೆ ಕೆತ್ತೆ, ಆಲದ (ಬೂರುಗದ) ಮಯಣ, ಪರಚ್ಚುಂಡ ಬೇರು, ಕೊಡಸಿಗನ ಬೇರಿನ ಮೇಲಿನ ಸಿಪ್ಪೆ, ಹಿಪ್ಪಲಿ, ಬಿಲ್ವಪತ್ರೆ, ಅತಿವಿಡಯ, ಪಾಚೋಟಿ ಕೆತ್ತೆ, ಭದ್ರಮುಷ್ಠಿ, ಕಾವಿ ಮಣ್ಣು, ಒಣಶುಂಠಿ, ಇಪ್ಪೆ ತಿರುಳು, ದ್ರಾಕ್ಷೆ, ರಕ್ತಚಂದನ, ಕುಂಬುಡು ಮರದ ಬೇರು, ಪೆರುಮರ ಕೆತ್ತೆ, ಕೊಡಗಪಾಲರಿ, ಅಣಿಲೆಕಾಯಿ ಸಿಪ್ಪೆ, ಧಾತಕೀ ಕುಸುಮ, ಜ್ಯೇಷ್ಠಮಧು, ಬಣಪು ಕೆತ್ತೆ, ಅಂಜನಕಲ್ಲು ಈ ಔಷಧಿಗಳನ್ನು ವಸ್ತ್ರಗಾಳಿತ ಚೂರ್ಣಮಾಡಿ ಜೇನುತುಪ್ಪ, ಕಾಡಿನೀರು, (ಅಕ್ಕಿ ತೊಳೆದ ನೀರು) ಇವೆರಡರಲ್ಲಿ ಸೇರಿಸಿ ಸೇವಿಸಿದರೆ, ಅರ್ಶಸ್ಸು, ಅತಿಸಾರ, ರಕ್ತಾತಿಸಾರ, ಯೋನಿರೋಗ, ಕ್ರಿಮಿಗಳಿಂದ ಸಂಭವಿಸಿದ ಕೆಲ ತರದ ವಿಪತ್ತುಗಳು, ಮಕ್ಕಳಿಗೆ ಆಗಂತುಕವಾಗಿ ಬಂದ ನಾನಾಬಗೆಯ ರೋಗಗಳು, ಹಲವುತರದ ಯೋನಿದೋಷ, ರಜೋದೋಷ ಇವುಗಳೆಲ್ಲವನ್ನು ಶಮನಮಾಡುವುದು. "ಪುಷ್ಯಾನುಗ" ಎಂಬ ಈ ಯೋಗವು ಪೂಜ್ಯಪಾದ ಅತ್ರಿ ಮಹರ್ಷಿಗಳಿಂದ ಹೇಳಲ್ಪಟ್ಟಿರುವುದು.

॥ नाराचक चूर्णम् ॥

यवानी हपुषा धान्यं शतपुष्पोपकुञ्चिका ॥ ६४ ॥
कारवी पिप्पलीमूलमजगंधा शटी वचा ।
चित्रकं जीरकं व्योषं स्वर्णकामिफलत्रयम् ॥ ६५ ॥
द्वौ क्षारौ पौष्करं मूलं कुष्टं लवणपञ्चकम् ।
विडङ्गं च समांशानि दंत्या भागत्रयं तथा ॥ ६६ ॥
त्रिवृद्विशाले द्विगुणे सातला च चतुर्गुण ।
एषा नाराचको नाम चूर्णो रोगगणापहः ॥ ६७ ॥
नैतं प्राप्य निवर्तंते रोगा विष्णुमिवासुराः ।

ನಾರಾಚಕ ಚೂರ್ಣ

ಓಮುಕಾಳು, ಬೆಟ್ಟುಕರಂಡೆ ಬೇರು, ಕೊತ್ತುಂಬರಿ ಬೀಜ, ಸತಾಪೆ, ಸಣ್ಣ ಏಲಕ್ಕಿ, ಕರಿಜೀರಿಗೆ, ಕಾಡುಹಿಪ್ಪಲಿ ಬೇರು, ಆಟುನಾರಿವೇಳ, ಕಚ್ಚೂರ, ಬಜೆ, ಚಿತ್ರಮೂಲ, ಜೀರಿಗೆ, ಒಣಶುಂಠಿ, ಹಿಪ್ಪಲಿ, ಕರಿಜೀರಿಗೆ, ಸುನಾಮುಖಿ, ತ್ರಿಫಲ, ಚವಲ್ಕಾರ, ತುವರ್ಚಿಲಕ್ಷಾರ, ಪುಷ್ಕರಮೂಲ, ಕಂಕುಷ್ಠ, ಐದು ಬಗೆಯ ಉಪ್ಪುಗಳು, ವಾಯುವಿಳಂಗ, ಇವುಗಳೆಲ್ಲಾ ಸಮಭಾಗ, ನಾಗದಂತಿಬೇರು 3 ಭಾಗ, ತ್ರಿಗಡೆ, ಕಾಡುಸೌತ ಇವು 2 ಭಾಗ, ಸಾತಲಾ(ಚರ್ಮಲಂತ) 4 ಭಾಗ ಕೂಡಿಸಿ ಒಣಗಿಸಿ ಚೂರ್ಣಮಾಡುವುದು. ಈ ಚೂರ್ಣಕ್ಕೆ 'ನಾರಾಚಕ ಚೂರ್ಣ'ವೆಂದು ಹೆಸರು.

नाराचक चूर्ण—सेवना क्रम.

तक्रेणोदरिभिः पेये गुल्मिभिर्बदरांभसा ॥ ६८ ॥
आनद्धवाते सुरया वातरोगे प्रसन्नया ।
दधिमंडेन बिड्सङ्गे दाडिमांभोभिरर्शसि ॥ ६९ ॥
परिकर्ते सवृक्षाम्ले रुष्णांबुभिरजीर्णके ।
भगंदरे पांडुरोगे कासे श्वासे गळग्रहे ॥ ७० ॥

हृद्रोगे ग्रहणीदोषे कुष्ठे मंदेऽनले ज्वरे ।
दंष्ट्राविषे गरे कृत्रिमे विषे यथार्हम् ॥ ७१ ॥
स्निग्धकोष्ठेन पेयमेतद्धि रेचनम् ।

**ನಾರಾಚಕ ಚೂರ್ಣ ಸೇವಿಸುವ ಕ್ರಮ:**– ಮೇಲೆ ಹೇಳಿರುವ ನಾರಾಚಕ ಚೂರ್ಣವನ್ನು ಉದರ ರೋಗಿಗಳಿಗೆ ಮಜ್ಜಿಗೆಯಲ್ಲಿ, ಗುಲ್ಮರೋಗಿಗಳಿಗೆ ಬುಗರಿ ಹಣ್ಣಿನ ಕಷಾಯದಲ್ಲಿ, ಆನದ್ಧವಾತಕ್ಕೆ ಮದ್ಯದಲ್ಲಿ, ಕೇವಲ ವಾತರೋಗಗಳಿಗೆ 'ಪ್ರಸನ್ನಾ' ಎಂಬ ಮದ್ಯದಲ್ಲಿ, ಮಲಪ್ರವೃತ್ತಿಯಾಗದಿರುವಲ್ಲಿ ಮೊಸರುನೀರಿನಲ್ಲಿ, ಅರ್ಶಸ್ಸು ರೋಗಕ್ಕೆ ದಾಡಿಂಬಕಷಾಯದಲ್ಲಿ, ಹೊಟ್ಟೆಯಲ್ಲಿ ಸುತ್ತಲೂ ಅಮುಕುವಿಕೆಗೆ (ಪರಿಕರ್ತಾ) ಪುನರ್ಪುಳಿ ಕಷಾಯದಲ್ಲಿ, ಅಜೀರ್ಣರೋಗಕ್ಕೆ ಬಿಸಿನೀರಿನಲ್ಲಿ, ಸೇವಿಸ ಬೇಕು. ಭಗಂದರ, ಪಾಂಡುರೋಗ, ಕಾಸ, ಶ್ವಾಸ, ಗಳಗ್ರಹ, ಹೃದ್ರೋಗ, ಗ್ರಹಣೀ ದೋಷ, ಕುಷ್ಠ, ಅಗ್ನಿಮಾಂದ್ಯ, ಜ್ವರ, ಸರ್ಪಾದಿಗಳ ಕಡಿವಿಷ, ಮೂಲವಿಷ ಕೃವಿಷ, ರೋಗವಿಷ ಇವುಗಳಿಗೆಲ್ಲಾ ಸ್ನಿಗ್ಧಮಾಡಿಕೊಂಡು ರೋಗಾನುಸಾರ ಈ ವಿರೇಚನೆಯನ್ನು ಸೇವಿಸಬೇಕು.

॥ हपुषादि चूर्णम् ॥

हपुषा काञ्चनक्षीरं त्रिफला नीलिनीफलम् ॥ ७२ ॥
त्रायंतीं रोहिणीं तिक्तां सातलां त्रिवृतां वचाम् ।
सैंधवं काललवणं पिप्पलीं चेति चूर्णयेत् ॥ ७३ ॥
दाडिमत्रिफलामांसरसमूत्रसुखोदकैः ।
पेयोऽयं सर्वगुल्मेषु प्लीहि सर्वोदरेषु च ॥ ७४ ॥
श्वित्रे कुष्ठेषु ज्वरके सदने विषमेऽनले ।
शोफार्शः पांडुरोगेषु कामिलायां हलीमके ॥ ७५ ॥
वातपित्तकफांश्चापि विरेकेण प्रसाधयेत् ।

## ಹಪುಷಾದಿ ಚೂರ್ಣ

ಬೆಟ್ಟುಕರಂಡೆ ಬೇರು, ಸುನಾಮುಖಿ, ತ್ರಿಫಲೆಗಳು, ನೀಲೀ ಬೀಜ. ಬ್ರಾಹ್ಮಿ, ಕಟುಕರೋಹಿಣಿ, ಪುತ್ತುರಿಜ್ಜುಂಡ, ಸಾತಲಾ, ತ್ರಿಗಡೆ, ಬಜೆ, ಸೈಂಧವಲವಣ, ಕಾರುಪ್ಪು, ಹಿಪ್ಪಲಿ, ಇವುಗಳನ್ನು ಚೂರ್ಣಮಾಡಿ ದಾಳಿಂಬ

ರಸದಲ್ಲಿ, ತ್ರಿಫಲಾ ಕಷಾಯದಲ್ಲಿ, ಮಾಂಸರಸದಲ್ಲಿ, ಗೋಮೂತ್ರದಲ್ಲಿ, ಉಷ್ಣಜಲದಲ್ಲಿ ಪಾನಮಾಡಿದರೆ, ಎಲ್ಲಾ ಗುಲ್ಮರೋಗಗಳಲ್ಲಿಯೂ, ಪ್ಲೀಹ ರೋಗಗಳಲ್ಲಿಯೂ, ಸರ್ವ ಉದರರೋಗಗಳಲ್ಲಿಯೂ, ಶ್ವಿತ್ರ, ಕುಷ್ಠ, ಅಜೀರ್ಣ, ವಿಷಮಾಗ್ನಿರೋಗ, ಅರ್ಶಸ್ಸು, ಪಾಂಡುರೋಗ, ಕಾಮಲಾ, ಹಲೀಮಕ, ಇವುಗಳಲ್ಲಿಯೂ, ವಿರೇಚಿಸಿದ ಮೇಲೆ ಇದರ ಸೇವನೆಯಿಂದ ವಾತಪಿತ್ತಕಫಗಳು ಹೋಗಲಾಡುವುವು.

॥ नीलिनी चूर्णम् ॥

नीलिनीं निचुलं व्योषं क्षारौ लवणपञ्चकम् ॥ ७६ ॥
चित्रकं च पिबेच्चूर्णं सर्पिषोदरगुल्मनुत् ।

## ನೀಲಿನಿ ಚೂರ್ಣ

ನೀಲಿಬೇರು, ನಿಚುಳ, ಕರಿಮೆಣಸು, ಹಿಪ್ಪಲಿ, ಒಣಶುಂಠಿ, ಸರ್ಜಕ್ಷಾರ, ಯವಕ್ಷಾರ, ಐದುಬಗೆಯ ಉಪ್ಪುಗಳು, ಚಿತ್ರಮೂಲ ಇವುಗಳ ಚೂರ್ಣವನ್ನು ತುಪ್ಪದೊಡನೆ ಸೇವಿಸಿದಲ್ಲಿ ಉದರ, ಗುಲ್ಮಹರ.

॥ पटोलादि चूर्णम् ॥

पटोलनिंबत्रायंतितिक्तातिक्तकपर्पटम् ॥ ७७ ॥
कुटजत्वक् फलं दूर्वा मधुशिग्रुफलं वचा ।
दार्वीत्वक् पद्मकोशीरयवानी मुस्तचंदनम् ॥ ७८ ॥
सौराष्ट्र्यतिविषा व्योष त्वगेलापत्रदारु च ।
चूर्णितं मधुना लेह्यं पेयं मद्यजलेन वा ॥ ७९ ॥
हृत्पांडुग्रहणीरोगगुल्मशूलारुचिज्वरान् ।
कामिलां सन्निपातं च मुखरोगांश्च नाशयेत् ॥ ८० ॥

## ಪಟೋಲಾದಿ ಚೂರ್ಣ

ಕಾಡುಪಟವಲ ಬಳ್ಳಿ, ಕಹಿಬೇವಿನ ಕೆತ್ತೆ, ಬ್ರಾಹ್ಮಿ, ಪುತ್ತರಿಚ್ಚುಂಡ, ಕಟುಕರೋಹಿಣಿ, ಪರ್ಪಟಕ ಹುಲ್ಲು, ಕೊಡಸಿಗನ ಕೆತ್ತೆ, ಕೊಡಗಪಾಲರಿ,

ಪೆರಿಕುರುಂಬು, ಸುಗ್ಗೆ ಬೀಜ, ಬಜೆ, ಮರದರಸಿನ ಸಿಪ್ಪೆ, ಪದ್ಮಾಕ್ಷಿ, ಲಾಮಂಚ, ಜೀರಿಗೆ, ಭದ್ರಮುಷ್ಟಿ, ಚಂದನ, ಕಟುಕರೋಹಿಣಿ, ಅತಿ ವಿಡಯ, ಕರಿಮೆಣಸು, ಹಿಪ್ಪಲಿ, ಶುಂಠಿ, ಲವಂಗಚಕ್ಕೆ, ಏಲಕ್ಕಿ, ತಮಾಲಪತ್ರೆ, ದೇವದಾರು, ಈ ಔಷಧಿಗಳನ್ನು, ಜೇನುತುಪ್ಪದೊಡನೆ ಸೇರಿಸಿ, ಮದ್ಯದಿಂದಾಗಲೀ, ಜಲದಿಂದಾಗಲೀ, ಕದಡಿಸಿ ಸೇವಿಸಿದರೆ, ಹೃದ್ರೋಗ, ಪಾಂಡುರೋಗ, ಗ್ರಹಣೀರೋಗ, ಗುಲ್ಮ, ಶೂಲ, ರುಚಿಕ್ಷಯ, ಜ್ವರ, ಕಾಮಿಲಾ, ಸನ್ನಿಪಾತ, ಮುಖರೋಗ ಇವುಗಳನ್ನು ಹೋಗಲಾಡಿಸುವುದು.

॥ निंबादि चूर्णम् ॥

भूनिंब कटुका मुस्ता त्र्यूषणेंद्रयवान् समान् ।
द्वौ चित्रकाद्वत्सकत्वग्भागान् षोडष चूर्णयेत् ॥ ८१ ॥
गुडशीतांबुना पीतं तत्ग्रहणीदोषगुल्मनुत् ।
कामिलाज्वरपांडुत्वमेहारुच्यतिसारनुत् ॥ ८२ ॥

## ನಿಂಬಾದಿ ಚೂರ್ಣ

ಪುತ್ತರಿಚ್ಚುಂಡ ಬೇರು, ಕಟುಕರೋಹಿಣಿ, ಭದ್ರಮುಷ್ಟಿ, ಕರಿಮೆಣಸು, ಹಿಪ್ಪಲಿ, ಶುಂಠಿ, ಕೊಡಗಪಾಲರಿ, ಇವುಗಳು ಸಮಭಾಗ. ಚಿತ್ರಮೂಲ ಬೇರು (ಶುದ್ಧಿ) ಎರಡು ಭಾಗ, ಕೊಡಸಿಗ ಬೇರಿನ ಮೇಲಿನ ಸಿಪ್ಪೆ ಹದಿನಾರು ಭಾಗ, ಇವುಗಳನ್ನು ವಸ್ತ್ರಗಾಳಿತ ಚೂರ್ಣಮಾಡಿ ಸಕ್ಕರೆಯನ್ನು ಸೇರಿಸಿ, ಶೀತಜಲದಲ್ಲಿ ಸೇವಿಸಿದರೆ, ಗ್ರಹಣೀರೋಗ, ಕಾಮಿಲಾ, ಜ್ವರ, ಪಾಂಡುರೋಗ, ಪ್ರಮೇಹ, ಅರುಚಿ, ಅತಿಸಾರ, ಇವುಗಳನ್ನು ಹೋಗಲಾಡಿಸುವುದು.

॥ नागरादि चूर्णम् ॥

नागरातिविषा मुस्ता पाठा बिल्वं रसाञ्जनम् ।
कुटजत्वक फलं तिक्तं धातकी च कृतं रजः ॥ ८३ ॥

क्षौद्रतंडुलवारिभ्यां पैत्तिके ग्रहणीगदे ।
प्रवाहिकार्शो गुदरुग्रक्तोत्थानेष पेष्यते ॥ ८४ ॥

## ನಾಗರಾದಿ ಚೂರ್ಣ

ಒಣಶುಂಠಿ, ಅತಿವಿಡಯ, ಭದ್ರಮುಷ್ಠಿ, ಪಾಡಾವಳಿಗಡ್ಡೆ, ಬಿಲ್ವಪತ್ರೆ ಬೇರು, ರಸಾಂಜನ, ಕೊಡಸಿಗ ಚೆಕ್ಕೆ, ಕೊಡಗಪಾಲರಿ, ಪುತ್ತರಿಚ್ಛುಂಡ, ಧಾತಕೀಕುಸುಮ, ಇವುಗಳ ವಸ್ತ್ರಗಾಳಿತ ಚೂರ್ಣ, ಜೇನುತುಪ್ಪ, ಕಾಂಚಿಕ ಕೂಡಿಸಿ ಸೇವಿಸಿದ್ದಲ್ಲಿ ಪಿತ್ತ, ಗ್ರಹಣಿ, ಅತಿಸಾರ, ಅರ್ಶಸ್ಸು, ಗುದರೋಗ, ರಕ್ತಹೋಗುವಿಕೆ, ಇವುಗಳನ್ನು ಈ ಚೂರ್ಣವು ಹೋಗಲಾಡಿಸುವುದು.

॥ सितोपलादि चूर्णम् ॥

सितोपलावंशभचोपकुल्या ।
त्रुटित्वचासाज्यमधुप्रयुक्तम् ।
अधाचदूर्ध्वद्विगुणं निहंति ।
चूर्णं समस्तान् क्षयजातरोगान् ॥ ८५ ॥
सश्वासकासानलमांद्यसुप्ति ।
जिह्वारुचिश्लेष्मकफार्शशूलान् ।
ज्वरोर्ध्वरक्तां सकरांघ्रिदाह ।
मुक्तान् यथा पापगणान्सुरारिः ॥ ८६ ॥
आयुर्यदि स्यात् बलवत्तराणां ।
सुरक्तपित्तश्वसनक्षयाणाम् ॥ ८७ ॥

## ಸಿತೋಪಲಾದಿ ಚೂರ್ಣ

ಕಲ್ಲುಸಕ್ಕರೆ 16 ಭಾಗ, ವಂಶಲೋಚನಾ 8 ಭಾಗ, ಹಿಪ್ಪಲಿ 4 ಭಾಗ, ಏಲಕ್ಕಿ 2 ಭಾಗ, ಲವಂಗಚಕ್ಕೆ 1 ಭಾಗ, ಈ ಔಷಧಿಗಳನ್ನು ವಸ್ತ್ರಗಾಳಿತ ಚೂರ್ಣವಮಾಡಿ ಜೇನುತುಪ್ಪ, ತುಪ್ಪ ಸೇರಿಸಿ ಸೇವಿಸಿದರೆ, ಕ್ಷಯದಿಂದ

ಉತ್ಪನ್ನವಾದ ಸರ್ವರೋಗಗಳಿಗೂ ಹಿತಕರವು. ಶ್ವಾಸ, ಕಾಸ, ಅಗ್ನಿ ಮಾಂದ್ಯ, ನಾಲಿಗೆಯ ಅರುಚಿ, ಕಫ, ಪಾರ್ಶ್ವಶೂಲ, ರಕ್ತ ಉಗುಳುವಿಕೆ, ಕೈಕಾಲುಗಳಲ್ಲಿ ದಾಹ, ಈ ಎಲ್ಲಾ ರೋಗಗಳನ್ನು "ಪಾಪಸಮೂಹಗಳನ್ನು ವಿಷ್ಣುನಾಮವು ಹ್ಯಾಗೆ ಹೋಗಲಾಡಿಸುವುದೋ"ಹಾಗೆಯೇ ಆಯುರ್ಬಲ ವಿದ್ದರೆ, ಈ ಚೂರ್ಣವು ಮೇಲೆ ಹೇಳಿದ ರೋಗಗಳನ್ನು ಹೋಗಲಾಡಿಸು ವುದು.

## ಮದನಕಾಮೇಶ್ವರೀ ಚೂರ್ಣ

ಯುಕ್ತರೀತಿಯಿಂದ ಶುದ್ಧಿಮಾಡಿದ ಅಭ್ರಕವು, ದೊಡ್ಡದ್ರಾಕ್ಷೆ, ಒಣ ಶುಂಠಿ, ಕರಿಮೆಣಸು, ಹಿಪ್ಪಲಿ, ಬಿಳಿಕಂಕುಷ್ಠ, ಅಶ್ವಗಂಧಿ, ಅಮೃತಬಳ್ಳಿ ಸತ್ವ, ಮೆಂತೆಕಾಳು, ಆಲದಮಯಣ, ನೆಲಕುಂಬಳ ಸತ್ವ, ನೆಲತಾಳಿ ಗಡ್ಡೆಯ ಸತ್ವ, ನೆಗ್ಗಿನಮುಳ್ಳು, ಬಯಲಮುಳ್ಳಿನ ಬೀಜ, ಕದಳೀಗಡ್ಡೆ, ಶತಾವರಿ ಸತ್ವ, ಓಮುಕಾಳು, ಉದ್ದು, ಎಳ್ಳು, ಕೊತ್ತಂಬರಿ, ಜ್ಯೇಷ್ಠ ಮಧು, ದೊಡ್ಡಕಡಿರ ಬೇರು, ಭದ್ರಮುಷ್ಟಿ, ಕಚ್ಚೂರ, ಮದನಫಲ, ಜಾಯಿಕಾಯಿ, ಸೈಂಧವಲವಣ, ಕಿರುತೇಗು ಬೇರು, ಕರ್ಕಾಟಕಶೃಂಗಿ, ಭೃಂಗರಾಜ ಬೇರು, ಅರಸಿನ, ಜೀರಿಗೆ, ಕರಿಜೀರಿಗೆ, ಚಿತ್ರಮೂಲ(ಶುದ್ಧಿ), ಏಲಕ್ಕಿ, ಲವಂಗ ಚೆಕ್ಕೆ, ತಮಾಲಪತ್ರೆ, ನಾಗಕೇಸರ, ತೆಗ್ಗಾಮೆ ಬೇರು, ಆನೆ ಹಿಪ್ಪಲಿ, ದ್ರಾಕ್ಷೆ, ಬೇಂಗತಿರುಳು, ತುಗಾಕ್ಷೀರಿ, ನಾಯಿಸೊಣಗು ಬೀಜ, ಹುಣಸೆಮಯಣ, ಅಣಿಲೆಕಾಯಿ, ಶಾಂತಿಕಾಯಿ, ನೆಲ್ಲಿಕಾಯಿ, ಇವುಗಳೆಲ್ಲವನ್ನೂ ಸಮತೂಕ ತೆಗೆದು ಚೂರ್ಣಿಸಿ, ಚೂರ್ಣದಷ್ಟೇ ಶುದ್ಧ ಮಾಡಿದ ಭಂಗಿಯ ಚೂರ್ಣ, ಚೂರ್ಣಗಳೆರಡರ ಸಮಭಾಗ ಸಕ್ಕರೆ, ದನದ ತುಪ್ಪವನ್ನು ಕೂಡಿಸಿ ½ ತೊಲೆಯ ಮಾತ್ರೆಗಳಾಗಿ ಮಾಡಿ, ಪ್ರಾತಃಕಾಲ ಜೇನುತುಪ್ಪದ ಅನುಪಾನದಿಂದ ಸೇವಿಸಿ, ಸಕ್ಕರೆ ಕೂಡಿಸಿದ ಹಾಲನ್ನು ಕೂಡಲೇ ಕುಡಿಯುವುದರಿಂದ ಶುಕ್ಲವೃದ್ಧಿ, ಮೈಥುನ ದಲ್ಲಿ ಶುಕ್ರಸ್ತಂಭನ, ಸ್ತ್ರೀಯರು ಸ್ವಾಧೀನವಾಗುವಿಕೆ, ಸುಖಾಭಿವೃದ್ಧಿ ಯಾಗುವಿಕೆ, ಸಂಭೋಗದಲ್ಲಿ ಸ್ತ್ರೀಯರನ್ನು ಸೋಲಿಸುವಿಕೆ, ಕ್ಷೀಣಿಗಳಿಗೆ ಪುಷ್ಟಿಯಾಗುವಿಕೆ, ಕ್ಷಯನಿವಾರಣೆ, ಎಲ್ಲವನ್ನೂ ಶಮನ ಮಾಡುವುದು.

ಅದಲ್ಲದೇ ಕಾಸ, ಶ್ವಾಸ, ಅತೀಸಾರ, ಕಾಮಾಗ್ನಿವರ್ಧನ, ಅರ್ಶಸ್ಸು, ಗ್ರಹಣೀ, ಪ್ರಮೇಹ, ಕಫಾತಿಸಾರ, ರಕ್ತಾತಿಸಾರಗಳನ್ನು ನೀಗಾಡಿಸಿ, ನಿತ್ಯಾನಂದ, ಕವಿತಾಶಕ್ತಿ, ಸ್ಥಿರಬುದ್ಧಿ, ದೇವರ ವಿಚಾರ ಉಂಟಾಗುವುದು. ಮತ್ತು ಅಕಾಲಮರಣ, ವಾರ್ಧಕ್ಯಗಳನ್ನು ಹೋಗಲಾಡಿಸುವುದು. ಇದನ್ನು ಒಂದು ವರ್ಷದ ಪರ್ಯಂತ ಸೇವಿಸಲು, ಮನ್ಮಥನಂತೆ ಮನೋಹರನಾಗಿ, ಸರ್ವರ ಪ್ರೇಮಾಯತನನಾಗುವನು. ವೃದ್ಧರಿಗೂ ಕಾಮೋದಯವು ಆವಿರ್ಭವಿಸಿ, ಪ್ರೌಢನಾರಿಯರ ಸಂಗದಲ್ಲಿ ಅತ್ಯಾಗ್ರಹವನ್ನುಂಟು ಮಾಡುವುದು.

## ನಾಸಿಕ ಚೂರ್ಣ

ನೆಲ್ಲಿಕಾಯಿ ಸಿಪ್ಪೆ, ಜೀರಿಗೆ ಕಾಳು, ನವಿಲಗರಿಯ ಒಳಗಿನ ನಾರು, ಒಣಶುಂಠಿ, ಹಿಪ್ಪಲಿ, ಕರಿಮೆಣಸು, ಜಾಯಿಕಾಯಿ, ಲವಂಗ, ಜಾಪತ್ರೆ, ಇರಿವೇರಿದಂಡು, ಗಂಧಮೆಣಸು, ಬಿಳಿಕಂಕುಷ್ಟ, ಅರಸಿನ, ಮರದರಸಿನ ಸಿಪ್ಪೆ, ಖರ್ಜೂರ, ಲಾಮಂಚ, ಏಲಕ್ಕಿ, ಲವಂಗಚೆಕ್ಕೆ, ತಮಾಲಪತ್ರೆ, ನಾಗಕೇಸರ ಇವುಗಳೆಲ್ಲವನ್ನು ಸಮಭಾಗ ತೆಗೆದು, ಹಿಂದೆ ಹೇಳಿದ ಚೂರ್ಣದಷ್ಟೆ ಶ್ರೀಗಂಧದ ಚೂರ್ಣ ಮತ್ತು ಅಷ್ಟೆ ಹೊಗೆಸೊಪ್ಪಿನ ಚೂರ್ಣ ಕೂಡಾ ಕೂಡಿಸಿ, ನಿಂಬೆಹುಳಿ ರಸದಿಂದ ಅರೆದು, ಪುನಃ ಒಣಗಿಸಿ, ಎಳನೀರ(ಬೊಂಡ)ನಿಂದಲೂ ಹಾಗೆಯೇ ಅರೆದು ಒಣಗಿಸಿ, ಕರ್ಪೂರ, ಪಚ್ಚೆಕರ್ಪೂರಗಳನ್ನು ಕೂಡಿಸಿ ಪುನಃ ಶುದ್ಧ ಗುಲಾಬಿ ನೀರಿನಿಂದ ಅರೆದು, ನಂತರ ಸಾಂಬ್ರಾಣಿ ಬಳ್ಳಿಯ ಸತ್ವ ಮತ್ತು ಪುಣುಗು ಸೇರಿಸಿ, ಚೆನ್ನಾಗಿ ಮಿಶ್ರವಾಗುವಂತೆ ಮಾಡಿದ ಈ ಚೂರ್ಣವನ್ನು ನಸ್ಯವಿಧಿಯಿಂದ ಉಪಯೋಗಿಸಲು ತಲೆನೋವು, ಪೀನಸರೋಗ, ದುರ್ಗಂಧ, ಸೂರ್ಯಾವರ್ತ ಇತ್ಯಾದಿಗಳಲ್ಲದೆ, ಊರ್ಧ್ವಜತ್ರುವಿಕಾರ (ಕುತ್ತಿಗೆಯ ಮೇಲ್ಗಡೆ ಉಂಟಾಗುವ ಎಲ್ಲಾ ವಿಕಾರಗಳು) ಸಂಪೂರ್ಣ ಶಮನ.



## ॥ अथ गुटिकायोगाः ॥

# ಗುಟಿಕಾಯೋಗ ಪ್ರಕರಣವು.

### ॥ नीलीमूलादि गुटिका ॥

नीलीमूलं च पिष्ट्वा तु तत्पत्रस्वरसेन च ।
पिप्पलीरोहिणीयुक्तं सामान्यज्वरशांतये ॥ १ ॥

### ನೀಲೀಮೂಲಾದಿ ಗುಟಿಕಾ

ಅಮರಿ ಬೇರು, ಹಿಪ್ಪಲಿ, ಕಟುಕರೋಹಿಣಿ, ನೀಲಿಪತ್ರದ ಸ್ವರಸದಿಂದ ಭಾವನೆಮಾಡಿ ಮಾತ್ರೆಗಳಾಗಿ ಮಾಡಿ ಸಹದೇವೀ ರಸದ ಅನುಪಾನದಿಂದ ಸೇವಿಸಲು, ಸಾಮಾನ್ಯ ಜ್ವರಗಳು ನಾಶವಾಗುವುವು.

### ॥ ज्वरांकुश गुटिका ॥

समैश्चतुर्जातशिलालसूत ।
व्योषैः कुमारीरससंप्रपिष्टैः ।
माषार्धमात्रां गुटिकां कृतां हि ।
ज्वराङ्कुशं नाम वदंति वैद्याः ॥ २ ॥

### ಜ್ವರಾಂಕುಶ ಗುಟಿಕಾ

ಏಲಕ್ಕಿ, ಲವಂಗಚಕ್ಕೆ, ತಮಾಲಪತ್ರೆ, ನಾಗಕೇಸರಿ, ಮನಶ್ಶಿಲಾ, ಹರಿತಾಲ, ರಸ, (ಈ ಮೂರು ಬಗೆಗಳ ಶುದ್ಧಿ), ಒಣಶುಂಠಿ, ಹಿಪ್ಪಲಿ, ಕರಿಜೀರಿಗೆ ಇವುಗಳನ್ನು ಕುಮಾರಿರಸ(ಇಣ್ಣೋಳಿರಸ)ದಲ್ಲಿ ಚೆನ್ನಾಗಿ ಅರೆದು ಉದ್ದಿನ ಅರ್ಧಭಾಗದಷ್ಟು ಗುಟಕೆಗಳನ್ನು ಮಾಡಬೇಕು. ಈ ಜ್ವರಾಂಕುಶ ಮಾತ್ರೆಯನ್ನು ರೋಗಾನುಸಾರ ಅನುಪಾನ ವಿಶೇಷದಿಂದ ಸೇವಿಸಲು, ಜ್ವರವನ್ನು ನಾಶಮಾಡುವುದು.

॥ रामबाण गुटिका ॥

सूतं गंधं विषं तुल्यं धूर्तबीजं त्रिभिः समम् ।
चतुर्णां द्विगुणं व्योषं गुञ्जापत्ररसेन तु ॥ २ ॥
रामबाणमितिख्यातं सर्वज्वरविनाशनम् ।

### ರಾಮಬಾಣ ವಟಿಕಾ

ರಸ, ಗಂಧಕ, ವತ್ಸನಾಭಿ ಇವು ಸಮಭಾಗ, ಇವುಗಳ ಸಮ ಉಮ್ಮತ್ತ ಬೀಜ (ಈ ಮದ್ದುಗಳನ್ನು ಶುದ್ಧಿ ಮಾಡಿಕೊಳ್ಳಬೇಕು) ಇವು ನಾಲ್ಕರ ಎರಡು ಭಾಗ ಒಣಶುಂಠಿ, ಹಿಪ್ಪಲಿ, ಕರಿಮೆಣಸು, (ಮಂಜಿಷ್ಠಾ) ಮಂಜೋಟಿ ಪತ್ರದ ಸ್ವರಸದಲ್ಲಿ ಅರೆದು ಮಾತ್ರೆ ಮಾಡುವುದು. ಯುಕ್ತವಾದ ಅನುಪಾನದಿಂದ ಈ ರಾಮಬಾಣ ಮಾತ್ರೆಯು ಸರ್ವ ಜ್ವರಗಳನ್ನು ವಿನಾಶನಮಾಡುವುದು.

॥ सूर्यप्रभा गुटिका ॥

सूतं गंधकं रामठं वरकटुं कृत्वायवानी समं ।
सर्वं शोडष भाग मात्र च विषं जंभारसे मर्दयेत् ॥
गुञ्जामात्रनिबद्धशुष्कगुटिका शूलापहंत्री परम् ।
कासश्वासहरी महाज्वरहरी नाम्ना तु सूर्यप्रभा ॥ ४ ॥

### ಸೂರ್ಯಪ್ರಭಾ ಗುಟಿಕಾ

ಶುದ್ಧಮಾಡಿದ ರಸ, ಶುದ್ಧ ಗಂಧಕ, ಹಿಂಗು (ಶುದ್ಧಿ), ಅಣಿಲೆ ಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ಕಟುಕರೋಹಿಣಿ, ಜೀರಿಗೆ ಇವುಗಳ 16ನೇ ಒಂದುಭಾಗ ಶುದ್ಧ ವತ್ಸನಾಭಿ, ಇವುಗಳನ್ನು ನಿಂಬೆಹುಳಿಯ ರಸದಲ್ಲಿ ಅರೆದು ಗುಂಜಾಪ್ರಮಾಣ ಗುಟಿಕೆ ಮಾಡಿ ಸೇವಿಸಿದರೆ, ಶೂಲ, ಕಾಸಶ್ವಾಸಕ್ಕೂ, ಮಹಾಜ್ವರಕ್ಕೂ ಹಿತಕಾರಿಯು.

### ॥ ಸೇತುಬಂಧನ ಮಾತ್ರೆ ॥

ಜಾತೀಫಲಾತಿವಿಷಬಿಲ್ವಫಲಾಜಮೋದ ಜಾತೀಸಿಂಧುಖಟಿಕಾ
ಯಮಾನಿಕರಾಂಬುಶೃಷ್ಣಾ ।

ಜಂಬ್ವಾಸ್ಥಿ ಪಂಕ್ತಿಕಳ್‌ವರುತ್ತ್‌ಪ್ಪೊಡಿಚ್ಚು ತುಲ್ಯಂಕೊಟ್ಟೇಟರಕ್ಕ್
ಲಶುನೋದ್ಭವ ತೈಲಯುಕ್ತಂ ॥
ಪಿಸ್ಟೆ ಚಣಕ್ಕ್ ಬದರೀಫಲ ತುಲ್ಯಮಾಕಿ ತೇನಿಲ್ ಕೊಡುಕ್ಕ್
ದಧಿತಕ್ರಮದಿಲ್ ಕಲರ್ನು ।
ಸರ್ವಾತಿಸಾರಮುಡನೇ ಕಡಿಯೋಡು ನೊಡಿಟ್ಟೊಳಿಕ್ಕ್ ಮಯಿ
ಪೇರಿತು ಸೇತುಬಂಧಂ ॥

ಜಾಯಿಕಾಯಿ, ಅತಿವಿಡಯ, ಬಿಲ್ವಪತ್ರೆ ಕಾಯಿ ತಿರುಳು, ಅಯ ಮೋದಕ, ಮಾವಿನ ಆಂಡಿ, ದಾಳಿಂಬ ಸಿಪ್ಪೆ, (ತಾಳಿಮಾದಳ), ಜೀರಿಗೆ, ಲವಂಗ, ಹಿಪ್ಪಲಿ, ನೇರಳೆ ಬೀಜ ಇವುಗಳನ್ನು ಸರಿಪ್ರಮಾಣ ಬೆಳ್ಳುಳ್ಳಿ ರಸದಲ್ಲಿ ಅರೆದು ಬುಗರಿ ಬೀಜ ಪ್ರಮಾಣ ಮಾತ್ರೆಗಳನ್ನು ಮಾಡಿ, ಮೊಸರು ನೀರಿನಲ್ಲಿಯೂ, ತಕ್ರದಲ್ಲಿಯೂ, ಜೇನುತುಪ್ಪದಲ್ಲಿಯೂ ಸೇವಿಸಿದರೆ ಅತಿಸಾರ, ಹೊಟ್ಟೆನೋವು ಇವುಗಳನ್ನು ಹೋಗಲಾಡಿಸುವುದು.

॥ पांडुरोगे गुटिका ॥

तेकराजरसे सुभावितं लोहगूढवरारज ।
स्तुल्यभागवटच्छदोद्भवभस्म चाप्युभयं पुनः ॥
षट्पदोत्थरसेन पेषितमक्षमात्र विनिर्मितम् ।
पिंडमप्यति पांडुरोगमुदश्विता सह सेवितम् ॥ ५ ॥

## ಪಾಂಡುವಿಗೆ ಮಾತ್ರೆ

ಭೃಂಗರಾಜ ರಸದಲ್ಲಿ ಶುದ್ಧಿಮಾಡಿದ ಪುರಾಣಕಿಟ್ಟದ ಚೂರ್ಣ, ತ್ರಿಫಲೆಗಳ ಚೂರ್ಣ, ಸಮಭಾಗ ಗೋಳಿ ಕೆತ್ತೆಯನ್ನು ಸುಟ್ಟು ಮಾಡಿದ ಭಸ್ಮ ಇವುಗಳನ್ನು ಭೃಂಗರಾಜ ರಸದಲ್ಲಿ ಅರೆದು ಶಾಂತಿಕಾಯಿಯ ಪ್ರಮಾಣ ಮಾತ್ರೆಗಳನ್ನು ಮಾಡಿ ಮಜ್ಜಿಗೆಯಲ್ಲಿ ಸೇವಿಸಲು ಪಾಂಡು ರೋಗವು ಶಮನ.

॥ ज्वरांकुश गुटिका ॥

रसस्य द्विगुणं गंधं गंधतुल्यं तु टङ्कणम् ।
रसतुल्याविषं योज्यं मरिचं पंचधा विषम् ॥ ६ ॥
कट्फले दंतिबीजश्च प्रत्येकं मरिचान्वितम् ।
ज्वरांकुशो रसो ह्येषु चूर्णयेद्याम मात्रकम् ॥ ७ ॥
माषैकेन निहंत्याशु ज्वरमुग्रो त्रिदोषजम् ।

## ಜ್ವರಾಂಕುಶ ಗುಟಿಕೆ

ರಸ ಕೈಂಜಿ 1, ಗಂಧಕ ಕೈಂಜಿ 2, ಟಂಕಣಕ್ಷಾರ ಕೈಂಜಿ 2, ವತ್ಸನಾಭಿ ಕೈಂಜಿ 1, ಕರಿಮೆಣಸು ಕೈಂಜಿ 6, ಕಟ್ಫಲ, ನಾಗದಂತೀ ಬೀಜ ಇವು ಕೈಂಜಿ 6–6 ಎಲ್ಲಾ ಕೂಡಿಸಿ, ಉದ್ದುಕಾಳು ಭಾಗ ಚೂರ್ಣವನ್ನು ಹಸಿಶುಂಠಿರಸದಲ್ಲಿ ಕೊಟ್ಟರೆ ಉಗ್ರವಾದ ಜ್ವರ, ಸನ್ನಿಪಾತ ಜ್ವರಗಳು ನಿವಾರಣೆಯಾಗುವುವು.

॥ महाज्वरांकुश गुटिका ॥

शुद्धसूतं विषं गंधं धूर्तबीजात्रिभिस्समम् ।
चतुर्णां द्विगुणं व्योषं चूर्णं गुन्जा प्रमाणकम् ॥ ८ ॥
जंबीरकस्य स्वरसे आर्द्रकस्य च तैर्युतम् ।
महाज्वरांकुशो नाम ज्वराणामंतको भवेत् ॥ ९ ॥

## ಮಹಾಜ್ವರಾಂಕುಶ ಮಾತ್ರೆ

ರಸ, ವತ್ಸನಾಭಿ, ಗಂಧಕ, ಇವು ಸಮಭಾಗ, ಉಮ್ಮತ್ತ ಬೀಜ, ಇವುಗಳ ಎರಡುಪಾಲು ಒಣಶುಂಠಿ, ಹಿಪ್ಪಲಿ, ಕರಿಮೆಣಸು, ಚೂರ್ಣ ಮಾಡಿ ಗುಂಜಾಪ್ರಮಾಣ ಮಾತ್ರೆಮಾಡಿ, ನಿಂಬೆರಸದಲ್ಲಿ, ಹಸಿ ಶುಂಠಿ ರಸದಲ್ಲಿ ಸೇವಿಸಿದರೆ, ಎಲ್ಲಾ ಜ್ವರಗಳು ಶಮನ.

॥ रामबाण गुटिका ॥

हिंगुळं मूषिकाश्मानं चतुष्कं मानतः क्रमात् ।
मर्दयित्वा तु सुश्लक्ष्णं स्वर्णपत्ररसेन वा ॥ १० ॥
गुञ्जामात्रं प्रयुञ्जीत शर्करायां विशेषतः ।
रामबाणमितिख्यातं सर्वशीतज्वरापहम् ॥ ११ ॥

## ರಾಮಬಾಣ ಗುಟಿಕಾ

ಚಾಯಿಲ್ಯ ಕೈಂಜಿ 4, ಪಾಷಾಣ ಕೈಂಜಿ 6, ಎರಡನ್ನೂ ಪುಡಿಮಾಡಿ ಉಮ್ಮತ್ತ ರಸದಲ್ಲಿ ಅರೆದು ಗುಂಜಾಪ್ರಮಾಣ ಮಾತ್ರೆಗಳನ್ನು ಮಾಡಿ ನೆರಳಲ್ಲಿ ಒಣಗಿಸಿ ಬೆಲ್ಲದಲ್ಲಿ ಸೇವಿಸಿದರೆ ಶೀತಜ್ವರ ಶಮನ.

॥ सर्वरोग कुलांतक वटि ॥

अमृतं चैकनिष्कं च तत्समं कणचूर्णितम् ।
तयोर्हिंगुञ्जामात्रेण वटजंबीरनीरजैः ॥ १२ ॥
शीतोदकं वार्द्रकं वा पिवेन्माषप्रमाणकम् ।
राजयक्ष्मानिलश्वासज्वरमंदानलानपि ॥ १३ ॥
सन्निपातं महावातं सर्वरोगकुलांतकम् ।

## ಸರ್ವರೋಗಕುಲಾಂತಕ ವಟೀ

ವತ್ಸನಾಭಿ, ಹಿಪ್ಪಲಿಚೂರ್ಣ ಇವು 1 ಕೈಂಜಿ, ಚಾಯಿಲ್ಯ 2 ಕೈಂಜಿ ಇವುಗಳನ್ನು ಸೇರಿಸಿ ನಿಂಬೆಹುಳಿಯ ರಸದಲ್ಲಿ ಅರೆದು ಉದ್ದು ಕಾಳು ಪ್ರಮಾಣ ವಟಿಕೆ ಮಾಡಿ ನೆರಳಲ್ಲಿ ಒಣಗಿಸಿ ದಶಮೂಲ ಕಷಾಯದಲ್ಲಿ, ಹಸಿಶುಂಠಿ ರಸದಲ್ಲಿ ಒಂದು ಗುಟಿಕೆಯನ್ನು ಸೇವಿಸಿದರೆ ಕ್ಷಯ, ವಾತಕೋಪ, ಶ್ವಾಸ, ಜ್ವರ, ಅಗ್ನಿಮಾಂದ್ಯ, ಸನ್ನಿಪಾತ, ಮಹಾವಾತ ಇವುಗಳನ್ನೆಲ್ಲಾ ಶಮನ ಮಾಡುವುದು.

॥ सन्निपात गुटिका ॥

पारदं चामृतं गंधं सर्वं शुद्धं च कारयेत् ॥ १४ ॥
त्ररा व्योषेण सम्मिश्रं समतुल्यं विमर्दयेत् ।
ज्वालामुखी च निर्यासं सूरणं चित्रकार्द्रकम् ॥ १५ ॥
शिग्रुः पुनर्नवेनैव प्रत्येकं भावनात्रयम् ।
तत्र संस्थितमादाय दीयते गुञ्जमात्रकम् ॥ १६ ॥
नवज्वरविनाशाय आर्द्रकस्य रसेन तु ।
किरातं मरिचं देयं सन्निपाते त्रयोदशे ॥ १७ ॥
रोगत्रयारिर्विख्यातो राजराजेन निर्मितम् ।

## ಸನ್ನಿಪಾತಕ್ಕೆ ಮಾತ್ರೆ

ರಸ, ವತ್ಸನಾಭಿ, ಗಂಧಕ, ಇವು ಶುದ್ಧಿಮಾಡಿ ಇವುಗಳಿಗೆ ಸಮಾನ ತ್ರಿಫಲೆ, ತ್ರಿಕಟು, ಇವುಗಳನ್ನು ಮೆತ್ತೋಣಿ (ಜ್ವಾಲಾಮುಖಿ) ಗಡ್ಡೆಯ ರಸದಲ್ಲಿ, ಕಾಡುಕೇನೆ ರಸದಲ್ಲಿ, ಹಸಿಶುಂಠಿ ರಸದಲ್ಲಿ, ಚಿತ್ರಮೂಲ ರಸದಲ್ಲಿ, ನುಗ್ಗೆ ರಸದಲ್ಲಿ, ತೆಗ್ಗಾಮೆ ರಸದಲ್ಲಿ ಇವುಗಳಿಂದ(ಒಂದೊಂದರಿಂದ ಮೂರು ಮೂರು ದಿನಗಳ ಪರ್ಯಂತ)ಅರೆದು ಗುಂಜಾಪ್ರಮಾಣ ಗುಟಿಕೆ ಮಾಡಿ, ಎಲ್ಲಾ ಜ್ವರಗಳಿಗೂ ಹಸಿಶುಂಠಿ ರಸದಿಂದ ವ ಪುತ್ತಂಚ್ಚುಂಡಬೇರು, ಕಂಮೆಣಸು ಕಷಾಯದಿಂದ ಒಂದು ಮಾತ್ರೆ ಸೇವಿಸಲು 13 ವಿಧದ ಸನ್ನಿಪಾತಗಳು ನಿವಾರಣೆಯಾಗುವುವು.

॥ चंडभास्कर गुटिका ॥

हरबीजामृतवल्लि प्रत्येकं निष्कसंयुतम् ॥ १८ ॥
टङ्कणं दशनिष्कं च जंबालं विंशतिस्तथा ।
शुद्धं खल्वतले क्षिप्य निर्गुंडीरसमर्दितम् ॥ १९ ॥
मुद्गप्रमाणं गुटिकां गुडेन सह भक्षयेत् ।
पांडुशोफोदरावर्तगुल्मप्लीहगुदक्रिमीन् ॥ २० ॥

अजीर्णमामशूलं च दीपनं पाचनं परम् ।
पुराणज्वरमेहं च मूत्रकृच्छ्राश्मरी व्रणान् ॥ २१ ॥
सर्वव्याधिहरं शीघ्रं रसोऽयं चंडभास्करः ।

## ಚಂಡಭಾಸ್ಕರ ಗುಟಿಕೆ

ರಸ, ವತ್ಸನಾಭಿ, ನೆಲ್ಲಿಗಂಧಕ, ಟಂಕಣಕ್ಷಾರ, ಜೇಪಾಳ ಬೀಜ (ಶುದ್ಧಿ), ಕರಿನೆಕ್ಕಿರಸದಲ್ಲಿ ಅರೆದು, ಸಣ್ಣ ಹೆಸರುಕಾಳು ಪ್ರಮಾಣ ಮಾತ್ರೆಗಳನ್ನಾಗಿ ಮಾಡಿ ಬೆಲ್ಲದೊಡನೆ ಸೇರಿಸಿ ಸೇವಿಸಲು ಪಾಂಡುರೋಗ, ಶೋಫ, ಉದರರೋಗ, ಹೊಟ್ಟೆ ಉಬ್ಬರಿಸುವಿಕೆ, ಗುಲ್ಮ, ಪ್ಲೀಹ, ಕೃಮಿರೋಗ, ಅಜೀರ್ಣ, ಹೊಟ್ಟೆಯಲ್ಲಿ ದಹನವಾಗದಿರುವುದರಿಂದ ಉಂಟಾದ ನೋವು, ಹಳೆಜ್ವರ, ಪ್ರಮೇಹ, ಮೂತ್ರಕೃಛ್ರ, ಅಶ್ಮರೀ, ವ್ರಣ, ಇವುಗಳನ್ನು ನಿರ್ಮೂಲಪಡಿಸಿ ದೀಪನ-ಪಾಚನಗಳನ್ನು ಉಂಟುಮಾಡುವುದು. ಇದು ಚಂಡಭಾಸ್ಕರರಸವೆಂದು ಹೇಳಲ್ಪಡುತ್ತದೆ.

॥ लघुमालिनी वसंत गुटिका ॥

एकांशो मरिचाद्बुभौ रसात्कसम्मर्दयेन्मसृणे ।
पश्चान्निंबुरसेन मर्दनविधिर्यावद्धृतं गच्छति ॥
पथ्यं दुग्धयुतं कणामधुयुतो वल्लप्रमाणे भवेत् ।
प्राचीनज्वरहा तथा विषमहा धातुस्थित ध्वंसनं ॥ २२ ॥
रक्तातिस्रुतिपायुजप्रदरहा नेत्रामयध्वंसनो ।
रोगानीकगळग्रहो विजयते श्रीमालिनी प्राणयम् ।
वैद्यानां मतिशालिनां बहुतरं श्रीदो वसंताभिधः ॥ २३ ॥

## ಲಘುಮಾಲಿನೀವಸಂತ ವಟೀ

ಶುದ್ಧಿಮಾಡಿದ ಕರಿಮೆಣಸು ಭಾಗ 1, ಗೋಮೂತ್ರದಲ್ಲಿ ಶುದ್ಧಿ ಮಾಡಿದ ವತ್ಸನಾಭಿ ಭಾಗ 2, ಅದಕ್ಕೆ ಬೆಣ್ಣೆಯನ್ನು ಸೇರಿಸಿ ಅಮ್ಮಿಕಲ್ಲಿನಲ್ಲಿ ಅರೆದು ಅದರ ನಂತರ ನಿಂಬೆರಸದಲ್ಲಿ ಅರೆದು ಒಣಗಿಸಿ ಗುಳಿಕೆಯ

ಪಾಕವಾಗುವ ಸಮಯದಲ್ಲಿ ಹೆಸರುಕಾಳಿನ ಗಾತ್ರದ ಮಾತ್ರೆಗಳಾಗಿ ಮಾಡಿ, ಜೇನುತುಪ್ಪ, ಹಿಪ್ಪಲಿಚೂರ್ಣ ಇವುಗಳನ್ನು ಸೇರಿಸಿ, ಸೇವಿಸುವುದು. ಸೇವಿಸುವಾಗ್ಯೆ ಹಾಲೋಗರದಿಂದ ಭೋಜನಮಾಡುವುದು. ಅದರಿಂದ ಧಾತುಗತಜ್ವರ, ರಕ್ತಾತಿಸಾರ, ಮೂಲವ್ಯಾಧಿ, ಸ್ತ್ರೀರೋಗ, ಪ್ರದರ, ನೇತ್ರ ರೋಗ, ಮೊದಲಾದುವುಗಳನ್ನಲ್ಲದೆ, ಈ ವಸಂತಯೋಗದಿಂದ ರಕ್ತ ಸಂಬಂಧವಾದ ರೋಗಗಳನ್ನೂ, ಪಿತ್ತಜನ್ಯ ರೋಗಗಳನ್ನೂ ಹೋಗಲಾಡಿಸಿ, ವೈದ್ಯನಿಗೆ ಕೀರ್ತಿಯನ್ನೂ ದ್ರವ್ಯಲಾಭವನ್ನೂ ಉಂಟುಮಾಡುವುದು.

## ಸಕಲ ಸನ್ನಿಪಾತರೋಗಗಳಲ್ಲಿ ಗೋರೋಜನಾದಿ ಮಾತ್ರೆಯು

ಗೋರೋಜನ, ಕಲಮುಗೊಂಬು, ರುದ್ರಾಕ್ಷಿ, ಚಂದನ, ಬಚೆ, ದೀವಿತೆಂಗಿನಕಾಯಿಯ ಒಳಗಿನ ತಿರುಳು, ಲಾಮಂಚ, ಭದ್ರಮುಷ್ಠಿ, ಪುಣುಗು, ಭೂನಾಗ, ಆಡಿನ ಕೊಂಬು, ಆನೆದಂತ, ಗಂಡಾಮೃಗದ ಕೊಂಬು, ಜಿಂಕೆಯ ಕೊಂಬು, ಕೃಷ್ಣಮೃಗದ ಕೊಂಬು, ಕಿರಾತ ಕಡ್ಡಿ, ಸುವರ್ಣ, ಹವಳ (ಇವುಗಳ ಭಸ್ಮ), ಅಂಜನಕಲ್ಲು, ಪಚ್ಚಕರ್ಪೂರ, ಜೀರಿಗೆ ಕಾಳು, ತುಂಬೆಹೂ, ಹತ್ತಿಬೀಜ, ಸಣ್ಣ ಉತ್ತರಣೆ, ಬೆಳ್ಳುಳ್ಳಿ, ಪಿನಾರಿ, ಒಣಶುಂಠಿ, ಕರಿಮೆಣಸು, ಹಿಪ್ಪಲಿ, ನವ್ರೋಳು ಬೇರು, ಈಶ್ವರ ಮುಳ್ಳು, ಪಾಡಾವಳಿ ಗಡ್ಡೆ, ಶಂಖಪುಷ್ಪದ ಬೇರು, ಅಮರಿ ಬೇರು, ಅಣಿಲೆ ಕಾಯಿಯ ಸಿಪ್ಪೆ, ಶಾಂತಿಕಾಯಿಯ ಸಿಪ್ಪೆ, ನೆಲ್ಲಿಕಾಯಿಯ ಸಿಪ್ಪೆ, ಜಾಯಿಕಾಯಿ, ಪೊಂಗಾರ, ಮಾಯಿಕಾಯಿ, ಸತಾಪೆ, ಆಜಾಳಿ, ದೊಡ್ಡ ಭದ್ರಮುಷ್ಠಿ, ಕರಿಜೀರಿಗೆ, ಅಂಬರ ಈ ಬಗೆಯ ಎಲ್ಲಾ ಔಷಧಿಗಳನ್ನು ಸಮತೂಕ ತೆಗೆದು, ಹಸಿಶುಂಠಿರಸದಲ್ಲಿ ಚೆನ್ನಾಗಿ ಅರೆದು, ಗುಂಜಾಪ್ರಮಾಣ ಮಾತ್ರೆಗಳಾಗಿ ಮಾಡಿ, ಸ್ತನ್ಯದ ಅನುಪಾನದಿಂದ ಸೇವಿಸಲು, ಸಕಲ ವಿಧದ ಸನ್ನಿಪಾತ ರೋಗಗಳು ನಿವಾರಣೆಯಾಗುವುವಲ್ಲದೆ ಸನ್ನಿಪಾತದಿಂದುಂಟಾದ ಬೋಧ ಕ್ಷಯದಲ್ಲಿ ಈ ಮಾತ್ರೆಯನ್ನು ಸೇವಿಸಲು ಕೂಡಲೇ ಬೋಧವುಂಟಾಗು ವುದು. ನಾಲಿಗೆ, ಕಿವಿಗಳಲ್ಲಿ ಸಂಭವಿಸಿದ ರುಜೆಗಳನ್ನು ನಿವೃತ್ತಿಪಡಿಸಿ, ಭೂತಗ್ರಹ ರೋಗಗಳನ್ನೂ ಹೋಗಲಾಡಿಸುವುದು.

## ಧಾನ್ವಂತರಿ ಗುಟಿಕಾ

ಒಣಶುಂಠಿ, ಅಣಿಲೆಕಾಯಿಸಿಪ್ಪೆ, ಜೀರಿಗೆ ಕಾಳು, ಕಿರಾತಕಡ್ಡಿ, ಏಲಕ್ಕಿ, ಅಜಾಳಿ, ಕಂಟಕಾರಿ ಬೇರು, ಗಂಧಮೆಣಸು, ರುದ್ರಾಕ್ಷ, ದೇವದಾರು, ಪಚ್ಚೆಕರ್ಪೂರ, ಕಂಡಿಬೆಣ್ಣೆ, ಪುಣುಗು, ಇವುಗಳನ್ನು ಸಮಭಾಗ ತೆಗೆದು ಜೀರಿಗೆ ಕಷಾಯದಲ್ಲಿಯೂ ಶುದ್ಧ ಗುಲಾಬಿ ನೀರಿನಿಂದಲೂ, ಚೆನ್ನಾಗಿ ಅರೆದು ಮಾತ್ರೆಗಳಾಗಿ ಮಾಡಿ, ನೆರಳಲ್ಲಿ ಒಣಗಿಸಿ, ಹಲಸಿನ ಎಲೆಯ ದಂಡು, ಕರಿಚುಂಡ ಬೇರು, ಜೀರಿಗೆ, ಕರಿಜೀರಿಗೆ, ಕಾಳಾ ಜೀರಿಗೆ, ಇವುಗಳ ಕಷಾಯದಲ್ಲಿ ಮೇಲ್ಪುಡಿ ಹಾಕಿ ಸೇವಿಸುವುದರಿಂದ, ಕಾಸ, ಶ್ವಾಸ, ಕ್ಷಯ, ಹಿಕ್ಕಾ, ಛರ್ದಿ, ಕಫ ಇವುಗಳನ್ನು ಶಮನ ಮಾಡಿ, ವಾಯುಪ್ರಶಮನಮಾಡಿ, ಹೆಸರಿನಿಂದ ಧಾನ್ವಂತರೀ ಎಂದು ಪ್ರಶಂಸಿಸಲ್ಪಟ್ಟಿದೆ.

## ಪೊಂಗಾರಾದಿ ವಟಿಕಾ

ಚಿತ್ರಮೂಲಬೇರು(ಶುದ್ಧಿ), ಬಜೆ, ಒಣಶುಂಠಿ, ಕರಿಮೆಣಸು, ಜೀರಿಗೆ, ಕರಿಜೀರಿಗೆ, ಹಿಪ್ಪಲಿ, ಏಲಕ್ಕಿ, ರಾಸ್ನೆ, ಜಾಯಿಕಾಯಿ, ಕಾಂತ, ಪೊಂಗಾರ, ಸೈಂಧವಲವಣ, ಸರ್ಜಕ್ಷಾರ, ಯವಕ್ಷಾರ, ಹಿಂಗು, ಬೆಡಿಯುಪ್ಪು, ಬೆಟ್ಟುಕರಂಡೆ ಬೇರು, ಇಂದ್ರುವಲ್ಲೀ, ನುಗ್ಗೆ ಚೆಕ್ಕೆ, ಕರಿನೆಕ್ಕಿ ಬೇರು, ಬೆಳ್ಳುಳ್ಳಿ, ಅಫೀಮು, ಇವು ಪ್ರತಿಯೊಂದು ಬಗೆಗಳನ್ನು ಸಮತೂಕ ತೆಗೆದುಕೊಂಡು, ಕಳಂಜಿ ಕಾಯಿ(ಗಜುಗದ ಕಾಯಿ)ಯ ಒಳಗಿನ ಬೀಜ ತೊಲೆ 2 ಕೂಡಿಸಿ, ಹಸಿಶುಂಠಿ ರಸದಲ್ಲಿ ಅರೆದು, ಗುಂಜಾಪ್ರಮಾಣ ಮಾತ್ರೆಗಳಾಗಿ ಮಾಡಿ, ರೋಗಾನುಸಾರ ಅನುಪಾನ ವಿಶೇಷದಿಂದ ಸೇವಿಸಲು, ಶೂಲ, ಶೂಲವಾಯು, ವಾತಕ್ಷೋಭ, ಗುಲ್ಮ, ಮಹೋದರ, ವಾಯು, ಇವುಗಳು ಶಮನವಾಗುವುವು.

## ಬೇರೊಂದು ಬಗೆಯ ಧಾನ್ವಂತರೀ ವಟಿಕಾ

ಒಣಶುಂಠಿ, ಕರಿಮೆಣಸು, ಹಿಪ್ಪಲಿ, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಅಜಾಳೀ. ಕಿರಾತಕಡ್ಡಿ, ಏಲಕ್ಕಿ, ಲವಂಗ,

ಜಾಯಿಕಾಯಿ, ಜಾತಿಪತ್ರೆ, ತಕ್ಕೋಲ, ಗಂಧಮೆಣಸು, ದೇವದಾರು, ಅಶ್ವಗಂಧಿ, ರುದ್ರಾಕ್ಷಿ, ಕಲಶೃಂಗ ಭಸ್ಮ, ಕಂಡಿಬೆಣ್ಣೆ, ಪುಣುಗು, ಪಚ್ಚೆಕರ್ಪೂರ, ಕಂಟಕಾರಿ ಬೇರು ಇವುಗಳನ್ನು ಸಮತೂಕ ತೆಗೆದು, ಚೂರ್ಣಮಾಡಿ ಜೀರಿಗೆ ಕಷಾಯದಿಂದಲೂ, ಗುಲಾಬಿ ನೀರಿನಿಂದಲೂ ಅರೆದು ರೋಗಾನುಸಾರ ಯುಕ್ತಾನುಪಾನದಿಂದ ಸೇವಿಸಲು, ಸಕಲ ರೋಗಗಳ ನಿವಾರಣೆಗೆ ಶ್ರೇಷ್ಠತಮವಾಗಿರುವುದು.

## ಕಸ್ತೂರ್ಯಾದಿ ಮಾತ್ರೆ

ಕಸ್ತೂರಿ, ಕಿರಾತಕಡ್ಡಿ, ರಾಸ್ನೆ, ಪುಣುಗು, ಒಣಶುಂಠಿ, ಕಾಂತ, ಪಚ್ಚೆಕರ್ಪೂರ, ಜಾಯಿಕಾಯಿ, ಸರ್ಜಕ್ಷಾರ, ಯವಕ್ಷಾರ, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಏಲಕ್ಕಿ, ಲವಂಗ ಚೆಕ್ಕೆ, ತಮಾಲಪತ್ರೆ, ಇರುವೇರಿ ದಂಡು, ಗಂಧಮೆಣಸು, ಒಣಶುಂಠಿ, ಕರಿಮೆಣಸು, ಹಿಪ್ಪಲಿ, ಪಾಡಾವಳಿ ಗಡ್ಡೆ, ಪಶುಪಾಶೀ, ಚಂದನ, ಬಜೆ, ಜೀರಿಗೆ, ಕರಿಜೀರಿಗೆ, ಓಮು, ಕುರಾಶಾನಿ, ಅಕ್ಕಲ್ಕಾರೆ, ಸತಾಪೆ, ಜ್ಯೇಷ್ಠಮಧು, ಲವಂಗ, ಪೊಂಗಾವೀ, ಇರುವೇರೀ ರಸ, ಪೊಂಗಾರ, ಅಂಜನಕಲ್ಲು, ವತ್ಸನಾಭಿ, ಮನೋಲಾ, ಅಜಾಳಿ, ಚಾಯಿಲ್ಯ ಈ ಬಗೆಯ ಮದ್ದುಗಳನ್ನು ಸಮಭಾಗ ತೆಗೆದುಕೊಂಡು, ಗುಲಾಬಿ ನೀರಿನಿಂದಲೂ, ಭೃಂಗರಾಜ ಸ್ವರಸ(ಗರ್ಗ)ದಿಂದಲೂ ಚೆನ್ನಾಗಿ ಭಾವನೆಮಾಡಿ ಗುಂಜಾ ಪ್ರಮಾಣದ ಗುಟಿಕೆಗಳಾಗಿ ಮಾಡಿ, ನೆರಳಲ್ಲಿ ಒಣಗಿಸಿ, ಜೀರಿಗೆ ಕಷಾಯದಲ್ಲಿ ಈ ಕಸ್ತೂರಿಮಾತ್ರೆಯನ್ನು ಸೇರಿಸಿ ಸೇವಿಸಲು, ವಾಯು ಕ್ಷೋಭವನ್ನೂ, ಕಾಸಶ್ವಾಸವನ್ನೂ, ಹಿಕ್ಕಾರೋಗವನ್ನೂ ಶಮನಮಾಡುವುದು.

## ॥ चंद्रप्रभा वटिका ॥

चंद्रप्रभा वचा मुस्तं भूनिंबामृतदारुकम् ।
हरिद्रातिविषा दार्वी पिप्पलीमूलचित्रकौ ॥ २४ ॥

धान्यकं त्रिफला चव्यं विडङ्गं गजपिप्पली ।
व्योषं माक्षिकधातुश्च द्वौ क्षारौ लवणत्रयम् ॥ २५ ॥
एतानि शाणमात्राणि प्रत्येकं कारयेत् बुधः ।
त्रिवृद्दंतीपत्रकं च त्वगेला वंशरोचना ॥ २६ ॥
प्रत्येकं कर्षमात्राणि कुर्यादेतानि बुद्धिमान् ।
द्विकर्षं हतलोहं स्याच्चतुष्कर्षा सिता भवेत् ॥ २७ ॥
शिलाजत्वष्टकर्षं स्यादष्टौ कर्षाश्च गुग्गुलोः ।
एभिरेकत्र संचूर्णैः कर्तव्या गुटिका शुभा ॥ २८ ॥
चंद्रप्रभेति विख्याता सर्वरोगप्रणाशिनी ।
प्रमेहान् विंशतिं कृच्छ्रं मूत्राघातं तथाश्मरीं ॥ २९ ॥
विबंधानाहशूलानि मेहनग्रंथिमर्बुदम् ।
अंडवृद्धिं तथा पांडुं कामलां च हलीमकम् ॥ ३० ॥
अंत्रवृद्धिं कटीशूलं श्वासं कासं विचर्चिकाम् ।
कुष्ठान्यर्शांसि कंडूं च प्लीहोदर भगंदरम् ॥ ३१ ॥
दंतरोगं नेत्ररोगं स्त्रीणामार्तवजां रुजम् ।
पुंसां शुक्रगतान् दोषान्मंदाग्निमरुचिं तथा ॥ ३२ ॥
वायुं पित्तं कफं हन्याद्बल्या वृष्या रसायनी ।

## ಚಂದ್ರಪ್ರಭಾವಟೀ

ಕಾಕೋರ್ಲರಿ, ಬಜೆ, ಭದ್ರಮುಷ್ಠಿ, ಕಿರಾತಕಡ್ಡಿ, ಅಮೃತಬಳ್ಳಿ, ದೇವದಾರು, ಅರಸಿನ, ಅತಿವಿಡಯು, ಮರದರಸಿನ, ಹಿಪ್ಪಲಿಮೂಲ, ಚಿತ್ರಮೂಲ (ಶುದ್ಧಿ), ಕೊತ್ತಂಬರಿ ಬೀಜ, ಅಣಿಲೆಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ಕಾಡುಕರಿಮೆಣಸಿನ ಬೇರು, ವಿಶಾಲರಿ, ಅತ್ತಿಹಿಪ್ಪಲಿ, ಒಣಶುಂಠಿ, ಕರಿಮೆಣಸು, ಹಿಪ್ಪಲಿ, ಮಾಕೀರ ಕಲ್ಲು, ಸರ್ಜಕ್ಷಾರ, ಯವಕ್ಷಾರ, ಸೈಂಧವಲವಣ, ಗಾಜುಲವಣ, ಬಿಡ ಲವಣ, ಇವುಗಳು ಪ್ರತಿಯೊಂದು 9ಕೈಂಜಿಗಳಂತೆ, ತ್ರಿಗಡೆ, ನಾಗದಂತಿ

ಬೇರು, ತವಸಾಲಪತ್ರೆ, ಲವಂಗಚೆಕ್ಕೆ, ಏಲಕ್ಕಿ, ವಂಶಲೋಚನ ಇವುಗಳು ಪ್ರತ್ಯೇಕ 3 ಕ್ಯೆಂಜಿಗಳಂತೆ, ಲೋಹಭಸ್ಮ 6ಕ್ಯೆಂಜಿ, ಸಕ್ಕರೆ 12 ಕ್ಯೆಂಜಿ, ಶುದ್ಧ ಶಿಲಾಜಿತು (ಕಲ್ಮಪ) 24 ಕ್ಯೆಂಜಿ, ಶುದ್ಧ ಗುಗ್ಗುಲು 24 ಕ್ಯೆಂಜಿ, ಈ ಮೊದಲು ಹೇಳಿರುವ ಔಷಧಿಗಳನ್ನು ಚೂರ್ಣಮಾಡಿ ಗುಟಿಕೆಗಳಾಗಿ ಮಾಡ ಬೇಕು. **'ಚಂದ್ರಪ್ರಭಾ'** ಎಂಬ ಹೆಸರುಳ್ಳ ಈ ಮಾತ್ರೆಗಳು 20 ವಿಧದ ಮೇಹರೋಗಗಳನ್ನೂ ಮೂತ್ರಕೃಚ್ಛ್ರ, ಮೂತ್ರಾಘಾತ, ಅಶ್ಮರೀ, ಮಲ ಬದ್ಧತೆ, ಹೊಟ್ಟೆಯುಬ್ಬರಿಸುವಿಕೆ, ನೋವು, ಮೇಹನಗ್ರಂಥಿ, ಅರ್ಬುದ, ಅಂಡವೃದ್ಧಿ, ಪಾಂಡುರೋಗ, ಕಾಮಲಾ, ಹಲೀಮಕ, ಅಂತ್ರವೃದ್ಧಿ, ಸೊಂಟನೋವು, ಶ್ವಾಸ, ಕಾಸ, ವಿಚರ್ಚಿಕಾ, ಕುಷ್ಠ, ಅರ್ಶಸ್ಸು, ತುರಿಸು ವಿಕೆ, ಪ್ಲೀಹ, ಮಹೋದರ, ಭಗಂದರ, ದಂತರೋಗ, ನೇತ್ರರೋಗ, ಸ್ತ್ರೀಯರ ಆರ್ತವ ಸಂಬಂಧವಾದ ರೋಗಗಳು, ಪುರುಷರಿಗೆ ಶುಕ್ಲ ಧಾತುಸಂಬಂಧವಾದ ರೋಗಗಳು, ಅಗ್ನಿಮಾಂದ್ಯ, ರುಚಿಸದಿರುವಿಕೆ, ವಾತ, ಪಿತ್ತ ಕಫವಿಕಾರಗಳು, ಈ ಎಲ್ಲಾ ವಿಧದ ವಿಪತ್ತುಗಳನ್ನು ಜಯಿಸಿ, ಸಪ್ತಧಾತುಗಳನ್ನು ಅಭಿವರ್ಧಿಸುವುದರಲ್ಲಿ ಪ್ರಖ್ಯಾತಿ ಪಡೆದಿರುವುದು.

॥ काङ्कायन गुटिका ॥

चंद्रप्रभायां कर्षस्तु चतुःशाणो विधीयते ।
यवानी जीरकं धान्यं मरिचं गिरिकर्णिका ॥ ३३ ॥
अजमोदोपकुञ्ची च चतुःशाणाः पृथक् पृथक् ।
हिंगु षड्शाणिकं कार्यं क्षारौ लवणपञ्चकम् ॥ ३४ ॥
त्रिवृच्चाष्टमितैः शाणैः प्रत्येकं कल्पयेत्सुधीः ।
दंती शठी पौष्करं च विडङ्गं दाडिमं शिवा ॥ ३५ ॥
चित्रोऽम्लवेतसः शुंठीशाणैः शोडशभिः पृथक् ।
बीजपूररसेनैषां गुहिकां कारयेत् बुधः ॥ ३६ ॥
घृतेन पयसा मद्यैरम्लैरुष्णोदकेन वा ।
पिबेत्कांकायनप्रोक्तां गुटिकां गुल्मनाशिनीं ॥ ३७ ॥

मद्येन वातिकं गुल्मं गोक्षीरेण च पैत्तिकम् ।
मूत्रेण कफगुल्मं च दशमूलैस्त्रिदोषजम् ॥ ३८ ॥
उष्ट्रीदुग्धेन नारीणां रक्तगुल्मं निवारयेत् ।
हृद्रोगं गृहणीं शूलं कृमीनर्शांसि नाशयेत् ॥ ३९ ॥

## ಕಾಂಕಾಯನ ಗುಟಿಕಾ

ಕರ್ಪೂರ (ಶುದ್ಧಿ)ಕ್ಹೆಂಜಿ 3, ಕುರಾಶಾಣಿ, ಓಮು, ಜೀರಿಗೆ, ಕೊತ್ತಂಬರಿ, ಕರಿಮೆಣಸು, ಶಂಖಪುಷ್ಪ, ಅಜಮೋದ, ಸಣ್ಣ ಏಲಕ್ಕಿ (ಚಿಟ್ಟೆಲ), ಇವುಗಳು ಕೈಂಜಿ 3, ಹಿಂಗು ಕೈಂಜಿ 4, ಸರ್ಜಕ್ಷಾರ, ಯುವಕ್ಷಾರ, ಸೈಂಧವಲವಣ, ಗಾಜುಲವಣ, ಬಿಡಲವಣ, ಮೇರುಪ್ಪು, ಸಮುದ್ರ ಉಪ್ಪು, ತ್ರಿಗಡೆ, ಇವುಗಳು ಪ್ರತ್ಯೇಕ ಕೈಂಜಿ 6, ನಾಗದಂತಿ ಬೇರು, ಕಚ್ಚೂರ, ಪುಷ್ಕರಮೂಲ, ವಿಶಾಲರಿ, ದಾಳಿಂಬ ಸಿಪ್ಪೆ, ಅಣಿಲೆಕಾಯಿಯ ಸಿಪ್ಪೆ, ಚಿತ್ರಮೂಲ ಬೇರು(ಶುದ್ಧಿ), ಆಮ್ಲವೇತಸ(ಪುನರ್ಪುಳಿ), ಒಣ ಶುಂಠಿ, ಇವುಗಳು ಬೇರೆಬೇರೆ 12 ಕೈಂಜಿಗಳಂತೆ, ಮಾದಳ ರಸ(ಬೀಜಪೂರ) ದಲ್ಲಿ ಅರೆದು ಮಾತ್ರೆಗಳಾಗಿ ಮಾಡಬೇಕು. ಮದ್ಯದಲ್ಲಿ, ಹಾಲಿನಲ್ಲಿ, ತುಪ್ಪದಲ್ಲಿ, ಹುಳಿರಸದಲ್ಲಿ, ಬಿಸಿನೀರಿನಲ್ಲಿ ಇವುಗಳಲ್ಲಿ ಯಾವುದಾದರೊಂದರಲ್ಲಿ ಸೇವಿಸಲು ಗುಲ್ಮರೋಗವನ್ನು ಹೋಗಲಾಡಿಸುವುದು. ಮದ್ಯದಿಂದ ವಾತಿಕ ಗುಲ್ಮವನ್ನೂ, ದನದ ಹಾಲಿನಿಂದ ಪಿತ್ತಗುಲ್ಮವನ್ನೂ, ಗೋಮೂತ್ರದಿಂದ ಕಫಗುಲ್ಮವನ್ನೂ, ದಶಮೂಲ ಕಷಾಯದಿಂದ ತ್ರಿದೋಷಜನ್ಯ ಗುಲ್ಮವನ್ನೂ, ಒಂಟೆಯ ಹಾಲಿನಿಂದ ಸ್ತ್ರೀಯರಿಗೆ ಸಂಭವಿಸುವ ರಕ್ತಗುಲ್ಮವನ್ನೂ ನಿವೃತ್ತಿಸಿ, ಹೃದ್ರೋಗ, ಗ್ರಹಣೀ, ಶೂಲ, ಕ್ರಿಮಿರೋಗ, ಮೂಲವ್ಯಾಧಿ ಇವುಗಳನ್ನು ಗುಣಪಡಿಸಿ ಶಾಂತಿಯನ್ನೀಯುವುದು.

## ॥ संजीवनी वटिका ॥

विडङ्गं नागरं कृष्णा पथ्यामलबिभीतकौ ।
वचा गुडूची भल्लातं सविषं चात्र योजयेत् ॥ ४० ॥

एतानि समभागानि गोमूत्रेणैव पेषयेत् ।
गुंजाभा वटिका कार्या दद्यादार्द्रकजै रसैः ॥ ४१ ॥
एकामजीर्णगुल्मेषु द्वे विषूच्यां च दापयेत् ।
तिस्रश्च सर्पदष्टे तु चतुस्रः सांन्निपातके ॥ ४२ ॥
वटी संजीवनी नाम्ना संजीवयति मानवम् ।

## ಸಂಜೀವನೀ ವಟಿಕಾ

ವಾಯುವಿಳಂಗ, ಒಣಶುಂಠಿ, ಹಿಪ್ಪಲಿ, ಅಣಿಲೆಕಾಯಿ, ನೆಲ್ಲಿಕಾಯಿ, ಶಾಂತಿಕಾಯಿ, ಬಜೆ, ಅಮೃತಬಳ್ಳಿ, ಗಟ್ಟದಗೇರು ಪಾಷಾಣ (ಶುದ್ಧಿ) ಇವುಗಳು ಸಮಭಾಗ ತೆಗೆದು ಗೋಮೂತ್ರದಲ್ಲಿ ಅರೆದು ಗುಂಜಾಪ್ರಮಾಣ ಮಾತ್ರೆಗಳಾಗಿ ಮಾಡಿ. ಹಸಿಶುಂಠೀರಸದಲ್ಲಿ ಒಂದು ಮಾತ್ರೆಯನ್ನು ಗುಲ್ಮ ರೋಗದಲ್ಲಿಯೂ. ವಿಸೂಚಿಕಾ ರೋಗದಲ್ಲಿ 2 ಮಾತ್ರೆಗಳನ್ನೂ, ಸರ್ಪವಿಷ ದಲ್ಲಿ 3 ಮಾತ್ರೆಗಳನ್ನೂ, ಸನ್ನಿಪಾತಗಳಲ್ಲಿ 4 ಮಾತ್ರೆಗಳನ್ನೂ ಸೇವಿಸ ಬೇಕು. **ಸಂಜೀವನೀ** ಎಂಬ ಈ ಗುಟಿಕೆಯು ಮೇಲೆ ಹೇಳಿದ ರೋಗ ಗಳಲ್ಲಿ ಮನುಷ್ಯರಿಗೆ ಜೀವದಾನವನ್ನೀಯುವುದು.

## ಯೋಗರಾಜಗುಗ್ಗುಲು

ಒಣಶುಂಠಿ, ಹಿಪ್ಪಲಿಮೂಲ, ಹಿಪ್ಪಲಿ, ಕಾಡುಕರಿಮೆಣಸಿನ ಬೇರು, ಚಿತ್ರಮೂಲ ಬೇರು(ಶುದ್ಧಿ), ತುಪ್ಪದಲ್ಲಿ ಹುರಿದ ಹಿಂಗು, ಓಮುಕಾಳು, ಅಣಿಲೆಕಾಯಿ ಸಿಪ್ಪೆ, ಜೀರಿಗೆ, ಕರಿಜೀರಿಗೆ, ಅರೇಣುಕ, ಕೊಡಗಪಾಲರಿ, ಪಾಡಾವಳಿ ಬೇರು, ವಾಯುವಿಳಂಗ, ಅತ್ತಿಹಿಪ್ಪಲಿ, ಕಟುಕರೋಹಿಣಿ, ಅತಿವಿಡಯ, ಕಿರುತೇಗು ಬೇರು, ಬಜೆ, ಪೆರಿಕುರುಂಬ, ಇವುಗಳು ಪ್ರತ್ಯೇಕ ಕೈಂಜಿ 3ರಂತೆ, ಈ ಮೊದಲು ಹೇಳಿದ ಮದ್ದುಗಳ ದ್ವಿಗುಣಭಾಗ ತ್ರಿಫಲೆ ಗಳ ಸಿಪ್ಪೆ, ಇವುಗಳನ್ನೆಲ್ಲಾ ಸೇರಿಸಿ ಪುಡಿಮಾಡಿ, ಅಷ್ಟೇ ಗುಗ್ಗುಲು (ಶುದ್ಧಿ),

ಶ್ಲೋಕ:–[ **ವಂಗಂ ರೌಪ್ಯಂ ಚ ನಾಗಂಚ ಲೋಹಸಾರಸ್ತಥಾಭ್ರಕಂ ।**
**ಮಂಡೂರಂ ರಸಸಿಂಧೂರಂ ಪ್ರತ್ಯೇಕಂ ಪಲಸಮ್ಮಿತಂ ॥** ]

ವಂಗ, ಬೆಳ್ಳಿ, ನಾಗ, ಲೋಹ, ಅಭ್ರಕ, ಮಂಡೂರ, ರಸಸಿಂಧೂರ, ಇವುಗಳ ಭಸ್ಮ ತೊಲೆ 4, ಇವುಗಳನ್ನು ಕೂಡಿಸಿ ಗುಡಪಾಕಮಾಡಿ ತುಪ್ಪದಿಂದ ಲೇಪಿಸಿದ ಹಳೇ ಪಾತ್ರದಲ್ಲಿ ಸೂಕ್ಷ್ಮಿಸಿಟ್ಟು ¾ ಕೈಂಜಿಗಳಂತೆ ಮಾತ್ರೆಗಳಾಗಿ ಮಾಡಬೇಕು. **ಯೋಗರಾಜಗುಗ್ಗುಲು** ಎಂದು ಹೆಸರುಳ್ಳ ಈ ಗುಟಕೆಗಳು ತ್ರಿದೋಷ ಶಮನಕರವಾದ ರಸಾಯನವಾಗಿರುವುದು. ಇದರ ಸೇವನಾಕಾಲದಲ್ಲಿ ಮೈಥುನ, ಆಹಾರ, ಪಾನ ಮೊದಲಾದುವುಗಳ ತ್ಯಾಗವಿರುವುದಿಲ್ಲ. ಎಲ್ಲಾ ಬಗೆಯ ವಾತಗಳು, ಕುಷ್ಠ, ಅರ್ಶಸ್ಸು, ಗ್ರಹಣೀ, ಪ್ರಮೇಹ, ವಾತರಕ್ತ, ನಾಭಿಶೂಲ, ಭಗಂಧರ, ಉದಾವರ್ತ, ಕ್ಷಯ, ಗುಲ್ಮ, ಅಪಸ್ಮಾರ, ಉರೋಗ್ರಹ, ಅಗ್ನಿಮಾಂದ್ಯ, ಶ್ವಾಸಕಾಸ ಅರುಚಿಗಳನ್ನು ಹೋಗಲಾಡಿಸುವುದು. ಪುರುಷರಿಗಿರುವ ಶುಕ್ಲದೋಷಗಳನ್ನೂ, ಸ್ತ್ರೀಯರ ರಕ್ತದೋಷಗಳನ್ನೂ ನಿವೃತ್ತಿಸಿ, ಸಂತಾನಲಾಭವನ್ನೀಯುವುದು. ಬಂಜೆಯರಿಗೆ ಗರ್ಭದಾನವನ್ನೂ ಕೊಡುವುದು. ಮಹಾರಾಸ್ನಾದಿ ಕಷಾಯದಿಂದ ವಾತರೋಗಗಳೂ, ಕಾಕೋಲ್ಯಾದಿ ಕ್ವಾಥದಿಂದ ಪಿತ್ತರೋಗಗಳೂ, ಆರಗ್ವಧ ಕಷಾಯದಿಂದ ಕಫರೋಗಗಳೂ, ದಾರ್ವ್ಯಾದಿ ಕ್ವಾಥದಿಂದ ಮೇಹರೋಗಗಳೂ, ಗೋಮೂತ್ರದಿಂದ ಪಾಂಡುರೋಗಗಳೂ, ಜೇನುತುಪ್ಪದಿಂದ ಮೇದೋವೃದ್ಧಿಯೂ, ಕೈಬೇವಿನ ಕೆತ್ತೆಯ ಕಷಾಯದಿಂದ ಕುಷ್ಠರೋಗಗಳೂ, ಅಮೃತಬಳ್ಳಿಯ ಕಷಾಯದಿಂದ ವಾತರಕ್ತಗಳೂ, ಹಿಪ್ಪಲಿ ಕಷಾಯದಿಂದ ಶೋಫ-ಶೂಲಗಳೂ, ಪಾದರಿ(ಪಾಟಲಾ) ಬೇರಿನ ಕಷಾಯದಿಂದ ಇಲಿಗಳ ವಿಷಗಳೂ, ತ್ರಿಫಲಾಕಷಾಯದಿಂದ ಭಯಂಕರವಾದ ನೇತ್ರರೋಗಗಳೂ, ಪುನರ್ನವಾ ಕಷಾಯದಿಂದ ಎಲ್ಲಾ ಉದರರೋಗಳೂ ಈ ಮಾತ್ರೆಯ ಸೇವನೆಯಿಂದ ನಿವೃತ್ತಿಹೊಂದುವುವು ಮತ್ತು ಆರೋಗ್ಯಲಾಭವೂ ಉಂಟಾಗುವುದು.

**॥ पथ्यादि वटिका ॥**

पथ्यापुनर्नवमहौषधभृंगराज ।
कर्कंधुपत्रतिलदीप्यबलानलैश्च ॥

सर्वैःसमं सकलभावित किट्ट चूर्णम् ।
तक्रे पिबेदखिलपांडुगदे रहस्यम् ॥ ४३ ॥

## ಪಥ್ಯಾದಿ ವಟಿಕಾ

ಅಣಲೆಕಾಯಿ ಸಿಪ್ಪೆ, ಪುನರ್ನವೆ ಬೇರು, ಒಣಶುಂಠಿ, ಗರ್ಗದ ಬೇರು, ಬುಗರಿ ಎಲೆ, ಎಳ್ಳು, ಓಮು, ಕಡಿರಬೇರು, ಚಿತ್ರಮೂಲ ಬೇರು (ಶುದ್ಧಿ), ಇವುಗಳೆಲ್ಲವನ್ನೂ ಚೂರ್ಣಿಸಿ ಸಮಭಾಗ ಪುರಾಣಕಿಟ್ಟವನ್ನೂ ಕೂಡಿಸಿ, ಅರೆದು ಗುಟಕೆಗಳಾಗಿ ಮಾಡಿ ತಕ್ರದ ಅನುಪಾನದಿಂದ ಸೇವಿಸಲು ಎಲ್ಲಾ ಪಾಂಡುರೋಗಗಳು ಶಮನವಾಗುವುವು.

॥ विरेचन वटिका ॥

त्रिकटुत्रिफलामांसी कारवी कटुका त्रिवृत् ।
विडङ्गश्च समांशानि जेपाळं सकलांशकम् ॥ ४४ ॥
त्रिफलाक्वाथसम्पिष्टं गुडेनोष्णोदकेन वा ।
आर्द्रकस्वरसेनापि पेयं सम्यक् विरेचयेत् ॥ ४५ ॥

## ವಿರೇಚನ ವಟಿಕಾ

ಒಣಶುಂಠಿ, ಕರಿಮೆಣಸು, ಹಿಪ್ಪಲಿ, ಅಣಲೆಕಾಯಿ, ಶಾಂತಿಕಾಯಿ, ನೆಲ್ಲಿಕಾಯಿಸಿಪ್ಪೆ, ಜಟಾಮಾಂಸಿ, ಕರಿಜೀರಿಗೆ, ಕಟುಕರೋಹಿಣಿ, ವಿಶಾಲಂ, ಇವುಗಳು ಸಮಭಾಗ, ಶುದ್ಧಮಾಡಿದ ಜೇಪಾಳದ ಬೀಜ ಚೂರ್ಣದ ಸಮಭಾಗ ಕೂಡಿಸಿ, ತ್ರಿಫಲಾ ಕಷಾಯದಲ್ಲಿ ಭಾವನೆಮಾಡಿ ಗುಂಜಾಪ್ರಮಾಣ ಮಾತ್ರೆಗಳಾಗಿ ಮಾಡಿ ಬೆಲ್ಲದಲ್ಲಿಯಾಗಲೀ, ಬಿಸಿನೀರಿನಲ್ಲಿಯಾಗಲೀ, ಹಸಿ ಶುಂಠೀರಸದಲ್ಲಿಯಾಗಲೀ ಸೇವಿಸಲು ವಿರೇಚನೆಯುಂಟಾಗುವುದು.

॥ दुरालभादि वटिका ॥

दुरालभा च मुस्ता च साजमोजा हरीतकी ।
पिप्पली पिप्पलीमूलं चित्रकाहस्तिपिप्पली ॥ ४६ ॥

एतेषां कार्षिकान् भागान् त्रिवृता च समं घृतान् ।
शृङ्गिवेरपलं चैव विंशत् गुडपलं तथा ॥ ४७ ॥
अक्षमात्रेण गुडिकां भक्षयेत् प्रातरुत्थितः ।
पार्श्वशूलेप्युदावर्ते दुर्नामे सुहितं परम् ॥ ४८ ॥

## ದುರಾಲಭಾದಿ ವಟಿಕಾ

ಬಳ್ಳಿಅಕಿರೆ ಬೇರು, ಭದ್ರಮುಷ್ಟಿ, ಓಮುಕಾಳು, ಅಣಿಲೆಕಾಯಿ ಸಿಪ್ಪೆ, ಹಿಪ್ಪಲಿ, ಕಾಡುಹಿಪ್ಪಲಿ ಬೇರು, ಚಿತ್ರಮೂಲ ಬೇರು, ಅತ್ತಿಹಿಪ್ಪಲಿ, ಇವುಗಳು, ಪ್ರತಿಯೊಂದು 3ಕೈಂಜಿಗಳಂತೆ, ಇವುಗಳ ಸಮಭಾಗ ತ್ರಿಗಡೆ, ಶುಂಠಿ 1ಪಲ, ಬೆಲ್ಲ 20ಪಲ, ಶಾಂತಿಕಾಯಿ ಗಾತ್ರದ ಗುಟಿಕೆಗಳಾಗಿ ಮಾಡಿ ಶೂಲ, ಉದಾವರ್ತ, ಅರ್ಶಸ್ಸು ಇವುಗಳಿಗೆ ಉಪಯೋಗಿಸುವುದು.

॥ बिल्वादि वटी ॥

बिल्वस्य मूलं सुरसस्य पुष्पं ।
फलं करञ्जस्य नतं सुराह्वं ॥
फलत्रिकं व्योषनिशाद्वयं च ।
बस्तस्य मूत्रेण सुसूक्ष्मपिष्टम् ॥ ४९ ॥
भुजङ्गलूतोंदुरवृश्चिकाद्यै ।
विसूचिकाजीर्णगरज्वरैश्च ॥
आर्तांश्नरान् भूतविषार्दितांश्च ।
स्वस्थीकरोत्यञ्जनपाननस्यैः ॥ ५० ॥

## ಬಿಲ್ವಾದಿ ವಟಿ

ಬಿಲ್ವಪತ್ರೆ ಬೇರು, ತುಳಸೀ ಪುಷ್ಪ, ಕೊಂಗುರ್ಮರದ ಬೀಜ, ತಗರ, ದೇವದಾರು, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಕರಿಮೆಣಸು, ಹಿಪ್ಪಲಿ, ಶುಂಠಿ, ಅರಸಿನ, ಮರದರಸಿನ ಸಿಪ್ಪೆ, ಇವುಗಳನ್ನು ಸಮಭಾಗ ಸೇರಿಸಿ ಚೂರ್ಣಿಸಿ ಆಡಿನ ಮೂತ್ರದಲ್ಲಿ ಅರೆದು,

ಮಾತ್ರೆಗಳಾಗಿ ಮಾಡಿ, ಹಾವು, ಚೇಳು ಹುಳು, ಇಲಿ, ಚೇಳು, ಇವುಗಳ ಕಡಿತಗಳಿಗೂ, ವಿಸೂಚಿಕಾ (ಕೊಲೆರಾ), ಅಜೀರ್ಣ, ಕೃವಿಷ, ಇವು ಗಳಿಂದುಂಟಾದ ಜ್ವರ, ಭೂತ, ಗ್ರಹ, ಇತ್ಯಾದಿಗಳಿಂದ ವಿಪರೀತರಾದ ಮನುಷ್ಯರಿಗೆ, ಯುಕ್ತಾನುಪಾನದಿಂದ ಸೇವನಾ, ಅಂಜನ, ನಸ್ಯಾದಿ ವಿಧಿ ಗಳಿಂದ ಸುಖಕಾರಿಯಾಗಿ ಈ **ಬಿಲ್ವಾದಿ ಮಾತ್ರೆಯು** ಪರಿಣಮಿಸುವುದು.

### ಮುಕ್ತಾ ಮುಕ್ಕುಟಿಕಾದಿ ಮಾತ್ರೆಯ ಯೋಗವು

ಅಣಿಲೆಕಾಯಿ ಸಿಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಕರಿ ಮೆಣಸು, ಹಿಪ್ಪಲಿ, ಶುಂಠಿ, ಜೀರಿಗೆ, ಕರಿಜೀರಿಗೆ, ಬಜೆ, ಕಿರಾತಕಡ್ಡಿ, ಪಚ್ಚೆಕರ್ಪೂರ, ಜಾಯಿಕಾಯಿ, ಸೈಂಧವಲವಣ, ಚೆನ್ನಿನಾಯಕ, ಲವಂಗ, ಬೆಳ್ಳುಳ್ಳಿ, ತಕ್ಕೋಲ, ಕಂಕುಷ್ಠ, ಲವಂಗಚಕ್ಕೆ, ಹಿಂಗು, ಓಮುಕಾಳು, ಇವುಗಳನ್ನು ಸಮತೂಕ ತೆಗೆದು ಕರಿನೆಕ್ಕಿರಸದಲ್ಲಿ ಅರೆದು, ಸಾಧಾರಣ ಬಿಸಿನೀರಿನಿಂದ ಸೇವಿಸಲು ಸನ್ನಿಪಾತಜ್ವರವು ಶಮನ ವಾಗುವುದು.

॥ खदिरादि वटिका ॥

द्वे तुले खदिरात् सारादारिमेदस्त्वचस्तुलाम् ।
प्रक्षाळ्य जर्जरीकृत्य चतुर्द्रोणे जले पचेत् ॥ ५१ ॥

पादशिष्टं कषाये तु संक्षाळ्य विपचेच्छनैः ।
ततस्तस्मिन् घनीभूते चूर्णिकृत्वाक्षभागिकम् ॥ ५२ ॥

चंदनं पद्मकोशीरं मञ्जिष्ठा धातकी घनम् ।
प्रपौण्डरीकं यष्ट्याह्वं वदैला पद्मकेसरम् ॥ ५३ ॥

लाक्षा रसाञ्जनं मांसी त्रिफलालोध्रवालकम्
रजनीद्वय शैलेयं समंगा कट्फलं वटम् ॥ ५४ ॥

यवाक्षागुरुपत्तंगगैरिकाञ्जनमावपेत् ।
लवङ्गजातीतक्कोलं जातीकोशान् पलोन्मितान् ॥ ५५ ॥

कर्पूरं कुडवं चापि पुनः शीतेऽवतारिते ।
ततश्च गुटिकां कुर्यात् शुष्कां चास्येन धारयेत् ॥ ५६ ॥
तैलं चानेन कल्केन कषायेण च साधयेत् ।
दंतास्यगलरोगेषु सर्वेष्वेतत् परायणम् ॥ ५७ ॥

## ಖದಿರಾದಿ ವಟಿಕಾ

ಕಾಚಿ ತಿರುಳು ಪಲ 200, ಅರಿಮೇದ ಪಲ 100, ಜಜ್ಜಿ 64 ಕುತ್ತಿ ಕಷಾಯದಲ್ಲಿ ಕುದಿಸಿ ಬತ್ತಿಸಿ ಕುತ್ತಿ 16, ಚೂರ್ಣಕ್ಕೆ ಪ್ರತಿಯೊಂದು ಬಗೆಯು 3 ಕ್ವೆಂಚಿಗಳಂತೆ:—ಚಂದನ, ಪದ್ಮಕ, ಲಾಮಂಚ, ಮಂಜಿಷ್ಟ ಕಡ್ಡಿ, ಧಾತಕೀಕುಸುಮ, ಭದ್ರಮುಷ್ಠಿ, ಪುಂಡರೀಕ, ಜ್ಯೇಷ್ಠಮಧು, ಸಣ್ಣ ಏಲಕ್ಕಿ, ಪದ್ಮಕೇಸರ, ಕೋಲರಗು, ರಸಾಂಜನ, ಜಟಾಮಾಂಸಿ, ನೆಲ್ಲಿ ಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ಅಣಿಲೆಕಾಯಿ ಸಿಪ್ಪೆ, ಲೋಧ್ರಚಕ್ಕೆ, ಇರುವೇರಿ ದಂಡು, ಅರಸಿನ, ಮರದರಸಿನ ಸಿಪ್ಪೆ, ಕಲ್ನಾರು, ಪರಙ್ಗಂಡ ಬೇರು, ಕುಮುದ ಬೇರು, ಗೋಳಿಮರದ ಕೆತ್ತೆ, ಬಳ್ಳಿಅಕಿರೆ ಬೇರು, ಅಗಿಲು ಗಂಧ, ಪತ್ತಂಗ ಬೇರು, ಕಾವಿಮಣ್ಣು, ಅಂಜನಕಲ್ಲು, ಲವಂಗಚಕ್ಕೆ, ಜಾಯಿಕಾಯಿ, ತಕ್ಕೋಲ, ಇವುಗಳನ್ನು ಚೂರ್ಣಿಸಿ, ಹಿಂದೆ ಹೇಳಿದ ಕಷಾಯವು ದಪ್ಪವಾಗುವ ವರೆಗೆ ಕುದಿಸಿ, ಮೇಲಿನ ಚೂರ್ಣವನ್ನು ಸೇರಿಸಿ, ಲೇಹ್ಯದ ಪಾಕದಲ್ಲಿಳಿಸಿ, 4 ತೊಲೆ ಕಸ್ತೂರಿಯನ್ನೂ ಕೂಡಿಸಿ ಬಿಸಿಯಾರಿದ ಮೇಲೆ 16 ತೊಲೆ ಕರ್ಪೂರವನ್ನು ಸೇರಿಸಿ ಮಾತ್ರೆಗಳಾಗಿ ಮಾಡಬೇಕು. ಈ ಮಾತ್ರೆಗಳಿಗೆ **ಖದಿರಾದಿ ವಟಿಕಾ** ಎಂದು ಹೆಸರು. ಹಲ್ಲುಗಳಲ್ಲಿ ಸಂಭವಿಸತಕ್ಕ ಎಲ್ಲಾವಿಧದ ರೋಗಗಳನ್ನೂ ಹೋಗಲಾಡಿಸಿ ಮುಖದಲ್ಲಿಯೂ ಕಂಠರೋಗಗಳಲ್ಲಿಯೂ ಉಂಟಾಗುವ ರೋಗಗಳಿಗೆ ಬಹಳ ಉಪಕಾರಿಯು.

## ಬಸ್ತ್ಯಾಮಯಾಂತಕ ಮಾತ್ರೆ

ತೃಣಪಂಚಮೂಲ, ಹ್ರಸ್ವಪಂಚಮೂಲ, ಜೀವನಪಂಚಮೂಲ, ಮಧ್ಯಮಪಂಚಮೂಲ, ಕೂಷ್ಮಾಂಡ, ಸೌತೆಕಾಯಿ, ಚೆರುಚೀರ (ಕೆಂಪು

ಅರಿವೆ), ಪಾಷಾಣಭೇದಿ, ತಾರ್ತಾವಲ್, ಯೂಥಿಕಾ(ಕುರುವೊಯಿ ಮುಳ್ಳು), ನೆಲನೆಲ್ಲಿ, ಕಲ್ಲೂರ್ವಞಿ, ತೇಟಾಂಪರಳು, ಒಣಶುಂಠಿ, ಏಲಕ್ಕಿ, ಜ್ಯೇಷ್ಠಮಧು, ಮಿಾನಂಗಾಣಿ, ಹಿಪ್ಪಲಿ, ಕೊತ್ತುಂಬರಿ ಬೀಜ, ಕರಿನೆಕ್ಕಿ, ಪ್ರಸಾರಿಣೀ, ಓರಿಲತ್ತಾಮರ, ದ್ರಾಕ್ಷೆ, ಬೆಟ್ಟುಕರಂಡೆ ಬೇರು, ಚಂದನ, ಹತ್ತಿ ಓಡು, ಲಾಮಂಚ, ಇರಿವೇರಿದಂಡು, ನಾಯಿಸೊಣಗು, ಬಿಲ್ವ ಪತ್ರೆ ಕಾಯಿ ಬಣುಪು, ಪಾಚೋಟಿ ಕೆತ್ತೆ, ಬುಗರಿ ಬೀಜ, ಸಣ್ಣ ಹರಳು ಬೀಜದ್ಪತಿರುಳು, ಅಶ್ವಗಂಧಿ, ಹುರುಳಿ, ಮರದರಸಿನ, ಯವಧಾನ್ಯ, ಬಯಲ ಮುಳ್ಳು ಬೀಜ, ನೀರ್ವಾದಳ ಕೆತ್ತೆ, ಶರಪುಂಖ, ಕರಿಕುರಿಂಞಿ, ಪೆರಿ ಕುರುಂಬ, ಕದಳೀಬಾಳೆ ಗಡ್ಡೆ, ಬೇಲೀ ಪರಿತ್ತಿ, ಕಲ್ಮದ, ಕರುವ ಗಡ್ಡೆ, ಆನೆ ಹಿಪ್ಪಲಿ, ಎಳ್ಳುಕಾಳು, ಸಹಸ್ರವೇಧಿ, ಸಣ್ಣಉತ್ತರಣೆ ಬೀಜ, ನಾಮದಬೇರು, ತಾವರೆ ಕುಸುಮ, ನೀರುಳ್ಳಿ, ಚಿಟ್ಟೀಂತಿನ ಬೇರು (ಸಣ್ಣ ಈಂದಿನ ಬೇರು), ಮಂಜಿಷ್ಠಕಡ್ಡಿ, ದೇವದಾರು, ಜೀರಿಗೆ, ಕರ್ಕಾಟಕ ಶೃಂಗೀ, ಕುಮುದ ಬೇರು, ಕಾವಿಮಣ್ಣು, ಪದ್ಮಕ, ಆಡ್ಸೋಗೆ, ಅಮೃತಬಳ್ಳಿ ಸತ್ವ, ಕೂವೆ ಗಡ್ಡೆ ಸತ್ವ, ಭದ್ರಮುಷ್ಠಿ ಸತ್ವ, ನೆಲತಾಳಿಗಡ್ಡೆ ಸತ್ವ, ನೆಲ್ಲಿಕಾಯಿ ಸತ್ವ, ನೆಗ್ಗಿನ ಮುಳ್ಳು, ಎಳನೀರು, ಶತಾವರಿ ರಸ, ಕಬ್ಬಿನ ರಸ, ಕೂಷ್ಮಾಂಡದ ಸ್ವರಸ, ಸೌತೆಕಾಯಿಯ ಸ್ವರಸ, ತ್ರಿಫಲಾ ಕಷಾಯ, ಗಜುಗದ ಕಾಯಿ, ಕಾಡಿಜಲ, ಹುರುಳಿ ಕಷಾಯ, ತಾಲಘಟೀ ರಸ, ಕರಿಂಬನಇಳನೀರ್, ವೆಳ್ಳಂ ಇವುಗಳಿಂದ ಈ 'ಬಸ್ತ್ಯಾಮಯಾಂತಕ' ಮಾತ್ರೆಗಳನ್ನು ತಯಾರಿಸಿ ಸೇವಿಸಿದರೆ ಮೂತ್ರಕೃಚ್ಛ್ರ, ಅಶ್ಮರೀ, ಉರಿಮೂತ್ರ, ಮೂತ್ರವು ಕೆಂಪಾಗಿರು ವಿಕೆ, ಅಸ್ಥಿಸ್ರಾವ, ರಕ್ತಸ್ರಾವ, ಶುಕ್ಲಸ್ರಾವ, ಸೋಮರೋಗ, ಇವುಗಳನ್ನು ನಿಲ್ಲಿಸುತ್ತದೆ. ನೆಲ್ಲಿಕಾಯಿ ಕ್ವಾಥದಿಂದ ಸೇವಿಸಿದರೆ ಪ್ರಮೇಹವನ್ನು ಶಮಿಸುವುದು. ಹಾಲಿನ ಅನುಪಾನದಿಂದ ಸದಾ ಉಪಯೋಗಿಸಿದರೆ, ಶುಕ್ಲವೃದ್ಧಿಯುಂಟಾಗುವುದು.

## ಮರ್ಮಗುಟಿಕೆ

ನೆಲ್ಲಿಕಾಯಿ ಸತ್ವ, ಶತಾವರಿಗಡ್ಡೆ ಸತ್ವ, ಅಮೃತಬಳ್ಳಿಯ ಸತ್ವ, ಭದ್ರಮುಷ್ಠಿ ಸತ್ವ, ನೆಲತಾಳಿಗಡ್ಡೆಯ ಸತ್ವ, ಕಾಡುಗೆಣಸಿನ ಸತ್ವ,

ಕುರುವಿಗಡ್ಡೆಯ ಸತ್ವ, ಕೂವೆಗಡ್ಡೆಯ ಸತ್ವ, ಚಂದನ, ರಕ್ತಚಂದನ, ಜ್ಯೇಷ್ಠಮಧು, ಇವುಗಳು ತೊಲೆ 16ರಂತೆ ಚೂರ್ಣಿಸಿ, ಕಲ್ನಾರು, ಕಲ್ಮದ ಇವು ಪಲ1-1, ಇವುಗಳನ್ನು ಪುಡಿಮಾಡಿ ಸೇರಿಸಿ, ಇವುಗಳನ್ನು ಅರೆಯುವುದಕ್ಕಿರುವ ಕಷಾಯ:-ಅತ್ತಿ, ಅಶ್ವತ್ಥ, ಗೋಳಿ, ಕಿನ್ನಿಗೋಳಿ, ಇವುಗಳ ಪಲ್ಲವಗಳ ಕಷಾಯ ಪ್ರಸ್ಥ 1, ದೂರ್ವಾ(ಕದಿಕೆಹುಲ್ಲು), ಪಾಷಾಣಭೇದಿ, ಕಲ್ಲೂರ್ವಣಿ ಬೇರು, ಪ್ರಸಾರಿಣೀ, ತೃಣಪಂಚಮೂಲ, ಇವುಗಳು 4-4 ಪಲ, ಇವೆರಡು ಬಗೆಗಳನ್ನು ಬೇರೆಬೇರೆಯಾಗಿ ಮಣ್ಣಿನಪಾತ್ರದಲ್ಲಿ ಕಷಾಯವಿಟ್ಟು, ಉದ್ದು, ಹೆಸರು ಇವುಗಳು ಪ್ರಸ್ಥ 1-1, ಈ 3 ಬಗೆಯ ಕಷಾಯುಗಳನ್ನೂ ಬೇರೆಬೇರೆಯಾಗಿ ಕುದಿಸಿ, 8ನೇ ಒಂದು($\frac{1}{8}$) ಅಂಶ ನಿಲ್ಲಿಸಿ, ಗಾಳಿಸಿ, 3 ಬಗೆಗಳನ್ನೂ ಒಂದರಲ್ಲೇ ಕೂಡಿಸಿ ಅದರಲ್ಲಿ ಪುಡಿಮಾಡಿದ ಮದ್ದುಗಳನ್ನು ಕೂಡಿಸಿ, ಕಷಾಯ ಜಲವು ಮುಗಿಯುವವರೆಗೆ ಅರೆದು, ಹಸಿನೆಲ್ಲಿಕಾಯಿಯ ಪ್ರಮಾಣ ಮಾತ್ರೆಗಳಾಗಿ ಮಾಡಿ ಒಣಗಿಸಿ, ಅವುಗಳಿಂದ 1 ಮಾತ್ರೆಯನ್ನು ತೆಗೆದು ಪುಡಿಮಾಡಿ ಬೆಣ್ಣೆಯಲ್ಲಿ ಅರೆದು ಎಣ್ಣೆಯಂತೆ ಮಾಡಿ, ಎಲ್ಲಾ ಮರ್ಮಸ್ಥಳಗಳಿಗೆ ಲೇಪಿಸುವುದಕ್ಕೂ ಸೇವಿಸುವುದಕ್ಕೂ ತಲೆಗಿಡುವುದಕ್ಕೂ ಬಹಳ ವಿಶೇಷ. ಕೆಂಗಣ್ಣು ಎಂಬ ರೋಗಕ್ಕೆ ಹಿಂದೆ ಹೇಳಿದಂತೆ ತಲೆಗೆ ಹಚ್ಚಬೇಕು. ಅಸ್ಥಿಸ್ರಾವ, ಮೂತ್ರಕೃಚ್ಛ್ರ, ಇವುಗಳಿಗೆ ಕುದಿಸಿದ ನೀರಿನಿಂದ ಸೇವಿಸಬೇಕು, ಮತ್ತು ಎಲ್ಲಾ ಬಗೆಯ ಉಷ್ಣವಿಕಾರಗಳಲ್ಲಿ ಪಿತ್ತಪ್ರಧಾನವಾದ ರೋಗಗಳಲ್ಲಿ ವಿಶೇಷ ಪ್ರಯೋಜನಕಾರಿಯು.

## ಶಿರಸ್ತೋದ ಗುಟಿಕಾ

ಮಣಿಕುಂಡ್ಲಿಕ (ಚೆನ್ನಿನಾಯಕ), ರಕ್ತಬೋಳ, ಇವುಗಳು 3 ಪಲಗಳಂತೆ ಕೂಡಿಸಿ ಕಲ್ನಾರು, ಕಂಡಿವೆಣ್ಣೆ, ಸಹಸ್ರವೇಧಿ ಇವುಗಳನ್ನು ತೂಕಮಾಡಿ ಸೇರಿಸಿ, ಕುಮಾರೀ ಸ್ವರಸ(ಚೋಳಿರಸ)ದಲ್ಲಿ ಅರೆದು ಯಥಾವಸ್ಥೆ ಪ್ರಯೋಗಿಸಬೇಕು. ವಾತಾಧಿಕ್ಯದಲ್ಲಿ ಎಳ್ಳೆಣ್ಣೆಯಿಂದಲೂ ಪಿತ್ತಾಧಿಕ್ಯದಲ್ಲಿ ಘೃತದಿಂದಲೂ, ಕಫಾಧಿಕ್ಯದಲ್ಲಿ ತೆಂಗಿನ ಹಾಲಿನಿಂದಲೂ

ಕೂಡಿಸಿ, ಲಲಾಟಭಾಗಕ್ಕೆ ಲೇಪಿಸುವುದರಿಂದ ಎಲ್ಲಾ ಬಗೆಯ ಶಿರೋರೋಗಗಳು ಉಪಶಮನವಾಗುವುವು.

## ಮತ್ತೊಂದು ಬಗೆಯ ಮರ್ಮಗುಟಿಕಾ

ನೆಲಕುಂಬುಳಗಡ್ಡೆಯ ಸತ್ವ, ಜೀವಂತಿ(ಬುಗುಡಿ ಹೂ)ಗಡ್ಡೆಯ ಸತ್ವ, ಶತಾವರಿ ಸತ್ವ, ಭದ್ರಮುಷ್ಠಿ ಸತ್ವ, ನೆಲತಾಳಿಗಡ್ಡೆಯ ಸತ್ವ, ಕುರುವಿಗಡ್ಡೆಯ ಸತ್ವ, ನೆಲ್ಲಿಕಾಯಿ ಸತ್ವ, ನಾಮದಬೇರಿನ ಸತ್ವ, ಅಮೃತ ಬಳ್ಳಿಯ ಸತ್ವ, ದೂರ್ವಾ ಸತ್ವ ಪ್ರತ್ಯೇಕ ತೊಲೆ 64, ಜ್ಯೇಷ್ಠಮಧು, ಚಂದನ, ರಕ್ತಚಂದನ ಇವುಗಳನ್ನು ಬೇರೆಬೇರೆಯಾಗಿ (ಚಾಣ)ಕಲ್ಲಿನ ಮೇಲೆ ಅರೆದು ತೊಲೆ 16ರಂತೆ, ಸಹಸ್ರವೇಧಿ, ಕಲ್ಹಾರು, ಕಲ್ಮದ, ಹಾಲುನಿರ್ವಿಷ, ಗರುಡಪಚ್ಚೆ, ಇವುಗಳು ಪ್ರತಿಯೊಂದು ಅರ್ಧಪಲ, ಅರೆಯುವ ಕಷಾಯಕ್ಕೆ ಪ್ರಸಾರಿಣಿ, ಪೊನ್ನಂಗಾಣಿ, ಪೆರಿಕುರುಂಬ, ನಾಲ್ಕುಮರಗಳ ಮೊಗ್ಗು, ತೇಟಾಂಪರಳು, ನೆಗ್ಗಿನಮುಳ್ಳು, ಇರಿವೇರಿದಂಡು, ಲಾಮಂಚ, ಇವುಗಳು ಪ್ರತಿಯೊಂದು 2 ಪಲಗಳಂತೆ ಕೂಡಿಸಿ 12 ಪ್ರಸ್ಥ ನೀರಿನಲ್ಲಿ ಕುದಿಸಿ, ಚತುರ್ಥಾಂಶ ಬತ್ತಿಸಿ ಅರೆದು ನಾಲ್ಕುಮರಗಳ ಕೆತ್ತೆ, ಪಾಚೋಟಿ ಕೆತ್ತೆ, ಪುಲ್ಲಾನಿ, ಪೆರುಮರತ್ತೊಲ್, ಕರಿಂಗಾರ್ ಕೆತ್ತೆ, ಮರದರಸಿನ ಸಿಪ್ಪೆ, ಪೂರ್ವದಲ್ಲಿ ಹೇಳಿದಂತೆ ಕೂಡಿಸಿ, ಕಲ್ಲೂರ್ವಞಿ ಬೇರು ಕೂಡಾ 8 ಪಲ ಕೂಡಿಸಿ, 16 ಪ್ರಸ್ಥ ಜಲದಲ್ಲಿ ಕಷಾಯಮಾಡಿ ಅರೆದು ಮೂರನೇ ಬಾರಿ ಉದ್ದು ಮತ್ತು ಹೆಸರು ಇವುಗಳ ಕಷಾಯದಲ್ಲಿ ಅರೆದು ತಯಾರಿಸಿದ ಈ ಮರ್ಮಗುಟಿಕೆಯನ್ನು ಎಲ್ಲಾ ವಿಧದ ಮರ್ಮವಿಕಾರಗಳಲ್ಲಿ ಉಪಯೋಗಿಸುವುದು.



# ॥ अथ अवलेह कल्पनाः ॥

# ॥ ಅಥ ಅವಲೇಹಕಲ್ಪನಾ ಯೋಗಃ ॥

---

## ॥ कंटकार्याद्यव लेहः ॥

कंटकारीतुलां नीरद्रोणे पक्त्वाक षायकम् ।
पादशेषं गृहीत्वा च तस्मिंश्चूर्णानि दापयेत् ॥ १ ॥
पृथक्पलानि चैतानि गुडूचीचव्यचित्रकाः ।
मुस्तं कर्कटशृङ्गी च त्र्यूषणं धन्वयासकः ॥ २ ॥
भार्ङ्गी रास्ना शठी चैव शर्करा पलविंशतिः ।
प्रत्येकं च पलान्यष्टौ प्रदद्याद्घृततैलयोः ॥ ३ ॥
पक्त्वा लेहत्वमानीय शीते मधुपलाष्टकम् ।
चतुष्पलं तुगाक्षीर्याः पिप्पलीनां चतुष्पलम् ॥ ४ ॥
क्षिपत्वा निदध्यात्सुदृढे मृण्मये भाजने शुभे ।
लेहोऽयं हंति हिक्कार्तिश्वासकासानशेषतः ॥ ५ ॥

## ಕಂಟಕಾರ್ಯಾದ್ಯವಲೇಹ

ಕಂಟಕಾರಿ ಪಲ 100, 16 ಕುತ್ತಿ ಜಲದಲ್ಲಿ ಜಜ್ಜಿ ಹಾಕಿ, 1/4 ಅಂಶ ಬತ್ತಿಸಿ ಗಾಳಿಸಿ ಕುತ್ತಿ 4, ಅಮೃತಬಳ್ಳಿ ಸತ್ವ, ಕಾಡುಕರಿಮೆಣಸಿನ ಬೇರು, ಚಿತ್ರಮೂಲ ಬೇರು (ಶುದ್ಧಿ), ಭದ್ರಮುಷ್ಟಿ, ಕರ್ಕಾಟಕ ಶೃಂಗಿ, ಒಣ ಶುಂಠಿ, ಕರಿಮೆಣಸು, ಹಿಪ್ಪಲಿ, ಬಳ್ಳಿಆಕಿರೆ ಬೇರು, ನಿರ್ವಿಷದ ಬೇರು, ಕೆಂಪರತ್ತೆ, ಕಚ್ಚೂರ, ಒಂದೊಂದು ಪಲದಂತೆ ಸೇರಿಸಿ, ವಸ್ತ್ರಗಾಳಿತ ಚೂರ್ಣಮಾಡಿ ಕಲ್ಲುಸಕ್ಕರೆ 20 ಪಲ, 8 ಪಲ ದನದ ತುಪ್ಪ, 8 ಪಲ ಸ್ವಚ್ಛ ವಾದ ಎಳ್ಳೆಣ್ಣೆ ಸೇರಿಸಿ, ಲೇಹವಿಧಿಯಂತೆ ಪಾಕದಲ್ಲಿಳಿಸಿ, ಬಿಸಿಯಾರಿದ ಮೇಲೆ 8 ಪಲ ಜೇನುತುಪ್ಪವನ್ನೂ, 4 ಪಲ ತುಗಾಕ್ಷೀರಿಯನ್ನೂ, 4 ಪಲ ಹಿಪ್ಪಲಿಚೂರ್ಣವನ್ನೂ ಕೂಡಾ ಸೇರಿಸಿ, ಶುದ್ಧ ಪಾತ್ರದಲ್ಲಿಟ್ಟು ಪ್ರಾಯಶಃ ತೊಲೆ 1 ರಂತೆ ಸೇವಿಸಿದರೆ ಹಿಕ್ಕಾ, ಶ್ವಾಸಕಾಸಗಳನ್ನೂ ನೀಗಾಡಿಸುವುದು.

॥ च्यवनप्राशाव लेहः ॥

पाटलारणिकाश्मर्यबिल्वारलुकगोक्षुराः ।
पर्ण्यौ बृहत्यौ पिप्पल्यः शृङ्गीद्राक्षामृताभयाः ॥ ६ ॥
बला भूम्यामली वासा ऋद्धिर्जीवंतिका शठी ।
जीवकर्षभकौ मुस्ता पौष्करं काकनासिका ॥ ७ ॥
मुद्गपर्णी माषपर्णी विदारी च पुनर्नवा ।
काकोल्यौ कमलं मेदे सूक्ष्मैलागुरु चंदनम् ॥ ८ ॥
एकैकं पलसमानं स्थूलचूर्णितमौषधम् ।
एकीकृत्य बृहत्पात्रे पञ्चामलशतानि च ॥ ९ ॥
पचेद्द्रोणजले क्षिप्त्वा ग्राह्यमष्टांशशेषितम् ।
ततस्तु तान्यामलानि निष्कुलीकृत्य वाससा ॥ १० ॥
दृढहस्तेन संपिड्य क्षिप्त्वा तत्र ततो घृतम् ।
पलसप्तमितं तानि किंचिद्भृष्ट्वाल्पवह्निना ॥ ११ ॥
ततस्तत्र क्षिपेत्क्वाथं खंडं चार्धपलोन्मितम् ।
लेहवत् साधयित्वा च चूर्णानीमानि दापयेत् ॥ १२ ॥
पिप्पली द्विपला देया तुगाक्षीरी चतुष्पला ।
प्रत्येकं च त्रिशाणं स्यात्त्वगेलापत्रकेसराः ॥ १३ ॥
ततस्त्वेकीकृते तस्मिन्क्षिपेत्क्षौद्रं च षट्पलम् ।
इत्येतच्या वनप्रोक्तं च्यवनप्राशसंज्ञितम् ॥ १४ ॥
लेहं वह्निबलं दृष्ट्वा स्वादेत्क्षीणो रसायनम् ।
बालवृद्धक्षतक्षीणा नारीक्षीणाश्च शोषिणः ॥ १५ ॥
हृद्रोगिणः स्वरक्षीणा ये नरास्तेषु युज्यते ।
श्वासं कासं पिपासां च वातास्रमुरसो गृहम् ॥ १६ ॥
वातपित्तं शुक्रदोषं मूत्रदोषं च नाशयेत् ।
मेधां स्मृतिं स्त्रीषुहर्षं कांतिं वर्णप्रसन्नता ॥ १७ ॥
अस्य प्रयोगादाप्नोति नरोऽजीर्णविवर्जितः ।

## ಚ್ಯವನಪ್ರಾಶಾವಲೇಹ

ಪಾದಿರಿ ಬೇರು, ನವ್ರೋಳು ಬೇರು, ಕುಮುದ ಬೇರು, ಬಿಲ್ವಪತ್ರೆ ಬೇರು, ಆನೆಮುಂಗು ಬೇರು, ನೆಗ್ಗಿನ ಮುಳ್ಳು, ಓರೆಲೆ ಬೇರು, ಮೂರೆಲೆ ಬೇರು, ಚಿತ್ರಟಿ ಬೇರು, ಕಲ್ಯಟಿ ಬೇರು, ಹಿಪ್ಪಲಿ, ಕಿರುತೇಗು ಬೇರು, ದ್ರಾಕ್ಷೆ, ಅಮೃತ ಬಳ್ಳಿ, ಅಣಿಲೆಕಾಯಿ ಸಿಪ್ಪೆ, ಕಡಿರಬೇರು, ನೆಲನೆಲ್ಲಿ, ಆಡ್ಸೋಗೆ ಬೇರು, ಋದ್ಧಿ(ನೆಲತಾಳಿ ಗಡ್ಡೆ), ಜೀವಂತೀ ಗಡ್ಡೆ, ಕಚ್ಚೂರ, ಜೀವಕ, ಎಡವಕ(ಎದಾರೀ ಗಡ್ಡೆ), ಭದ್ರಮುಷ್ಠಿ, ಪುಷ್ಕರಮೂಲ, ಕಾಕ ನಾಸಿಕಾ, ಕಾಡುಹೆಸರು ಬೇರು, ಕಾಟುದ್ದು ಬೇರು, ವಿದಾರಿ ಗಡ್ಡೆ, ಪುನ ರ್ನವೆ ಬೇರು, ಕಾಕೋಳಿ, ಕ್ಷೀರಕಾಕೋಳೀ, (ಅಶ್ವಗಂಧಿ) ತಾವರೆದಂಡು, ಮೇದಾ, ಮಹಾಮೇದಾ (ಶತಾವರಿ ಬೇರು), ಸಣ್ಣ ಏಲಕ್ಕಿ, ಅಗಿಲುಗಂಧ, ಶ್ರೀಗಂಧ ಇವುಗಳು ಪ್ರತಿಯೊಂದು ತೊಲೆ 5ರಂತೆ, ಚೂರುಗಳಾಗಿ ಮಾಡಿ ಜಜ್ಜಿ ಒಂದು ಪಾತ್ರದಲ್ಲಿ ಹಾಕಿ 500 ಹಸಿನೆಲ್ಲಿಕಾಯಿಗಳನ್ನು ಹಾಕಿ, 16 ಕುತ್ತಿ ಕಷಾಯದಲ್ಲಿ ಅಷ್ಟಾಂಶ ಬತ್ತಿಸಿ, ಅದರಲ್ಲಿ ಬೆಂದಿರುವ ನೆಲ್ಲಿಕಾಯಿ ಗಳನ್ನು ತೆಗೆದು, ಶುಭ್ರ ವಸ್ತ್ರದಲ್ಲಿ ಹಾಕಿ, ಕಾಯಿಗಳ ಬೀಜ ಮತ್ತು ನಾರುಗಳನ್ನು ಹೋಗಲಾಡಿಸಿ ಉಳಿದ ಅಂಶವನ್ನು ಒಂದು ಪಾತ್ರದಲ್ಲಿ ಹಾಕಿ ತುಪ್ಪದಲ್ಲಿ ಭರ್ಜಿಸಿ(ಹುರಿದು) ನುಣ್ಣಗೆ ಅರೆಯುವುದು. ಹಿಂದೆ ಹೇಳಿದ ಕಷಾಯದಲ್ಲಿ 50 ಪಲ ಕಲ್ಲುಸಕ್ಕರೆಯನ್ನು ಸೇರಿಸಿ ಲೇಹ್ಯಪಾಕ ವಾಗುವಾಗ, ಹಿಪ್ಪಲಿ ಪಲ 2, ತುಗಾಕ್ಷೀರಿ(ಬಿದಿರುಪ್ಪು) ಪಲ 4, ಲವಂಗ ಚೆಕ್ಕೆ, ಏಲಕ್ಕಿ, ತಮಾಲಪತ್ರೆ, ನಾಗಕೇಸರಿ ಇವುಗಳು ಕೈಂಚಿ 2 ತೂಕ ದಂತೆ ಚೂರ್ಣಿಸಿ ಲೇಹ್ಯದೊಂದಿಗೆ ಕೂಡಿಸಿ, ತಣ್ಣಗಾದ ಮೇಲೆ 6ಪಲ ಜೇನುತುಪ್ಪವನ್ನು ಸೇರಿಸಿ, ಭದ್ರವಾಗಿಟ್ಟು ಕ್ರಮದಂತೆ ಸೇವಿಸುವುದು. ಚ್ಯವನಋಷಿಯಿಂದ ಹೇಳಲ್ಪಟ್ಟದ್ದರಿಂದ ಚ್ಯವನಪ್ರಾಶಂ, ಎಂದು ಹೆಸ ರಾಯಿತು. ಅಗ್ನಿಬಲವನ್ನು ಅನುಸರಿಸಿ ಕ್ಷೀಣ ಶರೀರಿಗಳು ಸೇವಿಸಬೇಕು. ಬಾಲಕರು, ವೃದ್ಧರು, ಕ್ಷತಕ್ಷೀಣರು, ಸ್ತ್ರೀಸೇವೆಯಿಂದ ಕ್ಷೀಣವಾದವರು, ಹೃದ್ರೋಗಿಯು, ಸ್ವರಕ್ಷೀಣನಾದವನು ಇಂಥವರಿಗೆ ಅತ್ಯಧಿಕ ಪ್ರಯೋಜನ ವನ್ನುಂಟುಮಾಡುವುದಲ್ಲದೇ, ಕಾಸಶ್ವಾಸ, ತೃಷ್ಣಾರೋಗ, ವಾತರಕ್ತ,

ಎದೆನೋವು, ವಾತ, ಪಿತ್ತ, ಶುಕ್ರದೋಷ, ಮೂತ್ರದೋಷ ಇವುಗಳನ್ನೆಲ್ಲಾ ಹೋಗಲಾಡಿಸಿ, ಮೇಧಾಶಕ್ತಿ, ಸ್ಮರಣಶಕ್ತಿ, ಕಾಂತಿ, ಆರೋಗ್ಯ, ಆಯುಃ ಪ್ರಕರ್ಷ, ಸ್ತ್ರೀಯರಿಗೆ ಅತ್ಯಾನಂದವಾಗುವಿಕೆ, ವಾರ್ಧಕ್ಯನಿವಾರಣ ಮೊದಲಾದ ಮಹತ್ಕಾರ್ಯಗಳಲ್ಲಿ ಈ ಚ್ಯವನಪ್ರಾಶ ರಸಾಯನವು ಪ್ರಖ್ಯಾತಿ ಪಡೆದಿರುವುದು.

॥ कूष्मांडाव लेहः ॥

निष्कुलीकृत्य कूष्मांडखंडानि पीडयेत् दृढवाससा ।
आतपे शोषयेत्किञ्चिच्छूलाग्रैर्बहुशो व्यधेत् ॥ १८ ॥
क्षिप्त्वा ताम्रकटाहे च दद्यादष्टपलं घृतम् ।
तेन किञ्चिद्भर्जयित्वा पूर्वोक्तं च जलं क्षिपेत् ॥ १९ ॥
खंडं पलशतं दत्त्वा सर्वमेकत्र पाचयेत् ।
सुपक्वे पिप्पली शुंठी जीरकं द्विपलं पृथक् ॥ २० ॥
पृथक् पलार्धं धान्याकं पत्रैला मरिचं त्वचम् ।
चूर्णिकृत्य क्षिपत्तत्र घृतार्धं क्षौद्रमावहेत् ॥ २१ ॥
खादेदग्निबलं दृष्ट्वा रक्तपित्ती क्षयी ज्वरी ।
शोषतृष्णाभ्रमच्छर्दिश्वासकासक्षतातुरः ॥ २२ ॥
कूष्मांडवलेहोऽयं बालवृद्धेषु युज्यते ।
उरःसंधानकृद्वृष्यो बृंहणो बलकृन्मतः ॥ २३ ॥
युक्त्या कूष्मांडखंडस्य सूरणं विपचेत्सुधीः ।
अर्शसां मूढवातानां मंदाग्निनां च युज्यते ॥ २४ ॥

## ಕೂಷ್ಮಾಂಡಾವಲೇಹ

ಕೂಷ್ಮಾಂಡದ ಹೊರಗಿನ ದಪ್ಪವಾದ ಸಿಪ್ಪೆಯನ್ನೂ ಒಳಗಿನ ಬೀಜವನ್ನೂ ತೆಗೆದು, ತುಂಡುಗಳಾಗಿ ಮಾಡಿದ ತಿರುಳು ಪಲ100, ನೀರು ಪಲ 200ರಲ್ಲಿ ಬೇಯಿಸಿ ಅರ್ಧಾಂಶ ಬತ್ತಿಸಿ, ಕೂಷ್ಮಾಂಡದ ತುಂಡುಗಳನ್ನು

ವಸ್ತ್ರದಲ್ಲಿ ಗಾಳಿಸಿ, ಬಿಸಿಲಲ್ಲಿ ಸ್ವಲ್ಪ ಒಣಗಿಸಿ, ಜೆಂಬಿನ ಅಗಲವಾದ ಪಾತ್ರದಲ್ಲಿ ಹಾಕಿ. 8 ಪಲ ತುಪ್ಪದಲ್ಲಿ ಭರ್ಜಿಸಿ, (ಹುರಿದು) ಪಾಕದಲ್ಲಿ ಇಳಿಸಿ ಅರೆದು, ಮುಂದೆ ಹೇಳುವ ಲೇಹ್ಯಕ್ಕೆ ಕೂಡಿಸಬೇಕು. ಅನಂತರ ಹೇಳಿದ ಕಷಾಯದಲ್ಲಿ ಕಲ್ಲುಸಕ್ಕರೆ ಪಲ 100ನ್ನು ಸೇರಿಸಿ, ಲೇಹ್ಯ ಪಾಕವಾಗುವಾಗ ಹಿಪ್ಪಲಿ, ಒಣಶುಂಠಿ, ಜೀರಿಗೆ, ಇವು ಪಲ 2ರಂತೆ, ಕೊತ್ತಂಬರಿ, ತಮಾಲಪತ್ರೆ, ಏಲಕ್ಕಿ, ಕರಿಮೆಣಸು, ಲವಂಗಚೆಕ್ಕೆ ಇವುಗಳು ಪಲ ½—½, ಇವುಗಳೆಲ್ಲವನ್ನೂ ಚೂರ್ಣಿಸಿ ಲೇಹ್ಯಕ್ಕೆ ಕೂಡಿಸುವುದು. ಅಗ್ನಿಶಕ್ತಿಗನುಸರಿಸಿ ಸೇವಿಸಲು, ರಕ್ತಪಿತ್ತ, ಜ್ವರ, ಕ್ಷಯ, ಶೋಷ, ತೃಷ್ಣಾಭ್ರಮ, ಛರ್ದಿ, ಶ್ವಾಸ, ಕಾಸ, ಈ ಬಗೆಯ ರೋಗಗಳು ನಿವಾರಣೆಯಾಗುವುವು. ಬಾಲಕರಿಗೂ, ವೃದ್ಧರಿಗೂ, ಕ್ಷತ ಕ್ಷೀಣರಿಗೂ, ಎದೆನೋವನ್ನು ಹೋಗಲಾಡಿಸಿ, ಶುಕ್ಲವೃದ್ಧಿಯನ್ನೂ ಶರೀರದಾರ್ಢ್ಯತೆಯನ್ನೂ ಉಂಟುಮಾಡಿ ಆರೋಗ್ಯಲಾಭವನ್ನೀಯುವುದು. ಕೂಷ್ಮಾಂಡದ ಬದಲಿಗೆ ಶುದ್ಧಿಮಾಡಿದ ಕಾಡುಕೇನೆಯನ್ನು ಸೇರಿಸಲು. ಅರ್ಶಸ್ಸಿಗೂ, ಮೂಢವಾತಗಳಿಗೂ, ಅಗ್ನಿಮಾಂದ್ಯಕ್ಕೂ ಹಿತಕಾರಿಯಾಗುವುದು.

॥ अगस्त्यहरीतकी लेहः ॥

हरीतकीशतं भद्रं यवानामाढकं तथा ।
पलानि दशमूलस्य विंशतिं च नियोजयेत् ॥ २५ ॥
चित्रकः पिप्पलीमूलमपामार्गः शठी तथा ।
कपिकच्छूः शंखपुष्पी भार्ङ्गी च गजपिप्पली ॥ २६ ॥
बला पुष्करमूलं च पृथग्द्विपलमात्रया ।
पचेत्पञ्चाढके नीरे यवैः स्विन्नैः श्रृतं जयेत् ॥ २७ ॥
तत्राभयशतं दद्यात्क्वाथे तस्मिन्विचक्षणः ।
सर्पिस्तैलाष्टपलकं क्षिपेद्गुडतुलां तथा ॥ २८ ॥
पक्त्वा लेहत्वमानीय सिद्धे शीते पृथक् पृथक् ।
क्षौद्रं च पिप्पलीचूर्णं दद्यात्कुडवमात्रया ॥ २९ ॥

हरीतकीद्वयं खादेत्तेन लेहेन नित्यशः ।
क्षयं कासं ज्वरं श्वासं हिक्काशोंऽरुचिपीनसान् ॥ ३० ॥
ग्रहणीं नाशयेदेष वलीपलितनाशनः ।
बलवर्णकरः पुंसामवलेहो रसायनम् ॥ ३१ ॥
विहितोऽगस्त्यमुनिना सर्वरोगप्रणाशनः ।

## ಅಗಸ್ತ್ಯಹರೀತಕ್ಯವಲೇಹ

ಚೆನ್ನಾಗಿ ಬೆಳೆದ ಅಣಿಲೆಕಾಯಿಗಳು 100, ಯವಧಾನ್ಯ ಪ್ರಸ್ಥ 4, ದಶಮೂಲಗಳು ಪಲ 20, ಚಿತ್ರಮೂಲ, ಹಿಪ್ಪಲಿಮೂಲ, ಉತ್ತರಣೆ ಬೀಜ, ಕಚ್ಚೂರ, ನಾಯಿಸೋಣಗು, ಶಂಖಪುಷ್ಪದ ಬೇರು, ಕಿರುತೇಗು, ಆನೆ ಹಿಪ್ಪಲಿ, ಕಡಿರಬೇರು, ಪುಷ್ಕರಮೂಲ ಇವುಗಳು 2—2 ಪಲಗಳಂತೆ 20 ಕುತ್ತಿ ನೀರಿನಲ್ಲಿ ಕಷಾಯವಿಟ್ಟು ಯವಧಾನ್ಯವು ಬೆಂದಮೇಲೆ ಗಾಳಿಸಿದ ಕಷಾಯಕ್ಕೆ ಅಣಿಲೆಕಾಯಿಗಳನ್ನು ಒಡೆಯದೇ ಇಡಿಯಾಗಿ ಕೂಡಿಸಿ, ಅದರಲ್ಲಿ ಸಕ್ಕರೆ ಪಲ 100ನ್ನು ಕೂಡಿಸಿ ಲೇಹ್ಯಪಾಕವಾಗುವಾಗ 8 ಪಲ ದನದತುಪ್ಪವನ್ನೂ 8 ಪಲ ಎಳ್ಳೆಣ್ಣೆಯನ್ನೂ ಕೂಡಿಸಿ ಇಳಿಸುವುದು. 16 ತೊಲೆ ಹಿಪ್ಪಲಿ ಚೂರ್ಣವನ್ನೂ, ಶೀತಲವಾದ ಮೇಲೆ 16 ತೊಲೆ ಜೇನುತುಪ್ಪವನ್ನೂ ಕೂಡಿಸಿ ಸೂಕ್ಷ್ಮವಾಡಿ ಭದ್ರತೆಯಿಂದಿಡುವುದು. ಅದರಿಂದ ದಿನಂಪ್ರತಿ 2 ಅಣಿಲೆಕಾಯಿಗಳ ಸಮೇತ ಲೇಹವನ್ನು ಸೇವಿಸಲು, ಕ್ಷಯ, ಕಾಸ, ಜ್ವರ, ಶ್ವಾಸ, ಹಿಕ್ಕಾ, ಅರ್ಶಸ್ಸು, ಅರುಚಿ, ಪೀನಸ, ಗ್ರಹಣೀ ಇವುಗಳು ಶಮನವಾಗುವುವು. ಜರೆನರೆಗಳನ್ನು ನಿವೃತ್ತಿಸಿ ಬಲವರ್ಣಕಾರಿಯಾಗಿ, ಸರ್ವರೋಗಗಳನ್ನೂ, ವ್ರಣಗಳನ್ನೂ ಶಮನಮಾಡುವ ಈ ರಸಾಯನವು **ಅಗಸ್ತ್ಯಮುನಿಯಿಂದ** ಹೇಳಲ್ಪಟ **ಅಗಸ್ತ್ಯರಸಾಯನ**ವಾಗಿರುವುದು.

॥ कुटजाद्यवलेहः ॥

कुटजत्वक्तुलां द्रोणे जलस्य विपचेत्सुधीः ।
कषायं पादशेषं च गृह्णीयाद्वस्त्रगालितम् ॥ ३२ ॥

त्रिंशत्पलं गुडस्यात्र दत्वा च विपचेत्पुनः ।
सांद्रत्वमागतं ज्ञात्वा चूर्णानीमानि दापयेत् ॥ ३३ ॥
रसाञ्जनं मोचरसं त्रिकटु त्रिफलां तथा ।
लज्जालुं चित्रकं पाठां बिल्वमिंद्रयवं वचाम् ॥ ३४ ॥
भल्लातकं प्रतिविषां विडङ्गानि च धालकम् ।
प्रत्येकं पलसंमानं घृतस्य कुडवं तथा ॥ ३५ ॥
जयेदेषोऽवलेहस्तु सर्वाण्यर्शांसि वेगतः ।
दुर्नामप्रभवान् रोगानतीसारमरोचकम् ॥ ३६ ॥
ग्रहणीं पांडुरोगं च रक्तपित्तं च कामलाम् ।
अम्लपित्तं तथा शोथं कार्श्यं चैव प्रवाहिकाम् ॥ ३७ ॥
अनुपाने प्रयोक्तव्यमाजं तक्रं पयो दधि ।
घृतं जलं वा जीर्णे च पथ्यभोजी भवेन्नरः ॥ ३८ ॥

## ಕುಟಜಾದ್ಯವಲೇಹ

ಸಣ್ಣ ಕೊಡಸಿಗನ ಬೇರಿನ ತೊಗಟು ಪಲ 100, 16 ಕುತ್ತಿ ನೀರಿನಲ್ಲಿ ಕಷಾಯವಿಟ್ಟು ¼ಅಂಶ ಬತ್ತಿಸಿ, ವಸ್ತ್ರದಿಂದ ಗಾಳಿಸಿ, 30ಪಲ ಬೆಲ್ಲ ಕೂಡಿಸಿ, ಲೇಹ್ಯಪಾಕಕಾಲದಲ್ಲಿ, ರಸಾಂಜನ, ಆಲದಮಯಣ, ಒಣ ಶುಂಠಿ, ಕರಿಮೆಣಸು, ಹಿಪ್ಪಲಿ, ಅಣಿಲೆಕಾಯಿ, ನೆಲ್ಲಿಕಾಯಿ, ಶಾಂತಿ ಕಾಯಿ, ನಾಚಿಕೆಮುಳ್ಳುಬೇರು (ಲಜ್ಜಾಲು), ಚಿತ್ರಮೂಲ ಬೇರು, ಪಾಡಾ ವಳಿ ಬೇರು, ಬಿಲ್ವಪತ್ರೆಬೇರು, ಕೊಡಗಪಾಲರಿ, ಬಜೆ, ಶುದ್ಧ ಭಲ್ಲಾತಕ (ಘಟ್ಟದ ಗೇರುಕಾಯಿ), ಅತಿವಿಡಯ, ವಾಯುವಿಳಂಗ, ಇರುವೇರಿದಂಡು, ಇವುಗಳು ಪ್ರತಿಯೊಂದು ಪಲ 1ರಂತೆ, ಚೂರ್ಣಿಸಿ 16 ತೊಲೆ ತುಪ್ಪ ವನ್ನೂ ಕೂಡಿಸಿಕೊಳ್ಳುವುದು. ಲೇಹವು ತಣ್ಣಗಾದ ಮೇಲೆ 16 ತೊಲೆ ಜೇನುತುಪ್ಪವನ್ನೂ ಕೂಡಿಸಿಕೊಂಡು ಸೇವಿಸಿದರೆ, ಎಲ್ಲಾ ವಿಧದ ಮೂಲ ವ್ಯಾಧಿಗಳನ್ನು ವೇಗದಿಂದ ಉಪಶಮನ ಹೊಂದಿಸುವುದಲ್ಲದೆ ಅರ್ಶಸ್ಸಿ ನಿಂದುಂಟಾಗುವ ಉಪದ್ರವಗಳನ್ನೂ, ಅತಿಸಾರ, ಅರುಚಿ, ಗ್ರಹಣೀ,

ಪಾಂಡುರೋಗ, ರಕ್ತಪಿತ್ತ, ಕಾಮಿಲಾ, ಅಮ್ಲಪಿತ್ತ, ಶೋಷ, ಕ
ಪ್ರವಾಹಿಕಾ ರೋಗಗಳನ್ನು ನಿವಾರಿಸುವುದು. ಅನುಪಾನಕ್ಕೆ:-
ಮೊಸರು, ಹಾಲು, ಮಜ್ಜಿಗೆನೀರು ಇವುಗಳು ಅತಿ ಹಿತಕಾರಿಗಳು;
ಇವುಗಳನ್ನು ಜೀರ್ಣಕ್ಕನುಸರಿಸಿ ಸೇವಿಸಿ, ಪಥ್ಯಭೋಜಿಯಾಗಿರಬೇ

॥ कामेश्वरी लेह्यम् ॥

वाराही मधुकं द्राक्षा वाजिगंधा सुरद्रुमम् ।
आळर्क मर्कटीमूलं बलामूलं पुनर्नवम् ॥ ३९ ॥
उशीरं चंदनं भार्गी भिक्षुमैलेयगोक्षुरम् ।
विदारीतिलमाषं च प्रत्येकं च पलद्वयम् ॥ ४० ॥
द्विद्रोणे सलिले क्वाथे श्रृते पादावशेषिते ।
त्रिंशत्पलं गुडं तस्माद् सिता दशपलं पुनः ॥ ४१ ॥
इक्षुधात्रीवरीरंभाकूष्मांडस्वरसान्वितम् ।
दर्व्यां च घट्टयन् भूयो लेहवत्साधु साधयेत् ॥ ४२ ॥
एलालवङ्गपत्रं च नागकेसरधान्यकैः ।
तालीसं मधुकं सेव्यं चंदनागुरुकुंकुमैः ॥ ४३ ॥
जातीफलं शिलाभूतं सुरदारुफलत्रयैः ।
अपामार्गफलं व्योषं मर्कटीबीजगोक्षुरैः ॥ ४४ ॥
जातीपत्रं वरालं च वांशितिक्षुरबीजकैः ।
सैंधवं मोचनिर्यासं विडंगं दीप्यकद्वयम् ॥ ४५ ॥
तुरङ्गकुसुमं रास्ना मराष्ट्रमुकुलान्वितम् ।
शिग्रुसारं धूर्तबीजं भूदर्करसमन्वितम् ॥ ४६ ॥
हस्तीकर्णाब्दभृंगं च कृष्णबीजसमन्वितम् ।
प्रत्येकं पलनिष्कं च गांधारी निष्कविंशतिम् ॥ ४७ ॥
धात्री विदारीवाराहीसारिवामृतशर्करा ।
प्रत्येकं च कुडुंबानि लेह्यं पाकेन योजयेत् ॥ ४८ ॥

गोघृतं मधुसंयोज्य कस्तूरीचंद्रसंयुतम् ।
कर्षमात्रं लिहेत् प्रातः रात्रिकाले विशेषतः ॥ ४९ ॥
वातपित्तकफोत्पन्नं रक्तपित्तं विनाशयेत् ।
कासं श्वासं क्षयं पांडु छर्दिं दोषनिबर्हणम् ॥ ५० ॥
आध्मानं गुल्मशूलघ्नं हिध्मा हृद्रोगनाशनम् ।
अर्शांसि ग्रहणीदोषं अस्थिस्रावं च दारुणम् ॥ ५१ ॥
मूत्राघाताश्मरीकृच्छ्रं प्रमेहं च विशेषतः ।
सर्वरोगहरं चैव बलपुष्टिकरं त्विदम् ॥ ५२ ॥
मन्मथोद्रेकघातुं च महामदगजेंद्रियम् ।
मुहुर्मुहुरातिगुह्यं संयोगं च विशेषतः ॥ ५३ ॥
नारीणां रमते स्नेहं मोहनं वीर्यवर्धनम् ।
सुंदरीणां च संयोगे मनोह्लादं दिनेदिने ॥ ५४ ॥
आयुष्यं वृद्धिकामत्वं मांसशुक्रविवर्धनम् ।
रसायनमिदं श्रेष्टं पूज्यपादेन भाषितम् ॥ ५५ ॥

## ಕಾಮೇಶ್ವರೀ ಲೇಹ್ಯವು

ನೆಲತಾಳಿ ಗಡ್ಡೆ, ಜ್ಯೇಷ್ಠಮಧು, ದ್ರಾಕ್ಷೆ, ಅಶ್ವಗಂಧಿ, ದೇವದಾರು, ಎಕ್ಕೆಗಿಡದ ಬೇರು, ನ್ಯಾಸೊಣಗು ಬೇರು, ಕಡಿರಬೇರು, ತೆಗ್ಗಾಮೆಬೇರು, ಲಾವಂಚಬೇರು, ಚಂದನ, ಕಿರುತೇಗು, ಬೆಟ್ಟುಕರಂಡೆ ಬೇರು, ಚಿರಾ ಪೊಟ್ಟಗಿಡದ ಬೇರು, ನೆಗ್ಗಿನಮುಳ್ಳು, ನೆಲಕುಂಬುಳ ಗಡ್ಡೆ, ಎಳ್ಳು, ಉದ್ದು, ಇವುಗಳು ತೊಲೆ 8—8, (ಪಲ 2) ನೀರು ಪ್ರಸ್ಥ 32, ಬತ್ತಿಸಿ ಪ್ರಸ್ಥ 8, ಬೆಲ್ಲ ಪಲ 30, ಸಕ್ಕರೆ ಪಲ 10, ಇದಕ್ಕೆ ರಸಗಳು:— ಕಬ್ಬಿನ ರಸ, ನೆಲ್ಲಿ ರಸ, ಶತಾವರಿ ರಸ, ಬಾಳೆಗಡ್ಡೆ ರಸ, ಕೂಷ್ಮಾಂಡ ರಸ, ಇವುಗಳನು. ಆಲೋಚನೆಯ ಮಟ್ಟಗೆ (ಲೆಖ್ಖವಿಲ್ಲ) ಕೂಡಿಸುವುದು.

**ಚೂರ್ಣಕ್ಕೆ:—** ಏಲಕ್ಕಿ, ದಾಲ್ಚೀನಿ ಕೆತ್ತೆ, ತಮಾಲಪತ್ರೆ, ಜ್ಯೇಷ್ಠ ಮಧು, ಲಾವಂಚ, ಶ್ರೀಗಂಧ, ಅಗಿಲುಗಂಧ, ಕುಂಕುಮಕೇಸರಿ,

ಜಾಯಿಕಾಯಿ, ಕಲ್ಮದ, ದೇವದಾರು, ನೆಲ್ಲಿಕಾಯಿಯ ಸಿಪ್ಪೆ, ಶಾಂತಿ ಕಾಯಿ ಸಿಪ್ಪೆ, ಅಣಲೆಕಾಯಿ ಸಿಪ್ಪೆ, ಉತ್ತರಣೆ ಬೀಜ, ಶುಂಠಿ, ಕರಿ ಮೆಣಸು, ಹಿಪ್ಪಲಿ, ನಾಯಿಸೊಣಗು ಬೀಜ, ನೆಗ್ಗಿನಮುಳ್ಳು, ಜಾಪತ್ರೆ, ಜಾಜಿಮಲ್ಲಿಗೆ ಎಲೆ, ಸಣ್ಣ ಏಲಕ್ಕಿ, ವಂಶಲೋಚನಾ, ಬಯುಲಮುಳ್ಳು ಬೀಜ (ಕೊಳಸಿಗೆ ಬೀಜ), ಸೈಂಧವಲವಣ, ಬೂರುಗದ ಮಯಣ, ವಾಯುವಿಳಂಗ ಓಮು, ಖುರಾಸನಿ ಓಮು, ತುರಂಗಕುಸುಮದ ಬೀಜ, ರಾಸ್ನೆ, ಮರಾಷ್ಟ್ರ ಮೊಗ್ಗೆ, ನುಗ್ಗೆ ಬೀಜ, ದುತ್ತೂರಬೀಜ(ಶುದ್ಧಿ), ಭೂಶರ್ಕರ, ಆನೆಹಿಪ್ಪಲಿ, ಭದ್ರಮುಷ್ಟಿ, ಭೃಂಗರಾಜ ಬೇರು, ಕರಿಜೀರಿಗೆ ಇವುಗಳು ಬೇರೆಬೇರೆ ಕೈಂಜಿ 5-5ರಂತೆ, ಶೀಯಾಳದ ನೀರಿನಲ್ಲಿ ಶುದ್ಧಿಮಾಡಿದ ಭಂಗಿ ಕೈಂಜಿ 20, ನೆಲ್ಲಿ ಕಾಯಿ ಸತ್ವ, ಭೂಕುಂಬುಳ ಸತ್ವ, ನೆಲತಾಳಿಗಡ್ಡೆ ಸತ್ವ, ನಾಮದಬೇರು ಸತ್ವ, ಅಮೃತಬಳ್ಳಿ ಸತ್ವ, ಇವುಗಳು ಬೇರೆಬೇರೆ ತೊಲೆ 16ರಂತೆ, -ಮೇಲೆ ಹೇಳಿದ ಚೂರ್ಣದೊಂದಿಗೆ ಕೂಡಿಸಿ ಒಂದುಮಾಡಿ ಲೇಹ್ಯದೊಡನೆ ಸೇರಿಸಿ ಕೊಳ್ಳುವುದು. [ಕಸ್ತೂರಿ ಮತ್ತು ಪಚ್ಚೆಕರ್ಪೂರಗಳನ್ನು ತಕ್ಕಮಟ್ಟಿಗೆ ಕೂಡಿಸಿಕೊಳ್ಳುವುದು.] ದನದ ತುಪ್ಪ, ಜೇನುತುಪ್ಪಗಳನ್ನು ಲೇಹ್ಯ ಪ್ರಮಾಣವನ್ನು ಯೋಚಿಸಿ ಕೂಡಿಸುವುದು. ಹಾಗೆ ಸೂಕ್ಷ್ಮರೀತಿಯಿಂದ ತಯಾರಿಸಿದ ಈ ಲೇಹ್ಯವನ್ನು ಶುದ್ಧ ಪಾತ್ರದಲ್ಲಿ ಭದ್ರವಾಗಿಟ್ಟು ಪ್ರತಿದಿನ 3-3 ಕೈಂಜಿಗಳಂತೆ ಸೇವಿಸಲು, ವಾತ, ಪಿತ್ತ, ಕಫೋತ್ಕೃಷ್ಟ ರೋಗಗಳನ್ನೂ ಕಾಸ, ಶ್ವಾಸ, ಕ್ಷಯ, ಪಾಂಡು, ಛರ್ದಿ, ಗುಲ್ಮ, ಶೂಲ, ಹಿದ್ಮಾ, ಹೃದ್ರೋಗ, ಅರ್ಶಸ್ಸು, ಗ್ರಹಣೀ ಅಸ್ಥಿಸ್ರಾವ, ಮೂತ್ರಾಘಾತ, ಅಶ್ಮರೀ, ಮೂತ್ರಕೃಚ್ಛ್ರ, ಪ್ರಮೇಹ. ಇವುಗಳನ್ನು ನಿವಾರಿಸಿ, ದೇಹಪುಷ್ಟಿಯನ್ನೂ, ರಸಾದಿ ಧಾತುಗಳಿಗೆ ಅಧಿಕ ಶಕ್ತಿಯನ್ನುಂಟುಮಾಡಿ, ಸಂಭೋಗದಲ್ಲಿ ಮದದಾನೆಯಂತೆ ಅತ್ಯುತ್ಸಾಹವನ್ನೂ, ಸ್ತ್ರೀಯರಿಗೆ ಪ್ರೇಮವನ್ನೂ, ಉಂಟುಮಾಡಿ ಸುಮನೋಹರನಾಗಿಯೂ, ವೀರ್ಯವರ್ಧನನಾಗಿಯೂ, ದಿನಂಪ್ರತಿ ಕಾಮಿನಿಯರಿಗೆ ಕಾಮಸನ್ನಿಭನಾಗಿ ಅತುಲಾನಂದತುಂದಿಲ ನಾಗುವನು. ಅದಲ್ಲದೇ ಬಲಪುಷ್ಟ್ಯಾಯುರಾರೋಗ್ಯವುಂಟಾಗುವುದು. ಶುಕ್ಲಮಾಂಸಾದಿಗಳನ್ನಭಿವರ್ಧಿಸುವ ಈ ಕಾಮೇಶ್ವರೀ ರಸಾಯನವು ಜಗದ್ವಿಖ್ಯಾತವಾದ ಔಷಧಾಮೃತವು.

॥ बिल्वादि लेहः ॥

बिल्वार्धाढकमंभसोऽर्धकलशे पक्त्वा पदस्थे रसे ।
तस्मिन् जीर्णगुडस्य षोडशपलं चूर्णीकृतैः सर्वतः ॥
कर्षांशैर्घनधान्यजीरकतुटीत्वक्केसरत्र्यूषणै ।
र्लीढः छर्दिररोचकाग्निसदन श्वासप्रसेकापहः ॥ ५६ ॥

## ಬಿಲ್ವಾದಿ ಲೇಹ

ಬಿಲ್ವಪತ್ರೆ ಬೇರು ಪಲ 4, ಕಷಾಯಕ್ಕೆ ನೀರು ಕುತ್ತಿ 4, ಬತ್ತಿಸಿ ಕುತ್ತಿ 1, ಇದರಲ್ಲಿ 16 ಪಲ ಹಳೆಬೆಲ್ಲ ಕೂಡಿಸಿ, ಚೂರ್ಣಕ್ಕೆ-ಭದ್ರ ಮುಷ್ಠಿ, ಕೊತ್ತಂಬರಿ, ಜೀರಿಗೆ, ಏಲಕ್ಕಿ, ಲವಂಗಚೆಕ್ಕೆ, ನಾಗಕೇಸರಿ, ಕರಿಮೆಣಸು, ಒಣಶುಂಠಿ, ಹಿಪ್ಪಲಿ ಇವುಗಳು ತೊಲೆ 1ರಂತೆ ಚೂರ್ಣ ಮಾಡಿ ಲೇಹ್ಯಪಾಕದಲ್ಲಿ ಈ ಚೂರ್ಣಕೂಡಿಸಿ ಸೇವಿಸಲು ಛರ್ದಿ, ಅರುಚಿ, ಮೊದಲಾದುವುಗಳು ಶಮನವಾಗುವುವು.

॥ पिप्पल्यादि रसायनम् ॥

पिप्पल्याश्च रजःप्रस्थं शर्करायास्तदर्धकम् ।
विडङ्गं नागरं भार्ङ्गी जीरकं मरिचं पृथक् ॥ ५७ ॥
चतुष्पलं तदर्धं स्यात् पिप्पलीमूलमेव च ।
चव्या च द्विगुणी चैव चित्रकं द्विपलं तथा ॥ ५८ ॥
अयोरजश्च द्विपलं भृंगस्य च रजस्तथा ।
त्रिजातकं त्रिफलिका जाती तक्कोलजं फलम् ॥ ५९ ॥
सर्वमेकत्र सञ्चूर्ण्य मधुप्रस्थद्वयं क्षिपेत् ।
धान्ये पक्षास्थितं लिह्यात् कासश्वासं च दारुणम् ॥ ६० ॥
एकादशात्मकं शोफं छर्दिं गुल्ममरोचकम् ।
अर्शांसि पांडुरोगं च विषमज्वरमेव च ॥ ६१ ॥

पीनसं स्वरसादं च सर्वमेव विनाशयेत् ।
अश्विभ्यां विहितो योगः पिप्पल्यादि रसायनम् ॥ ६२ ॥

## ಪಿಪ್ಪಲೀ ರಸಾಯನ

ಹಿಪ್ಪಲೀಚೂರ್ಣ ಪಲ 16, ಸಕ್ಕರೆ ಪಲ 8, ವಾಯುವಿಳಂಗ, ಒಣ ಶುಂಠಿ, ಕಿರುತೇಗು ಬೇರು, ಜೀರಿಗೆ, ಕರಿಮೆಣಸು ಇವುಗಳು ಬೇರೆಬೇರೆ ಪಲ 4ರಂತೆ, ಹಿಪ್ಪಲಿಮೂಲ ಪಲ 2, ಕಾಡು ಕರಿಮೆಣಸಿನ ಬೇರು ಪಲ 2, ಚಿತ್ರಮೂಲ ಬೇರು ಪಲ 2, ಶುದ್ಧಮಾಡಿದ ಕಬ್ಬಿಣದ ಚೂರ್ಣ ಪಲ 2, ಭೃಂಗರಾಜ(ಗರ್ಗ)ವನ್ನು ಅರೆದು ಒಣಗಿಸಿದ ಚೂರ್ಣ ಪಲ 2, ಏಲಕ್ಕಿ, ಲವಂಗಚೆಕ್ಕೆ, ತಮಾಲಪತ್ರೆ, ಅಣಲೆಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ಜಾಯಿಕಾಯಿ, ತಕ್ಕೋಲ ಇವುಗಳು ಪ್ರತಿಯೊಂದು ಪಲ 1ರಂತೆ ಚೂರ್ಣಿಸಿ, ಜೇನುತುಪ್ಪ ಪ್ರಸ್ಥ 2ನ್ನು ಕೂಡಾ ಸೇರಿಸಿ ಧಾನ್ಯರಾಶಿಯ ಮಧ್ಯದಲ್ಲಿ 15 ದಿನಗಳ ವರೆಗೆ ಗುಪ್ತವಾಗಿಟ್ಟು ಅನಂತರ ಕ್ರಮದಂತೆ ಸೇವಿಸಲು, ಕಾಸ, ಶ್ವಾಸ, ಛರ್ದಿ, ಗುಲ್ಮ, ಅರುಚಿ, ಅರ್ಶಸ್ಸ್, ಪಾಂಡು, ವಿಷಮಜ್ವರ, ಪೀನಸ, ಸ್ವರಸಾದ ಇವುಗಳು ಶಮನವಾಗುವುವು.

॥ शतावरी गुडम् ॥

गुडाढकेन संसृज्य शतावर्या रसाढकम् ।
घृतप्रस्थं समावाप्य शनैर्मृद्वग्निना पचेत् ॥ ६३ ॥
विश्वैलामुसलीपाठाश्वदंष्ट्रासारिवाद्वयैः ।
वत्सं झडाविदारीभिर्मागधीमधुकाद्रिजैः ॥ ६४ ॥
अक्षांशैश्चूर्णितैः सम्यक् लेहे सिद्धेऽवतारिते ।
कुडवं च तुगाक्षीर्याः शर्करायाश्चतुष्पलम् ॥ ६५ ॥
तल्लेहं स्वनगुप्तं तु सप्तरात्रं निधापयेत् ।
प्रलिह्यात् प्रातरुत्थाय यथाग्निबलमातुरः ॥ ६६ ॥
विंशतिं मूत्रकृच्छ्राणां प्रमेहाणां च विंशतिम् ।
वातपित्तमसृक्पित्तं मूढवातं हलीमकम् ॥ ६७ ॥

क्षतंक्षयं पाददाहं कामिलामूत्रंतामपि ।
योनिदोषं रजोदोषमस्थिस्रावमसृग्दरम् ॥ ६८ ॥
वातपित्तकृतान्रोगानन्यानपि विनाशयेत् ।
शतावरीगुडाख्यं तु रसायनमनुत्तमम् ॥ ६९ ॥

## ಶತಾವರೀ ಗುಡ

ಶತಾವರೀ ಸ್ವರಸ ಕುತ್ತಿ 4, ಬೆಲ್ಲ ಪಲ 64, ದನದ ತುಪ್ಪ ಪ್ರಸ್ಥ 1, ಮೃದು ಅಗ್ನಿಯಿಂದ ಪಾಕಮಾಡಿ ಲೇಹಪಾಕದಲ್ಲಿರುವಾಗ ಒಣಶುಂಠಿ, ಏಲಕ್ಕಿ, ನೆಲತಾಳಿ ಗಡ್ಡೆ, ಪಾಡಾವಳಿ ಬೇರು, ನ್ಯಾಸೊಣಗು ಬೇರು, ನಾಮದ ಬೇರು, ಹಾಲುಬಳ್ಳಿ ಬೇರು, ತಾತಾ್ರವಲ್ ಬೇರು, ನೆಲನೆಲ್ಲಿ ಬೇರು, ವಿದಾರಿ ಗಡ್ಡೆ, ಹಿಪ್ಪಲಿ, ಜ್ಯೇಷ್ಠಮಧು, ಕಲ್ಮದ ಇವುಗಳು ಪ್ರತಿಯೊಂದು ತೊಲೆ 1ರಂತೆ, ತುಗಾಕ್ಷೀರಿ ತೊಲೆ 16, ಸಕ್ಕರೆ ಪಲ 4, ಇವುಗಳನ್ನು ಚೂರ್ಣಮಾಡಿ ನೇರಿಸಿ ತಯಾರಿಸಿದ ಈ **ಶತಾವರೀ ಗುಡ**ದ ಸೇವನೆಯಿಂದ ಮೂತ್ರಕೃಚ್ಛ್ರ, ಪ್ರಮೇಹ, ವಾತಪಿತ್ತ, ರಕ್ತಪಿತ್ತ, ಮೂಢವಾತ, ಹಲೀಮಕ, ಕ್ಷಯ, ಪಾದದಾಹ, ಯೋನಿದೋಷ, ರಜೋದೋಷ, ಅಸ್ಥಿಸ್ರಾವ ಮೊದಲಾದ ರೋಗಗಳು ನಿವಾರಣೆಯಾಗುವುವು.

॥ इक्षुरादि लेहः ॥

इक्षुरगोक्षुरमर्कटिबीजं ।
मुसलिशतावरिमाषतिलैश्च ॥
गोघृतशर्करमधुसंयुक्तं ।
नारीगदगजकेसरियोगम् ॥ ७० ॥

## ಇಕ್ಷುರಾದಿ ಲೇಹ

ಮುಳ್ಳು ಅಂಕೋಲೆ ಬೀಜ (ಬಯಲಮುಳ್ಳು ಬೀಜ), ನೆಗ್ಗಿನಮುಳ್ಳು, ನಾಯಿಸೊಣಗು ಬೀಜ, ನೆಲತಾಳಿ ಗಡ್ಡೆ, ಶತಾವರಿ ಬೇರು, ಉದ್ದು, ಎಳ್ಳು, ಇವುಗಳ ಚೂರ್ಣವನ್ನು ಸಕ್ಕರೆಯ ಪಾಕದಲ್ಲಿ ಕೂಡಿಸಿ, ದನದ ತುಪ್ಪ

ಜೇನುತುಪ್ಪಗಳನ್ನೂ ಕೂಡಿಸಿ ಉಪಯೋಗಿಸಲು 'ನಾರಿಜನರ ರೋಗವೆಂಬ ಆನೆಗೆ ಸಿಂಹದಂತಿರುವ ಈ ಯೋಗವು' ಬಲಕ್ಕೆ ಅತೀವ ಶ್ರೇಷ್ಠವಾಗಿರುವುದು.

॥ मधुस्नुही रसायनम् ॥

त्रिकटुत्रिफलात्रिजातजाती ।
फलपल्यग्निवशाळधान्यकानि ॥
त्रियवानिविडङ्गचव्यकुष्ट ।
त्रिवृताग्रंथिकवाजिगंधकानि ॥ ७१ ॥

स भार्ङ्गीतेजोवतिकेसराणि ।
निष्कद्वयोन्मानविचूर्णितानि ॥
संशुद्धगंधोपलमाहिषाक्ष ।
मधुस्नुहीनां च चतुष्पलानि ॥ ७२ ॥

द्विषट्पलोन्मानघृते विपक्के ।
सितोपलद्वादशकं क्षिपेच्च ॥
ततोन्मथित्वा तु खजेन तस्मिन् ।
सुपाकमायाति ततोऽवतार्य ॥ ७३ ॥

पूर्वोक्तचूर्णानि विकीर्य शीते ।
गंधोपलस्यापि रजांसि दत्वा ॥
संयोज्य सम्यक् च सुशीतलेऽस्मिन् ।
प्रस्थं प्रदद्यात् मधुनः सुपात्रे ॥ ७४ ॥

विन्यस्य गुप्तं तु रसायनं तत् ।
प्रातर्लिहेत् कर्षयुतं हिताशी ॥
कुष्टं किलासं पिटकान् प्रमेहान् ।
भगंदरार्शोऽर्बुदगंडमालाः ॥ ७५ ॥

निहंति कंड्वामयवातरक्त ।
पित्तोद्भवान् गुह्यभवान् व्रणांश्च ॥
रसायनोऽयं मुनिना कृतश्च ।
मधुस्नुही नामक एष मुख्यः ॥ ७६ ॥

## (ಬೃಹತ್) ಮಧುಸ್ನುಹೀ ರಸಾಯನವು

ಕರಿಮೆಣಸು, ಹಿಪ್ಪಲಿ, ಶುಂಠಿ, ಅಣಿಲೆಕಾಯಿ ಸಿಪ್ಪೆ, ಶಾಂತಿಕಾಯಿ ಸಿಪ್ಪೆ, ನೆಲ್ಲಿಕಾಯಿ ಸಿಪ್ಪೆ, ಏಲಕ್ಕಿ, ಲವಂಗಚಕ್ಕೆ, ತಮಾಲಪತ್ರೆ, ಜಾಯಿಕಾಯಿ, ಜಾಪತ್ರೆ, ಚಿತ್ರಮೂಲ ಬೇರು (ಶುದ್ಧಿ), ಲವಂಗ, ಕೊತ್ತಂಬರಿ, ಜೀರಿಗೆ, ಕರಿಜೀರಿಗೆ, ಕಾಳಾಜೀರಿಗೆ, ವಾಯುವಿಳಂಗ, ಕಾಡುಮೆಣಸಿನ ಬೇರು. ಬಿಳಿಕಂಕುಷ್ಠ, ತ್ರಿಗಡೆ, ಕಾಡುಹಿಪ್ಪಲಿ ಬೇರು, ಅಶ್ವಗಂಧಿ, ಕಿರುತೇಗು, ಚೆಪ್ಪುನ್ನಯರಿ, ನಾಗಕೇಸರ ಇವುಗಳು ಬೇರೆಬೇರೆಯಾಗಿ 2—2 ಕೈಂಜಗಳಂತೆ ಕೂಡಿಸಿ, ವಸ್ತ್ರಗಾಳಿತ ಚೂರ್ಣಮಾಡಬೇಕು. ಅನಂತರ (ಶುದ್ಧಮಾಡಿದ) ಗಂಧಕ, ಗುಗ್ಗುಲು, ಚೀನಿಪಾವು, ಇವುಗಳು ಪ್ರತಿಯೊಂದು 4-4 ಪಲ ಕೂಡಿಸಿ, ಚೂರ್ಣಿಸಬೇಕು. ಆ ಮೇಲೆ 48 ತೊಲೆ ತುಪ್ಪ ಒಲೆಯಲ್ಲಿಟ್ಟು ಅದರಲ್ಲಿ 12 ಪಲ ಸಕ್ಕರೆ ಹಾಕಿ ಮುಂಚೆ ಹೇಳಿದ ಚೂರ್ಣಗಳೆಲ್ಲವನ್ನು ಕೂಡಿಸಿ ಲೇಹ್ಯಪಾಕದಲ್ಲಿಳಿಸಿ, ದರ್ವೀ(ಸಟ್ಟುಗ)ಯಿಂದ ಚೆನ್ನಾಗಿ ಮರ್ದಿಸಿ, ಸ್ವಲ್ಪ ಬಿಸಿಯಾರಿದ ಮೇಲೆ ಗಂಧಕ ಚೂರ್ಣವನ್ನಿಟ್ಟು ಅದನ್ನು ಚೆನ್ನಾಗಿ ಮಿಶ್ರಣವಾಗುವಂತೆ ಮಾಡಿ, ಚೆನ್ನಾಗಿ ಬಿಸಿಯಾರಿಸ ಮೇಲೆ ಒಂದು ಪ್ರಸ್ಥ ಜೇನುತುಪ್ಪವನ್ನು ಸಹಾ ಹಾಕಿ, ಪವಿತ್ರಪಾತ್ರದಲ್ಲಿ ಗುಪ್ತವಾಗಿಡುವುದು (ಧಾನ್ಯಸ್ಫುಟವಾಗಬೇಕೆಂದು ಕೆಲವರ ಅಭಿಪ್ರಾಯು). ಈ ಅತಿ ಮಹತ್ವಾದ **ಮಧುಸ್ನುಹೀ** ರಸಾಯನವನ್ನು 3 ಕೈಂಜಿ ತೂಕ ತೆಗೆದು ಪ್ರಾತಃಕಾಲದಲ್ಲಿ ವಿಶೇಷ ತರದ ಪಥ್ಯದಿಂದ ಸೇವಿಸಲು-ಕುಷ್ಠ, ಕಿಲಾಸ, ಪಿಟಕಾ, ಕುರು, ಪ್ರಮೇಹ, ಭಗಂಧರ, ಮೂಲವ್ಯಾಧಿ, ಆರ್ಬುದ, ಗಂಡಮಾಲಾ, ತುರಿಸುವಿಕೆ, ವಾತರಕ್ತ, ಪಿತ್ತೋಲ್ಬಣ, ಗುಹ್ಯವ್ರಣ ಇತ್ಯಾದಿ ನಾನಾ ತರದ ವ್ಯಾಧಿಗಳನ್ನು ನಿಸ್ಸಂಶಯವಾಗಿ ನಿವಾರಿಸುವುದು.

॥ मधुस्नुही रसायनम् ॥

छिकुंडलीफलत्रयं कटुत्रयं त्रिजातकं यवानिसैंधवान्वितम् । विडङ्ग-साररास्नकं सभार्ङ्गि चव्य ग्रंथिकं च धान्ययुग्मजीरकं च सांग्निकुष्ठ-चित्रकं च । सारिवावराहिकाश्वगंधसंयुतं पृथक्कर्षं चूर्णितं मधुस्नुही तु तत्समं सशर्करं समांशकं सगोघृतं समाक्षिकं सुपक्वं रसायनं । प्रभातकालसेवितं सुदीपनं रुचिप्रदं वातपित्तरूक्षजं च श्लेष्मकं क्षयघ्नकं प्रमेहहारिगुल्मशूलकुष्टजं नृणां परम् । सर्वधातुवर्धनं बलप्रदं सुखप्रदं पूज्यपादभाषितं मधुस्नुहीरसायनम् ॥ ७७ ॥

## ಮಧುಸ್ನುಹೀ ರಸಾಯನವು

ಅಮೃತಬಳ್ಳಿ, ಪುನರ್ನವೆ ಬೇರು, ಅಣಿಲೆಕಾಯಿ, ಶಾಂತಿಕಾಯಿ, ನೆಲ್ಲಿಕಾಯಿ, ಕರಿಮೆಣಸು, ಹಿಪ್ಪಲಿ, ಶುಂಠಿ, ಏಲಕ್ಕಿ, ಲವಂಗಚೆಕ್ಕೆ, ತಮಾಲಪತ್ರೆ, ಜೀರಕ, ಸೈಂಧವ ಲವಣ, ವಿಡಂಗತಿರುಳು, ರಾಸ್ನೆ, ಕಿರುತೇಗು ಬೇರು, ಕಾಡು-ಕರಿಮೆಣಸಿನ ಬೇರು, ಕಾಡುಹಿಪ್ಪಲಿ, ಕೊತ್ತಂಬರಿ, ಜೀರಿಗೆ, ಕರಿಜೀರಿಗೆ, ಜಟಾಮಾಂಸಿ, ಬಿಳಿಕಂಕುಷ್ಠ, ಚಿತ್ರಮೂಲ (ಶುದ್ಧಿ), ನಾಮದ ಬೇರು, ನೆಲತಾಳಿ ಗಡ್ಡೆ, ಅಶ್ವಗಂಧಿ, ಇವುಗಳು ಪ್ರತಿಯೊಂದು ಬಗೆಗಳು 1—1 ಕರ್ಷತೂಕ, ಇವುಗಳ ಸಮಭಾಗ ಶುದ್ಧಮಾಡಿದ ಜೀನಿ ಪಾಲಿನ ಚೂರ್ಣ, ಅಷ್ಟೇ ಸಕ್ಕರೆ, ದನದ ತುಪ್ಪ, ಜೇನುತುಪ್ಪ ಇವುಗಳನ್ನು ಸಹಾ ಯುಕ್ತರೀತಿಯಿಂದ ಸೇರಿಸಿ, ಸೇವಿಸಲು, ದೀಪನ, ಅರುಚಿ, ವಾತ ಪಿತ್ತ ಕಫಾಧಿಕ್ಯಗಳ ಸಂಬಂಧವಾದ ರೋಗಗಳು, ಕ್ಷಯ, ಪ್ರಮೇಹ, ಗುಲ್ಮ, ಶೂಲ, ಕುಷ್ಠ ಇತ್ಯಾದಿ ರೋಗಗಳಿಗೂ (ಅತೀವ ಹಿತಕಾರಿಯಾಗಿ) ಧಾತುಗಳ ಅಭಿವೃದ್ಧಿಗೂ ಶಕ್ತಿಗೂ ಹಿತಕಾರಿಯಾಗಿ ಈ ರಸಾಯನವು ಪರಿಣಮಿಸುವುದೆಂದು ಪೂಜ್ಯಪಾದರಿಂದ ಉಪದೇಶಿಸಲ್ಪಟ್ಟಿರುವುದು.

## ಖದಿರಾದಿ ರಸಾಯನವು

ಕಾಚಿತಿರುಳು ಪಲ 16, ಕಡಿರಬೇರು ಪಲ 4, ಬಿಲ್ವಪತ್ರೆ ಬೇರು, ಮರದರಸಿನ ಸಿಪ್ಪೆ, ಅಶ್ವಗಂಧಿ ಇವುಗಳು 4 ಪಲಗಳಂತೆ, 12 ಕುತ್ತಿ

ಕಷಾಯದಲ್ಲಿ ಬತ್ತಿಸಿ ಕುತ್ತಿ 1½ಗೆ ನೆಲ್ಲಿಕಾಯಿ ಪಲ 4, 4ಕುತ್ತಿ ನೀರಿನಲ್ಲಿ ಬತ್ತಿಸಿ ಕುತ್ತಿ 1, ದ್ರಾಕ್ಷಿ ಪಲ 6, 6ಕುತ್ತಿ ನೀರಿನಲ್ಲಿ ಕುದಿಸಿ 1½ ಕುತ್ತಿ, ಇವೆರಡು ಬಗೆಯ ಕಷಾಯಗಳನ್ನು ಮುಂಚೆ ಹೇಳಿದ ಕಷಾಯದೊಂದಿಗೆ ಸೇರಿಸಿ, ಗಾಳಿಸಿ ಅದಕ್ಕೆ 16ಪಲ ಬೆಲ್ಲ ಹಾಕಿ ಪಾಕವಾಗುವಾಗ 4 ಪಲ ಸಕ್ಕರೆ, ಕರಿಮೆಣಸು, ಹಿಪ್ಪಲಿ, ಶುಂಠಿ, ಏಲಕ್ಕಿ, ಲವಂಗಚೆಕ್ಕೆ, ತಮಾಲಪತ್ರೆ, ಜಾಯಿಕಾಯಿ, ಲವಂಗ, ಜಾತಿಪತ್ರೆ, ಗಂಧಮೆಣಸು, ತಾಲೀಸಪತ್ರೆ, ನಾದಳಹುಳಿಯ ತಿರುಳು, ಜ್ಯೇಷ್ಠಮಧು, ಜೀರಿಗೆ, ಕರಿಜೀರಿಗೆ, ಓಮುಕಾಳು, ಕೊತ್ತಂಬರಿ, ಚೆಪ್ಪುನ್ನಯರಿ, ಕಾಕೋರ್ಲರಿ, ವಿಶಾಲರಿ, ಅಶ್ವಗಂಧಿ, ತಕ್ಕೋಲ, ಚಿತ್ರಮೂಲ(ಶುದ್ಧಿ), ನೆಲಕುಂಬುಳಗಡ್ಡೆ, ನೆಲತಾಳಿಗಡ್ಡೆ, ನಾಮದ ಬೇರಿನ ಸಿಪ್ಪೆ, ಕೊಡಗಪಾಲರಿ, ತಾವರೆ ಕುಸುಮ ಇವು ಪ್ರತಿಯೊಂದು ತೊಲೆ 2ರಂತೆ, ವಸ್ತ್ರಗಾಳಿತ ಚೂರ್ಣಿಸಿ, ದನದ ತುಪ್ಪ ತೊಲೆ 16ನ್ನು ಕೂಡಿಸಿ, ಲೇಹ್ಯಪಾಕದಲ್ಲಿಳಿಸಿ, ಬಿಸಿಯಾರಿದ ಮೇಲೆ ಜೇನುತುಪ್ಪ ತೊಲೆ 16ನ್ನು ಸೇರಿಸಿ ಸೇವಿಸಲು, ಕಾಸ, ಶ್ವಾಸ, ವಾಯುಕ್ಷೋಭ, ಕ್ಷಯ, ಹೊಟ್ಟೆನೋವು, ಕ್ರಿಮಿಗಳ ಉಪದ್ರವ ಇವುಗಳೆಲ್ಲಾ ಶಮನವಾಗುವುವು. ರಕ್ತಶುದ್ಧಿಯನ್ನುಂಟುಮಾಡಿ ದೇಹಕ್ಕೆ ಆರೋಗ್ಯವನ್ನು ವರ್ಧಿಸುವುದು.

॥ दशमूलावलेहः ॥

दशमूलबलैरंडभार्ङ्गीतामलकीवृषाः ।
रास्नाचव्याऽश्मभिद्दारुसैरिकग्रंथिकाग्निभिः ॥ ७८ ॥
शृङ्गीफलत्रिकालोहशठीकूलकपौष्करैः ।
तुल्यैरेभिर्जलद्रोणे साधयेत्सुसमाहितः ॥ ७९ ॥
पादावशेषिते तस्मिन्नर्धं गुडतुलां भवेत् ।
दार्वीप्रलेपिते ज्ञाते चूर्णान्येतानि निक्षिपेत् ॥ ८० ॥
चातुर्जातघनव्योषजीरकद्वयदीप्यकम् ।
धान्यकं चाक्षयुग्मानि तत्तुल्या सितशर्करा ॥ ८१ ॥

शीते तस्मिन् प्रदातव्यं गुडपादांशिकं मधु ।
प्रलिहेत् प्रातरुत्थाय शुद्धकायः सुयंत्रितः ॥ ८२ ॥
कासं श्वासं प्रतिश्यायमरोचकगळग्रहौ ।
वातरोगानशेषांश्च क्षयं गुल्मं च नाशयेत् ॥ ८३ ॥
लेहोऽयं दशमूलाख्यो निमिना परिनिर्मितः ।

## ದಶಮೂಲಾವಲೇಹ

ದಶಮೂಲಗಳು, ಕಡಿರಬೇರು, ಸಣ್ಣಹರಳು ಬೇರು, ನಿರ್ವಿಶದ ಬೇರು, ನೆಲನೆಲ್ಲಿ ಬೇರು, ಆಡ್ಸೋಗೆ ಬೇರು, ಅರತ್ತೆ, ಕಾಡುಕರಿಮೆಣಸಿನ ಬೇರು, ಪಾಷಾಣಭೇದಿ, ದೇವದಾರು, ಕರಿಕುರಿಞಾ ಬೇರು, ಕಾಡು ಹಿಪ್ಪಲಿ ಬೇರು, ಚಿತ್ರಮೂಲ ಬೇರು (ಶುದ್ಧಿ), ಕರ್ಕಾಟಕಶೃಂಗಿ, ತ್ರಿಫಲೆಗಳು, ಶುದ್ಧಮಾಡಿದ ಉಕ್ಕಿನಪುಡಿ, ಕಚ್ಚೂರ, ಕಾಡುಪಟೋಲಬಳ್ಳಿ, ಪುಷ್ಕರಮೂಲ ಇವುಗಳು ಪ್ರತಿಯೊಂದು ಪಲ 1ರಂತೆ, 16 ಕುತ್ತಿ ಕಷಾಯದಲ್ಲಿ ಬತ್ತಿಸಿ ಕುತ್ತಿ 4ಕ್ಕೆ ಬೆಲ್ಲ ಪಲ 24ನ್ನು ಹಾಕಿ ಲೇಹ ಪಾಕದಲ್ಲಿ ಏಲಕ್ಕಿ, ಲವಂಗಚೆಕ್ಕೆ, ತಮಾಲಪತ್ರೆ, ನಾಗಕೇಸರ, ಭದ್ರ ಮುಷ್ಠಿ, ಕರಿಮೆಣಸು, ಹಿಪ್ಪಲಿ, ಶುಂಠಿ, ಜೀರಿಗೆ, ಕರಿಜೀರಿಗೆ, ಓಮು ಕಾಳು, ಕೊತ್ತಂಬರಿ ಇವು ತೊಲೆ 2ರಂತೆ ಕೂಡಿಸಿ, ವಸ್ತ್ರಗಾಳಿತ ಚೂರ್ಣ ಮಾಡಿ 6 ಪಲ ಜೇನುತುಪ್ಪವನ್ನೂ ಕೂಡಿಸಿ, ಪ್ರತಿದಿನ ಸೇವಿಸಲು ಕಾಸ, ಶ್ವಾಸ, ಪೀನಸ, ಅರುಚಿ, ಗಳಗ್ರಹ, ವಾತಗುಲ್ಮ, ಗುಲ್ಮ, ಇವುಗಳನ್ನು ನಿವೃತ್ತಿಪಡಿಸುವ ಈ ಪ್ರಖ್ಯಾತ 'ದಶಮೂಲ ರಸಾಯನ'ವು ಭಗವಾನ್ ಅತ್ರಿಮಹರ್ಷಿಗಳಿಂದ ಹೇಳಲ್ಪಟ್ಟದ್ದಾಗಿದೆ.

॥ अभयामोदकः ॥

अभया मरिचं शुंठीविडङ्गामलकानि च ।
पिप्पली पिप्पलीमूलं त्वक् पत्रं मुस्तमेव च ॥ ८४ ॥
एतानि समभागानि दंती च द्विगुणा भवेत् ।
त्रिवृदष्टगुणा ज्ञेया षड्गुणा चात्र शर्करा ॥ ८५ ॥

मधुना मोदकान् कृत्वा कर्षमात्रप्रमाणतः ।
एकैकं भक्षयेत्प्रातः शीतं चानु पिबेज्जलं ॥ ८६ ॥
यावद्विरिच्यते जंतुर्यावदुष्णं न सेवते ।
पानाहारविहारेषु भवेन्नियंत्रणः सदा ॥ ८७ ॥
विषमज्वरमंदाग्निपांडुकासभगंदरान् ।
दुर्नामकुष्टगुल्मार्शोगलगंडभ्रमोदरान् ॥ ८८ ॥
विदाहप्लीहमेहांश्च यक्ष्माणं नयनामयान् ।
वातरोगांस्तथाध्मानं मूत्रकृच्छ्राणि चाश्मरीं ॥ ८९ ॥
हृत्पार्श्वोरुजघनजङ्घोदररुजं जयेत् ।
सततं शीलनादेषां पलितानि प्रणाशयेत् ॥ ९० ॥
अभयामोदका ह्येते रसायनावराः परम् ।

## ಅಭಯಾಮೋದಕವು

ಅಣಿಲೆಕಾಯಿ ಸಿಪ್ಪೆ, ಕರಿಮೆಣಸು, ಒಣಶುಂಠಿ, ವಾಯುವಿಳಂಗ, ನೆಲ್ಲಿಕಾಯಿಯ ಸಿಪ್ಪೆ, ಹಿಪ್ಪಲಿ, ಹಿಪ್ಪಲಿಮೂಲ, ಲವಂಗ ಚಕ್ಕೆ, ತಮಾಲ ಪತ್ರೆ, ಭದ್ರಮುಷ್ಠಿ, ಈ ಮದ್ದುಗಳೆಲ್ಲಾ ಸಮಭಾಗ, ನಾಗದಂತೀ ಬೇರು ದ್ವಿಗುಣ ಭಾಗ, ತ್ರಿಗಡೆ 8 ಭಾಗ, ಸಕ್ಕರೆ 6 ಪಾಲು ಹಾಕಿ ಜೇನು ತುಪ್ಪದಿಂದ ಮೋದಕವನ್ನಾಗಿ ಮಾಡಿ, ಪ್ರಾತಃಕಾಲ 1 ಕರ್ಷ (ತೊಲೆ) ಪ್ರಮಾಣದಷ್ಟು ಸೇವಿಸುವುದು, ಕೂಡಲೇ ಶೀತ ಜಲವನ್ನೂ ಕುಡಿಯ ಬೇಕು. ಸೇವಿಸಿದ ಮನುಷ್ಯನು ಎಷ್ಟರ ತನಕ ಬಿಸಿನೀರಾಗಲೀ, ಬಿಸಿ ಯಾದ ಯಾವ ಪದಾರ್ಥಗಳಾಗಲೀ ಸ್ವೀಕರಿಸುವುದಿಲ್ಲವೋ ಅಷ್ಟರ ತನಕ ವಿರೇಚಿಸುತ್ತಿರುವನು. ವಿರೇಚನೆಯು ಸ್ತಂಭವಾಗಲು ಬಿಸಿಯು ಅವಶ್ಯಕವು; ಪಾನಾಹಾರ ವಿಹಾರಗಳಲ್ಲಿ ಜಾಗರೂಕತೆಯಿಂದ ವರ್ತಿಸಿ, ಈ ಮದ್ದನ್ನು ಸೇವಿಸಲು ವಿಷಮಜ್ವರ, ಮಂದಾಗ್ನಿ, ಪಾಂಡು, ಕಾಸ, ಭಗಂಧರ, ದುರ್ನಾಮ, ಕುಷ್ಠ, ಗುಲ್ಮ, ಅರ್ಶಸ್, ಗಲಗಂಡ ವಿದಾಹ, ಪ್ಲೀಹ, ಮೇಹ, ರಾಜಯಕ್ಷ್ಮ, ನಯನರೋಗ, ವಾತರೋಗ,

ಆದ್ಮಾನ, ಮೂತ್ರಕೃಚ್ಛ್ರ, ಅಶ್ಮರೀ, ಪೃಷ್ಠ, ಪಾರ್ಶ್ವ, ಉದರರೋಗಗಳು, ನಿವಾರಣೆಯಾಗುವುದಲ್ಲದೆ ಸದಾ ಉಪಯೋಗದಿಂದ ಪಲಿತಾದಿ ಅಕಾಲದಲ್ಲಿ ಕೇಶಗಳು ಬಿಳಿಯಾಗುವ ದೋಷಗಳನ್ನೂ ನೀಗಾಡಿಸುವ "ಅಭಯಾಮೋದಕ" ರಸಾಯನವು ಅತಿ ಶ್ರೇಷ್ಠವಾದುದು.

॥ चातुर्जात रसायनम् ॥

चातुर्जातकचोरचंदनजलद्राक्षातुकारेणुकम् ।
कस्तूरीतगरेंदुकुङ्कुमजटा कुष्ठाश्वगंधाब्दकम् ॥
काकोलीसुरदारुचित्रकवचा द्वौ जीरकौ सैंधवम् ।
श्रार्ङ्गीगोक्षुरदेवपुष्पमुसली यष्टीबलाफेनकम् ॥ ९१ ॥
रंभाकंदफलत्रयं त्रिकटुकं जातीफलं वालकम् ।
तालीसं कटुकीफलं गजकणा माषामृता शर्करा ॥
गुसाभृंगविदारिका मदन जंबीरं च कुंभ्युद्भवम् ।
शाल्मल्यंघ्रिपुनर्नवागुरुशलावर्योऽप्यथोदीप्यकम् ॥ ९२ ॥
पादांशं मृतसभ्रकं च विजया तुल्यौषधानां समम् ।
सर्वेषां सदृशी सिता च मधुना चाज्येन सम्पेषितम् ॥
जातीचंपककेतकादिकुसुमैः संवेलसं वासितम् ।
कर्षार्धं निशि देहसिद्धिदमहाकामेशरः कामदः ॥ ९३ ॥
पुसां शुक्रविवृद्धिदार्ढ्यकरणः क्षीरानुपानो हितः ।
शाल्मल्यंघ्रिजलानुपानमधुनाप्यन्यच्च यच्छुक्रदं ॥
प्रौढानां सुदृशां सुखातिसुखदो वश्यावहो द्रावकः ।
सङ्गे भङ्गुरकामकौतुकरसक्रीडाकलासंमतः ॥ ९४ ॥
संभोगे स्थविरान् नियोक्ष्यति यथा यूनां स्मरोदर्पिते ।
नित्यानंदनिदानमादिपुरुषेरप्याहितास्वादनः ॥
वाचां सिद्धिकरः प्रसिद्धकविता संदर्भसंबादन ।
सौख्यारोग्यविशेषयौवनकला सामर्थ्य संपादकः ॥ ९५ ॥

वृद्धत्वं हरते बलं च कुरुते मृत्युं निरस्यत्यलम् ।
व्याधिव्रातमपाकरोति कुरुते कांतिं च मत्यार्जवम् ॥
योगाभ्यासविधावतीव सुखदां सिद्धिं विधत्ते तरा ।
मंहःसंहतिसंवृतिं कलयते स्त्रीणामपत्यप्रदः ॥ ९६ ॥
रोगाणां निचयक्षयं क्षपयते क्षिप्रं महारुग्गणम् ।
व्याहंति श्वसनं क्षयं गमयति छिंदन् हि कासोदयम् ॥
दुर्नामानि षडाछिनत्ति हरते सर्वातिसारोल्बणम् ।
मेहौघं च रुणद्धि शोणितगदं विध्वंसते सेवनात् ॥ ९७ ॥

## ಚಾತುರ್ಜಾತ ರಸಾಯನವು

ಏಲಕ್ಕಿ, ಲವಂಗಚೆಕ್ಕೆ, ತಮಾಲಪತ್ರೆ, ನಾಗಕೇಸರಿ, ಕಚ್ಚೂರ, ಚಂದನ, ಇರುವೇರಿದಂಡು, ದ್ರಾಕ್ಷೆ, ತುಗಾಕ್ಷೀರಿ, ರೇಣುಕೀ ಬೀಜ, ಕಸ್ತೂರಿ, ತಗರ, ಕರ್ಪೂರ, ಕುಂಕುಮಕೇಸರಿ, ಜಟಾಮಾಂಸಿ, ಅವ್ವಲ್ ಕಂಕುಷ್ಠ, ಅಶ್ವಗಂಧಿ, ಭದ್ರಮುಷ್ಟಿ, ಕಾಕೋಳೀ ದೇವದಾರು, ಚಿತ್ರ ಮೂಲ(ಶುದ್ಧಿ) ಬಜೆ, ಜೀರಿಗೆ, ಕರಿಜೀರಿಗೆ, ಸೈಂಧವಲವಣ, ಕಿರುತೇಗು ಬೇರು, ನೆಗ್ಗಿನಮುಳ್ಳು, ಲವಂಗ, ನೆಲತಾಳಿ ಗಡ್ಡೆ, ಜ್ಯೇಷ್ಠಮಧು, ಕದಿರ ಬೇರು, ಕಡಲನುರೆ, ಕದಳಿಗಡ್ಡೆ, ತ್ರಿಫಲಾ, ಒಣಶುಂಠಿ, ಕರಿಮೆಣಸು, ಹಿಪ್ಪಲಿ, ಜಾಯಿಕಾಯಿ, ಜಾಪತ್ರೆ, ತಾಳೀಸಪತ್ರೆ, ಸೋರೆಕಾಯಿ, ಆನೆ ಹಿಪ್ಪಲಿ, ಉದ್ದು, ಅಮೃತಬಳ್ಳಿ, ಸಕ್ಕರೆ, ನಾಯಿಸೊಣಗು ಬೇರು, ಭೃಂಗ ರಾಜ(ಗರ್ಗ), ನೆಲಕುಂಬಳ ಗಡ್ಡೆ, ಉಮ್ಮತ್ತ ಬೀಜ, ನಾಗದಂತೀ ಬೀಜ, ಅತ್ತಿಯ ಬೇರು, ಪುನರ್ನವೆ ಬೇರು, ಅಗಿಲುಗಂಧ, ಶತಾವರೀ ಬೇರು, ಓಮುಕಾಳು ಇವುಗಳೆಲ್ಲಾ ಸಮಭಾಗ, ಯುಕ್ತರೀತಿಯಿಂದ ಚೆನ್ನಾಗಿ ಶುದ್ಧಮಾಡಿದ ಅಭ್ರಕವು ಮೇಲೆ ಹೇಳಿದ ಚೂರ್ಣದ 1/4 ಭಾಗ, ಶುದ್ಧಿಸಿದ ಭಂಗಿ ಚೂರ್ಣಗಳ ಸಮಭಾಗ, ಹಿಂದೆ ಸೂಚಿಸಿದ ಎಲ್ಲಾ ಬಗೆಯ ಚೂರ್ಣಗಳ ಸಮಪಾಲು ಸಕ್ಕರೆ, ಪ್ರಮಾಣಾನುಸಾರ ದನದ ತುಪ್ಪ, ಜೇನುತುಪ್ಪವನ್ನು ಸಹಾ ಸೇರಿಸಿ, ಜಾಜಿಮಲ್ಲಿಗೆ, ಸಂಪಿಗೆಪುಷ್ಪ, ಕೇದಿಗೆ ಪುಷ್ಪ ಮೊದಲಾದ ಸುಗಂಧಯುಕ್ತ ದ್ರವ್ಯಗಳಿಂದ ಚೆನ್ನಾಗಿ ಪರಿಮಳಿಸಿ

1/2 ತೊಲೆಯಂತೆ ಸೇವಿಸಬೇಕು. ಇದಕ್ಕೆ "ಮದನಕಾಮೇಶ್ವರೀ ಲೇಹ" ವೆಂದೂ "ಚಾತುರ್ಜಾತ ರಸಾಯನ"ವೆಂದೂ ಹೆಸರುಗಳಿರುವುವು. ಇದನ್ನು ರಾತ್ರಿಕಾಲದಲ್ಲಿ 1/2 ತೊಲೆಯಂತೆ ಸೇವಿಸಿ, ಹಾಲು, ಶುಕ್ಲವೃದ್ಧಿಯನ್ನುಂಟುಮಾಡುವ ಬೇರೆ ದ್ರವಪದಾರ್ಥ, ಅತ್ತಿಯ ನೀರು, ಅನುಪಾನವಾಗಿ ತೆಗೆದುಕೊಂಡರೆ ಶುಕ್ರಧಾತುಗಳ ಅಭಿವೃದ್ಧಿಯೂ, ಆರೋಗ್ಯದ ಆಧಿಕ್ಯವೂ, ದೇಹಕ್ಕೆ ಲಾವಣ್ಯವೂ ಉಂಟಾಗಿ, ವಾಯು, ಕ್ಷಯ, ಕಾಸ, ಅರ್ಶಸ್ಸು, ಅತಿಸಾರ, ಪ್ರಮೇಹ, ರಕ್ತಪಿತ್ತ ಇತ್ಯಾದಿ ರೋಗಗಳು ನಿವಾರಣೆಯಾಗುವುವು.

॥ आकारकरभादि चूर्णम् ॥

आकारकरभः शुंठी कक्कोलं कुंकुमं कणा ।
जातीफलं लवङ्गं च चंदनं चेति कार्षिकान् ॥ ९८ ॥
चूर्णानि मानतः कुर्यादहिफेनं पलोन्मितम् ।
सर्वमेकीकृतं चूर्णं मासैकं मधुना लिहेत् ॥ ९९ ॥
शुक्रस्तंभकरं चूर्णं पुंसामानंदकारकम् ।
नारीणां प्रीतिजननं सेवेत निशि कामुकः ॥ १०० ॥

## ಆಕಾರಕರಭಾದಿ ಚೂರ್ಣ

ಅಕಲ್ಕಾರೆ, ಒಣಶುಂಠಿ, ತಕ್ಕೋಲ, ಕುಂಕುಮಕೇಸರಿ, ಹಿಪ್ಪಲಿ, ಲವಂಗ, ಶ್ರೀಗಂಧ ಇವುಗಳು ತೊಲೆ 1ರಂತೆ ಅಹಿಫೇನ (ಶುದ್ಧಮಾಡಿದ ಅಫೀಮು) ತೊಲೆ 4ನ್ನು ಕೂಡಿಸಿ ಚೂರ್ಣಮಾಡಿ, ಜೇನುತುಪ್ಪದಲ್ಲಿ ಕಲಸಿ ಒಂದು ತಿಂಗಳು ವರೆಗೆ ರಾತ್ರೆಯಲ್ಲಿ ಸೇವಿಸಲು, ಗಂಡಸರಿಗೆ ಶುಕ್ಲ ಶೀಘ್ರಸ್ಖಲನ, ಶಿಥಿಲಾದಿಗಳನ್ನು ಹೋಗಲಾಡಿಸಿ, ವೀರ್ಯಸ್ತಂಭನವನ್ನುಂಟುಮಾಡಿ, ಅತುಲಾನಂದವನ್ನಿತ್ತು, ನಾರೀಜನಮನಮೋಹನನಾಗಿ ರಾರಾಜಿಸುವಂತೆ ಈ ದಿವ್ಯ ಚೂರ್ಣಾಮೃತವು ಮಾಡುವುದು.



ಇತಿ ಸಹಸ್ರಯೋಗದರ್ಪಣದೋಳ್
ಅವಲೇಹಕಲ್ಪನಾ ಪ್ರಕರಣವು
ಸಂಪೂರ್ಣವು.



## ॥ अथ धाराकल्प प्रकरणम् ॥

## ॥ ಅಥ ಧಾರಾಕಲ್ಪ ಪ್ರಕರಣಮ್ ॥

---

अनंतकल्याणगुणैकभाजनं ।
निरंतरानंदचिदेकविग्रहम् ॥
अनंतरायेप्सितसिद्धये वयं ।
तमेकदं तं सततं भजामहे ॥ १ ॥

ಪ್ರಾರಂಭಿಸುವ ಕಾರ್ಯಕ್ಕೆ ವಿಘ್ನಗಳು ಬಂದೊದಗದಂತೆಯೂ, ಸ್ವಾಭೀಷ್ಟವು ಸಾಧಿಸುವಂತೆಯೂ, ಅಖಿಲ ಸದ್ಗುಣಖನಿಯೂ, ಆನಂದಾನಂದತುಂದಿಲನೂ, ಚೈತನ್ಯಸ್ವರೂಪನೂ ಆದ ಮಹಾಗಣಪತಿಯನ್ನು ಸತತವು ನಾವು ಭಜಿಸುವೆವು.

धातूनां दृढतां करोति वृषतां देहाग्निवर्णौजसां ।
स्थैर्यं पाटवमिंद्रियस्य जरसा मांद्यं चिरं जीवितम् ॥
अस्थ्नां भंगमपाकरोति नितरां दोषान् समीरादिकान् ।
सर्वस्नेहकृता सुखोष्णसुभगा सर्वाङ्गधारा नृणाम् ॥ २ ॥

ಅಖಿಲ ಸ್ನೇಹಪದಾರ್ಥಗಳಿಂದ ಕೂಡಿದ, ಸುಖೋಷ್ಣವಾದ ಬೇಕಾದ ಹಾಗೆ ಮನುಷ್ಯರಿಗೆ ಸರ್ವಾಂಗಗಳಲ್ಲಿ ಮಾಡಲ್ಪಡುವ **ಧಾರಾ** ಎಂಬ ಯಾವದೊಂದು ಚಿಕಿತ್ಸಾಂಗವಿದೆಯೋ, ಅದು ರಸ, ಅಸ್ರಕ್, ಮಾಂಸ, ಮೇದಸ್, ಅಸ್ಥಿ, ಮಜ್ಜಾ, ಶುಕ್ರ ಎಂಬ ಸಪ್ತಧಾತುಗಳಿಗೆ ದಾರ್ಢ್ಯವನ್ನೂ, ಸ್ತ್ರೀಸಂಭೋಗಸಾಮರ್ಥ್ಯವನ್ನೂ, ಶರೀರ, ಜಠರಾಗ್ನಿ, ವರ್ಣ, ಓಜಸ್ಸ್ ಇವುಗಳಿಗೆ ಸ್ಥಿರತ್ವವನ್ನೂ, ಇಂದ್ರಿಯಗಳಿಗೆ ಆಯಾಯ ವಿಷಯ ಗ್ರಾಹಕ ಸಾಮರ್ಥ್ಯವನ್ನೂ, ಆಯುರಾರೋಗ್ಯಾಭಿವೃದ್ಧಿಯನ್ನೂ, ಎಲುಬುಗಳಿಗುಂಟಾಗುವ ದೋಷಗಳ ನಿವಾರಿಸುವಿಕೆಯನ್ನೂ, ವಾತ,

ಪಿತ್ತ, ಕಫ ಎಂಬ ಮೂರು ದೋಷಗಳ ಸಮತೆಯನ್ನೂ ವಿಶೇಷತಃ ಉಂಟುಮಾಡುತ್ತದೆ.

ಇನ್ನು ಧಾರಾಪಾತಿಯು ಈ ತರದ ಜಾತಿಯ ಮರಗಳಿಂದಲೇ ಮಾಡಲ್ಪಡುವುದೆಂದು ಸೂಚಿಸಲ್ಪಡುತ್ತದೆ.

प्लक्षोदुंबरगंधसारवरणन्यग्रोधदेवद्रुमाः ।
पुन्नागाह्वकपित्थचोचबकुलाशोकासनाम्रास्तथा ॥
डोलाचंपकबिल्वनिंबखदिराम्रोघाग्निमंथाऽर्जुना ।
इत्याद्यन्यतमेन सेचनविधौ द्रोणीं प्रकुर्याद्बुधः ॥ ३ ॥

ಗೋಳಿಮರ, ಅತ್ತಿಮರ, ಚಂದನದ ಮರ, ನೀರ್ಮಾದಳದ ಮರ, ಕಿನ್ನಿಗೋಳಿ ಮರ, ದೇವದಾರು ಮರ, ಪುನ್ನಾಗ, ಕಪಿತ್ಥ, ಲವಂಗ (ಪಾಠಾಂತರ-ಹಲಸು ಎಂದು ಕೆಲವರು), ರೆಂಜೆಮರ, ಅಶೋಕ, ಬೇಂಗದಮರ, ಮಾವಿನಮರ, 'ಡೋಲಾ' ಎಂಬ ವೃಕ್ಷವಿಶೇಷ, ಚಂಪಕ, ಬಿಲ್ವಪತ್ರೆ, ಬೇವು, ಕಾಚುಮರ, ಪಾದಿರಿಮರ, ನರ್ವೋಳುಮರ, ಬಣಪು ಮರ ಈ ವೃಕ್ಷಗಳ ಪೈಕಿ ಯಾವುದಾದರೊಂದು ಮರಗಳಿಂದ ಧಾರಾ ಪಾತಿಗಳನ್ನು ಮಾಡಬಹುದು.

द्रोणी हस्तचतुष्कदीर्घकरमात्रव्यासतत्पादमा- ।
त्रोच्चत् भित्तियुता दृढा समतला पादांतरंध्रा बहिः ॥
शीर्षस्थानइहोन्नतैककरमात्राताविस्तारका ।
निम्ना किंचन मध्यतश्च चरणैर्हस्तैश्च युक्ता दृढैः ॥ ४ ॥

## ಧಾರಾಪಾತಿಯ ಪ್ರಮಾಣ

ಧಾರಾಪಾತಿಯು 4 ಕೋಲು ಉದ್ದವೂ, 1 ಕೋಲು ಅಗಲವೂ, 6 ಬೆರಳು ಎತ್ತರವೂ ಇದ್ದು ಅತಿ ನುಣುಪಾಗಿಯೂ, ಸಮತಲವಾಗಿಯೂ ಇರಬೇಕು. ಕಾಲುಗಳು ಇಡುವ ಸ್ಥಳಗಳಲ್ಲಿ ಹೊರಗಡೆ ದ್ವಾರವಿಡಬೇಕು.

ತಲೆ ಇಡುವ ಸ್ಥಳವು ಸ್ವಲ್ಪ ಎತ್ತರವಾಗಿದ್ದು 1 ಕೋಲು ಆಗಲ ವಾಗಿದ್ದು ಅಷ್ಟೇ ಉದ್ದವೂ ಆಗಿರಬೇಕು. ಮಧ್ಯಸ್ಥಳವು ಕಿಂಚಿತ್ ತಗ್ಗಾಗಿರಬೇಕು. ಧೃಢವಾದ ಮತ್ತು ನಯವುಳ್ಳ ಕಾಲುಗಳೂ, ಇರ ತಕ್ಕದ್ದು ತತ್ವಾರ್ಥವು. ಪ್ರಾಯಶಃ ಈಗ ಕಾಣುವ ಧಾರಾಪಾತಿಗಳು ಮೇಲೆ ತೋರುವ ಪ್ರಮಾಣಗಳಿಗನುಸರಿಸದೆ, ಸಣ್ಣದಾಗಿರುವವೆಂದು ತಿಳಿದುಕೊಳ್ಳಬೇಕಾಗುವುದು.

एवं मारुतहारिभिश्च तरुभिर्द्रोणीं विधायादरा- ।
द्देवं चेभमुखं द्विजानपि भिषग्वृद्धान् प्रपूज्यातिथीन् ॥
पूर्वाह्णे दिवसे शुभादि सहिते लग्नेशयानस्यते ।
द्रोण्यां सेचनमाचरेत् पटुमतिर्द्रव्यैर्यथोक्तैर्भिषक् ॥ ५ ॥

ಈ ಪ್ರಕಾರ ಹಿಂದೆ ಹೇಳಿದ 'ಪ್ಲಕ್ಷ್ಯೋದುಂಬರ'ಆದಿ ವೃಕ್ಷ ಗಳಿಂದಾಗಲೀ, ವಾತಹಾರಿಗಳಾದ ವೃಕ್ಷಗಳಿಂದಾಗಲೀ, ಧಾರಾಪಾತಿ ಯನ್ನು ವಿರಚಿಸಿ, ಅನಂತರ ಮಹಾಗಣಪತಿಯನ್ನೂ, ಬ್ರಾಹ್ಮಣರನ್ನೂ, ಜ್ಞಾನವಯೋವೃದ್ಧರಾದ ವೈದ್ಯರನ್ನೂ, ಅತಿಥಿಗಳನ್ನೂ ಸಾದರಪೂರ್ವಕ ಸಂಪೂಜಿಸಿ, ಮಂಗಲದಾಯಕ ದಿನದ ಪೂರ್ವಾಹ್ನಕಾಲದಲ್ಲಿ ಶುಭಗ್ರಹ ರಾಶಿಗಳಲ್ಲಿ, ಇಟ್ಟಿರುವ ಧಾರಾಪಾತಿಯಲ್ಲಿ ಮಲಗುವ ರೋಗಿಯ ರೋಗ ನಿವಾರಣೆಯನ್ನು ಮಾಡತಕ್ಕ ದ್ರಷ್ಟ ಕರ್ಮನಾದ ವೈದ್ಯನು ದೂಷ್ಯದೇಶ ಬಲಕಾಲಾದಿಗಳನ್ನು ಪರಾಂಬರಿಸಿ, ಯುಕ್ತವಾದ ಸ್ನೇಹದ್ರವ್ಯಗಳಿಂದ ಧಾರಾ ಚಿಕಿತ್ಸೆಯನ್ನು ವಿಚಿಕಿತ್ಸೆಯಿಲ್ಲದೆ ವಿರಚಿಸಬೇಕು.

स्वर्णाद्युत्तमलोहतस्तुकरकोमृत्संभवो पात्रत- ।
स्थालं तु कनिष्ठिकाङ्गुलिपरीणाहोन्मितं रोगिणः ॥
द्विप्रस्थप्रमिते विधाय इति वा मध्यस्थरंध्रादधो ।
गच्छद्वर्तिरथोर्ध्वलंब्य विघटः कार्यः शिरःसेचने ॥ ६ ॥

ಸ್ವರ್ಣಾದಿ ಉತ್ತಮ ಲೋಹಗಳಿಂದಾಗಲೀ ಮಣ್ಣಿನ ಪಾತ್ರದಿಂದಾಗಲಿ, 2 ಪ್ರಸ್ಥ ನೀರು ಹಿಡಿಯುವ ಒಂದು ಕಮಂಡಲು(ಗಿಂಡಿ) ಮಾಡುವುದು. ಪಾತ್ರದ ತಲಭಾಗದಲ್ಲಿ ರೋಗಿಯ ಕಿರುಬೆರಳಿನ ತುದಿಗಾತ್ರದಷ್ಟು ರಂಧ್ರವಿರಬೇಕು. ಅಥವಾ 2 ಪ್ರಸ್ಥ ಹಿಡಿಯುವ ಒಂದು ಪಾತ್ರದ ಅಧೋಭಾಗದಲ್ಲಿ ರಂಧ್ರಮಾಡಿ ಆ ರಂಧ್ರಕ್ಕೆ ತಕ್ಕದಾದ ವಸ್ತ್ರದಿಂದ ನೆನೆಮಾಡಿ(ತಿರಿ. ಮ.) ಅದರಲ್ಲಿ ಇದನ್ನು ಸಿಕ್ಕಿಸಿ, ಆ ಮೂಲಕ ಒಂದೇ ರೀತಿಯಾಗಿ ಧಾರೆಯು ರೋಗಿಯ ಲಲಾಟದ ಊರ್ಧ್ವಭಾಗಕ್ಕೆ ಬೀಳುವಂತಾಗಬೇಕು.

ग्राह्यास्ते परिचारकाः स्युरनुरक्ताः सावधानाः शुभा ।
येतद्धस्तदृढावलंबनवशात्तत्पात्रपातादितः ॥
भीतिर्जातुचिदातुरस्य तु यथा नस्यात्तथा कारयेत् ।
धारां मूर्धनि हस्तयोरपि पृथग्वक्षस्तले पादयोः ॥ ७ ॥

ಧಾರಾ ಚಿಕಿತ್ಸೆಯನ್ನು ಮಾಡುವ ಪರಿಚಾರಕರು ರೋಗಿಯ ವಿಷಯದಲ್ಲಿ ಅತಿ ಸ್ನೇಹಭಾವವುಳ್ಳವರಾಗಿಯೂ, ಸಾವಧಾನಿಗಳಾಗಿಯೂ, ಪವಿತ್ರಾಂತಃಕರಣಿಗಳಾಗಿಯೂ ಇರಬೇಕು. ಮತ್ತು ಪರಿಚಾರಕರ ಕೈಯಿಂದ ಅವರು ಹಿಡಿದಿರುವ ಧಾರಾಪಾತ್ರೆಯು, "ಒಂದು ವೇಳೆ ತನ್ನ ಮೇಲೆ ಬಿದ್ದು ಅನರ್ಥವನ್ನು ತಂದೊಡ್ಡುವುದೋ" ಎಂಬ ಭೀತಿಯು ಲವಲೇಶವು ಒಂದಾವರ್ತಿಯಾದರೂ ರೋಗಿಗೆ ಉಂಟಾಗದಂತೆ ಕೈಗಳಿಂದ ಜಾಗರೂಕತೆಯಿಂದ ಹಿಡಿದಿರತಕ್ಕದ್ದು. ಹಾಗೆಯೇ ರೋಗಿಯ ಉತ್ತಮಾಂಗಕ್ಕೂ, ಕೈಗಳ ಮೇಲೂ, ವಕ್ಷಸ್ಥಳದಲ್ಲಿಯೂ, ಪಾದಗಳಲ್ಲಿಯೂ, ಧಾರೆಯನ್ನು ಮಾಡುವುದಕ್ಕೆ, ಒಬ್ಬೊಬ್ಬ ಪರಿಚಾರಕರು ಬೇಕೆಂದು ಪೃಥಕ್ ಶಬ್ದದಿಂದ ಸೂಚಿಸಲ್ಪಟ್ಟಿರುವುದು.

यद्वा हस्ततलप्रचूर्णपिचुना सेकं क्वचित् कारये ।
द्योज्यं स्नेहचतुष्टयं च तिलजं वा तत्र शुद्धेऽनिले ॥

पित्तास्रे च घृतं कफे तु तिलजं वातास्रपित्तान्विते ।
तैलाज्यं तु समं कफेन सहिते तैलार्धभागं घृतम् ॥ ८ ॥

ಅಥವಾ ಹಿಂದೆ ಒಂದೆಡೆ ಸೂಚಿಸಿದ ಮೇರೆಗೆ, ಉತ್ತಮಾಂಗಕ್ಕೆ ಮಾತ್ರ ಧಾರೆ ಮಾಡುವುದು. ಬಾಕಿ ಶರೀರದ ಸರ್ವಭಾಗಗಳಿಗಾಗಲೀ, ಕೈಗಳಿಂದ ಅಥವಾ ವಸ್ತ್ರದ ಮುದ್ದೆಯಿಂದ ಎಣ್ಣೆಯಲ್ಲಿ ಮುಳುಗಿಸಿ ಆ ಮೂಲಕವಾಗಲೀ ಧಾರೆಯನ್ನು ಮಾಡಬೇಕು. ಕೇವಲ ವಾತರೋಗಕ್ಕೆ ನಾಲ್ಕು ಬಗೆಯ ಸ್ನೇಹದ್ರವ್ಯಗಳನ್ನು ಕೂಡಿಸಿ, ತಯಾರಿಸಿದ ಸ್ನೇಹ ದಿಂದಾಗಲಿ, ಕೇವಲ ಎಣ್ಣೆಯಿಂದಾಗಲಿ ಧಾರೆ ಮಾಡಬೇಕು. ಪಿತ್ತ ರೋಗಗಳಲ್ಲಿ, ರಕ್ತಸಂಬಂಧರೋಗಗಳಲ್ಲಿ, ಯಾ ರಕ್ತಪಿತ್ತರೋಗಗಳಲ್ಲಿ ಘೃತದಿಂದಲೂ. ಕಫರೋಗಗಳಲ್ಲಿ ಎಣ್ಣೆಯಿಂದಲೂ, ರಕ್ತಪಿತ್ತಗಳಿಂದ ಕೂಡಿದ ವಾತರೋಗಿಗೆ ಎಣ್ಣೆಯನ್ನೂ, ಘೃತವನ್ನೂ ಸರಿಸಮಾನ ಸೇರಿಸಿ ತಯಾರಿಸಿದ ಸ್ನೇಹದಿಂದಲೂ, ಕಫದಿಂದ ಕೂಡಿದ ವಾತರೋಗಿಗೆ, ಒಂದು ಭಾಗ ಎಣ್ಣೆಯೂ, ಅದರ ಅರ್ಧಭಾಗ ಘೃತವೂ, ಕೂಡಿಸಿಕೊಂಡು ಆ ಮೂಲಕ ಧಾರಾವಿಧಿಯನ್ನು ಮಾಡಬೇಕೆಂದು ವಿಧಿಸಿರುವರು.

## ॥ अथ तक्रधारा ॥

अभ्यङ्गः परिषेचनं पिचु शिरोवस्तिश्च विद्याच्चतु- ।
-र्भेदं मूर्धनि तैलमप्यतिगुणं चैतत् क्रमेणोत्तरम् ॥
अभ्यंगो विनिहंति रौक्ष्यमपि कंडूं दाहशोफव्रण- ।
-क्लेदादीन् परिषेचनं पिचु कचस्फोटादिचांत्येऽनिले ॥ ९ ॥

## ಅಥ ತಕ್ರಧಾರಾ

ಯೋಗೋಕ್ತವಾಗಿ ಪಾಕಮಾಡಿದ ತೈಲವನ್ನು ತಲೆಗೂ, ಅಂಗಾಂಗ ಗಳಿಗೂ ಉಪಯೋಗಿಸಿ ಸ್ನಾನಮಾಡುವ "ಅಭ್ಯಂಗ" ವಿಧಿಯಲ್ಲಿ (ತೇಚ್ಚಿ ಕ್ಕುಳಿ), ಪರಿಷೇಚನಂ(ಧಾರೆ)ಪಿಚು, ಶಿರೋಬಸ್ತಿ ಎಂದು ನಾಲ್ಕು ವಿಧಗಳಿವೆ.

ಅಭ್ಯಂಗಕ್ಕಿಂತ ಪರಿಷೇಚನವೂ, ಪರಿಷೇಚನಕ್ಕಿಂತ ಪಿಚುವೂ, ಅದಕ್ಕಿಂತ ಶಿರೋಬಸ್ತಿಯೂ ಗುಣಗಳಲ್ಲಿ ಅಧಿಕ್ಯವುಳ್ಳದ್ದಾಗಿದೆ. ಅಭ್ಯಂಗವು-ರೂಕ್ಷತೆಯನ್ನೂ, ತುರಿಸುವಿಕೆಯನ್ನೂ, ಪರಿಷೇಚನವು-ಶರೀರದಲ್ಲಿ ಉಂಟಾಗುವ ಅತಿದಾಹ ಬೀಗುವಿಕೆ, ವ್ರಣ, ನಂಜಿನ ನೀರು(ಕ್ಲೇದ)ವನ್ನೂ, ಪಿಚುವು-ಕೇಶರಾಜಿ ಬಿದ್ದು ಹೋಗುವಂತೆ ಮಾಡುವ ಒಂದು ವಿಧದ ವ್ಯಾಧಿಯನ್ನೂ (ಕಚಸ್ಫೋಟ), ಶಿರೋಬಸ್ತಿಯು-ಸಕಲ ವಾತರೋಗಗಳನ್ನೂ ನೀಗಾಡಿಸುವುದು.

धारायास्त्वेकवर्षातपहिमपरिशोषातिशुद्धप्रकीर्णम् ।
धात्रीप्रस्थं सपादं भिषगथ पटुधीः संत्यजेत् बीजहस्याः ॥
उत्क्वाथोऽष्टादशाख्यामितकुडवजले षष्ठभागावशिष्टम् ।
तत्तुल्यं चाम्रतकं विधिरिति मुनिभिः प्रोक्त आग्नेय मुख्यैः ॥ १० ॥

ಧಾರಾವಿಧಿ:-ಒಂದು ವರ್ಷ ಕಳೆದದ್ದೂ, ಬಿಸಿಲಿನಲ್ಲಿ ಒಣಗಿಸಿದ್ದೂ, ರಾತ್ರಿಕಾಲದಲ್ಲಿ ಹಿಮದಲ್ಲಿ ಇಟ್ಟದ್ದೂ, ಕೇಡು ಇಲ್ಲದಿರುವುದೂ, ಘಟ್ಟಿಯಾದ ಒಳಗಿನ ಬೀಜಗಳನ್ನು ತೆಗೆದ ನೆಲ್ಲಿಕಾಯಿ ತೊಲೆ 80ನ್ನು 224 ತೊಲೆ ನೀರಿನಲ್ಲಿ ಕುದಿಸಿ, $\frac{1}{6}$ ಅಂಶ ಬತ್ತಿಸಿ, ಕಷಾಯದಷ್ಟೇ ಹುಳಿ ಮಜ್ಜಿಗೆಯನ್ನು ಕೂಡಿಸಿ ಅದರಿಂದ ಚಿಕಿತ್ಸೆಯನ್ನು ಅರಿತ ವೈದ್ಯನು ಧಾರೆಯನ್ನು ಮಾಡಬೇಕು. ಈ ವಿಧಿಯು ಇದೇ ಪ್ರಕಾರ ಮಾಡಲ್ಪಡತಕ್ಕದ್ದೆಂದು ಅಗ್ನಿವೇಶ ಮೊದಲಾದ ಮುನಿಪುಂಗವರಿಂದ ಹೇಳಲ್ಪಟ್ಟಿರುವುದು.

धारायाः स्फटिकसुवर्णरजतप्रशादि पूर्वोक्तद्रु- ।
क्षायस्ताम्रवराटिकाग्रथितमृत्पात्रास्त्वतिवोत्तमाः ॥
केचिद्गोणिकनिष्ठिकांतविवरं शंसति केचित्तु वा ।
तत्पर्वोपमविस्तृतं तु सुषिरं पात्रस्य मध्ये कृतम् ॥ ११ ॥

ಧಾರೆಗಿರುವ ಪಾತ್ರವು ಸ್ಫಟಿಕ, ಸುವರ್ಣ, ಬೆಳ್ಳಿ, ಮತ್ತು ಹಿಂದೆ ಧಾರಾಪಾತಿಗೆ ಹೇಳಿರುವ ಗೋಳಿ ಮುಂತಾದ ಮರಗಳಿಂದ ತಯಾರಿಸಿದ ಪಾತ್ರ, ಕಬ್ಬಿಣದ ಪಾತ್ರ, ಚೆಂಬಿನ ಪಾತ್ರ, ಕವಡಿ ಪಾತ್ರ(ಅವೆಮಣ್ಣಿನಿಂದ

ಮಾಡಿದ), ಒಳ್ಳೇ ಮಣ್ಣಿನ ಪಾತ್ರ. ಇವುಗಳಲ್ಲಿ ಯಾವುದಾದರೊಂದರಿಂದ ಮಾಡಲ್ಪಟ್ಟಿರಬೇಕು. ಇವುಗಳಲ್ಲಿ ಉತ್ತಮವಾದ ಮಣ್ಣಿನ ಪಾತ್ರವೇ ಶ್ರೇಷ್ಠವು. ಇಂಥಾ ಪಾತ್ರದ ಮಧ್ಯಕ್ಕಿರುವ ರಂಧ್ರವು ರೋಗಿಯು ಕಿರು ಬೆರಳಿನ ತುದಿಯು ಗಾತ್ರವೆಂದು ಕೆಲವರೂ, ಅದೇ ಕಿರುಬೆರಳಿನ ಅದಿಯು ಸಂಧಿ(ಗಂಟು)ಯು ಪ್ರಮಾಣವೆಂದು ಬೇರೆ ಕೆಲವರೂ ಹೇಳುತ್ತಾರೆ.

धारायाश्चावसाने निजगदशमनप्रोक्तसर्पिश्च सेव्यम् ।
तत्काले चावमंस्थः कथमपि वसतु प्रीतिमानेष रोगी ॥
कायक्लेशानशेषान्मनसि सुखहरान् वक्त्रजिह्वासुखादीं ।
स्त्यक्त्वा पाटीरशुद्धांबरविधृतवपुर्ब्रह्मविज्ञानितुल्य ॥ १२ ॥

ರೋಗಿಯು ಧಾರೆಯ ಅವಸಾನಕಾಲದಲ್ಲಿ ತನ್ನ ರೋಗದ ನಿವೃತ್ತಿಗಿರುವ ಯುಕ್ತವಾದ ಘೃತವನ್ನು ಸೇವಿಸಬೇಕು. ಧಾರೆಯಿರುವ ಕಾಲದಲ್ಲಿ ಮನಶ್ಶಾಂತಿಯಿಂದಲೂ, ಆನಂದದಿಂದಲೂ ಇದ್ದು ಚಿತ್ತಶುದ್ಧಿಗೆ ವಿಘ್ನವನ್ನುಂಟುಮಾಡುವ, ಸರ್ವ ಕಾಯಕ್ಲೇಶಗಳನ್ನೂ ವರ್ಜಿಸಿ, ಓದುವಿಕೆ, ಜಿಹ್ವಾಚಾಪಲ್ಯ (ನಾಲಿಗೆಗೆ ತತ್ಕಾಲ ಸುಖವನ್ನುಂಟುಮಾಡುವ ಭಕ್ಷಣದ್ರವ್ಯ)ಗಳನ್ನು ಬಿಟ್ಟು ಶ್ರೀಗಂಧಯುಕ್ತನಾಗಿ ಶುಚಿಯಾದ ಶುಭ್ರ ವಸನಧಾರಿಯಾಗಿ, ಬ್ರಹ್ಮಜ್ಞಾನಿಯಂತೆ ನಿರ್ಮಲ ಮನಸ್ಸಿನಿಂದ ಬ್ರಹ್ಮಚರ್ಯೆಯಿಂದಿರಬೇಕು.

केशादीनां च शौक्ल्यं क्रममपि तनुतां दोषकोपं शिरोरुक् ।
बाधामोजःक्षयं तत्करचरणपरिस्तोदनं मूत्रदोषं ॥
संधीनां विश्लथत्वं हृदयरुगरुचीजाठराग्नेश्च मांद्यं ।
धात्री तक्रोत्थ धारा हरति शिरसि वा कर्णनेत्रामयौघम् ॥ १३ ॥

ನೆಲ್ಲಿಕಾಯಿಸಿಪ್ಪೆಯ ಕಷಾಯಕ್ಕೆ ಮಜ್ಜಿಗೆಯನ್ನು ಕೂಡಿಸಿ ಮಾಡುವ ಧಾರೆಯು,-ಅಕಾಲದಲ್ಲಿ ತಲೆಕೂದಲು ಬೆಳ್ಳಗಾಗುವಿಕೆ, ಅಧಿಕ ಶ್ರಮ, ತ್ರಿದೋಷಗಳ ಪ್ರಕೋಪ. ಶಿರೋವೇದನೆ, ಓಜಃಕ್ಷಯ, ಕೈಕಾಲು

ಗಳಲ್ಲಿ ಅಧಿಕ ನೋವು, ಮೂತ್ರದೋಷ, ಸಂಧುಗಳಲ್ಲಿ ಒಂದು ತರದ ಶೈಥಿಲ್ಯ, ಹೃದ್ರೋಗ, ರುಚಿಕೆಡು, ಅಗ್ನಿಮಾಂದ್ಯ, ಇವುಗಳೆಲ್ಲಾ ಸಂಪೂರ್ಣ ಶಮನವಾಗುವುದಲ್ಲದೆ, ಉತ್ತಮಾಂಗದಲ್ಲಿ ಮಾಡುವ ಈ ಧಾರೆಯಿಂದ, ಕಿವಿಗಳ ಎಲ್ಲಾ ವಿಧದ ವಿಪತ್ತುಗಳೂ, ಎಲ್ಲಾ ನೇತ್ರರೋಗ ಗಳೂ ಶಮನವಾಗುವುವು.

स्थैर्यं वाङ्मनसोः शरीरबलमप्याहारकांक्षाधृती- ।
-माधुर्यं वचसस्त्वचोऽपि मृदुता नेत्रे प्रकाशो गदः ॥
शुक्लासृक् परिपोषणं रतरतिर्दीर्घायुरल्पोष्णता ।
दुस्वप्नं घृततैलसेचनगुणेनास्तीति जाग्रत्सुखम् ॥ १४ ॥

ಯುಕ್ತವಾದ ಘೃತ ಮತ್ತು ತೈಲಗಳನ್ನು ಮಿಶ್ರಿಸಿ ಮಾಡುವ ಧಾರೆಯಿಂದ ವಾಕ್ಶಕ್ತಿ, ಮನಃಸ್ಥೈರ್ಯ, ದೇಹಬಲ, ಧೈರ್ಯ, ವಾಙ್ಮಾಧುರ್ಯ, ತ್ವಗಿಂದ್ರಿಯಗಳಿಗೆ ಮೃದುತ್ವ, ನೇತ್ರಗಳಿಗೆ ಪ್ರಕಾಶ, ಕಣ್ಣಿನ ರೋಗಗಳು ಸಂಭವಿಸದಿರುವಿಕೆ, ಶುಕ್ಲವೃದ್ಧಿ, ರಕ್ತಪ್ರಸಾದ, ಸ್ತ್ರೀ ಸಂಭೋಗಾಭಿಲಾಷೆ, ದೀರ್ಘಾಯು, ಶರೀರಕ್ಕೆ ಬೇಕಾದ ಉಷ್ಣ, ಅಗತ್ಯ ವಿರುವ ನಿದ್ರಾಸುಖ, ದುಸ್ವಪ್ನ ನಿವಾರಣೆ, ನಿದ್ರೆಯು ಇಲ್ಲದಿರುವಾಗ ಬೇಕಾದ ಸುಖವನ್ನುಂಟುಮಾಡುವುದು. ಆದರೆ ಕೆಲವರು ಇದು ತಕ್ರಧಾರೆಯಷ್ಟು ಉಪಕಾರವನ್ನೀಯಲಾರದೆಂದು ಹೇಳುತ್ತಾರೆ. ಮೇಲೆ ಹೇಳಿದ್ದೆಲ್ಲಾ ಗುಣಗಳು ಘೃತತೈಲಧಾರೆಗಳಿಂದಲೇ ಸಂಭವಿಸುವುದೆಂದು ಕೆಲವರ ಅಭಿಮತ. ಆದರೆ ಯಾವದಾದರೊಂದು ಧಾರೆಗಳಲ್ಲಿ ಹೇಳಿದ ಗುಣಗಳನ್ನು ನಾವು ಲಭಿಸಬೇಕಾದರೆ, ಪ್ರೋಕ್ತ ರೀತಿಯಂತೆ ವರ್ತಿಸಿದರೆ ಮಾತ್ರ ಅದರ ಸಂಪೂರ್ಣ ಗುಣಗಳನ್ನು ಪಡೆಯಬಹುದಲ್ಲದೆ ಕೇವಲ ಊಹಾಪೋಹಗಳಲ್ಲಿ ಹೊಂದಲನನುಕೂಲವು.

## ॥ धारा ॥

तत्तद्व्याधिशमोदितौषधिगणैः सिद्धं च वा योजयेत् ।
स्वस्थेऽभ्यंजनसेचनादिषु सदा तैलाज्यसंमिश्रितम् ॥

एकाहान्तरमेव वा प्रतिदिनं पूर्णे बले मध्यमे ।
त्यक्त्वा द्वित्रिदिनं चतुर्दिनमथोत्याल्ये त्रिषत् पंच वा ॥ १५ ॥

## ॥ ಧಾರಾ ॥

ಸ್ವಸ್ಥನಾದ ಮನುಷ್ಯನು ಅಭ್ಯಂಗಕ್ಕಾಗಲೀ, ಧಾರೆಗಾಗಲೀ, ಎಣ್ಣೆಯನ್ನೂ, ತುಪ್ಪವನ್ನೂ, ಕೂಡಿಸಿಕೊಂಡು ಉಪಯೋಗಿಸುವುದು. ರೋಗಿಗೆ ಆಯಾ ರೋಗಾನುಸಾರ ಯೋಗ್ಯವಾದ ಔಷಧಿಗಳನ್ನು ಕೂಡಿಸಿ ಪಾಕ ಮಾಡಿದ ತೈಲವನ್ನು ಉಪಯೋಗಿಸುವುದು. ಶರೀರಕ್ಕೂ, ಮನಸ್ಸಿಗೂ, ಬಲವು ಮತ್ತು ಶಾಂತಿಯು ಸರಿಯಾಗಿದ್ದರೆ ಪ್ರತಿದಿನವೂ, ಬಲವು ಮಧ್ಯಮ ಸ್ಥಿತಿಯಲ್ಲಿದ್ದರೆ 2 ಅಥವಾ 3 ದಿನಗಳ ಎಡೆಬಿಟ್ಟೂ, ಬಲವು ಅಲ್ಪವಾಗಿದ್ದರೆ 4 ಯಾ 5 ದಿನಗಳಿಗೊಂದಾವರ್ತಿಯೂ, ಅಭ್ಯಂಗಾದಿ ವಿಧಿಗಳನ್ನು ಮಾಡತಕ್ಕದ್ದು.

पित्ते कोष्णमथोष्णमेव विहितं शुद्धे समीरामये ।
तत् स्नेहं द्रवमात्रमेव कफयुक्ते रक्तपित्तेऽपि च ॥
ऊर्ध्वांगे तु सुशीतमेव विहितं सिञ्चेदविच्छिन्नमे ।
वात्यर्थोच्चविलंबितद्रुतनतं कुत्रापि नैवाचरेत् ॥ १६ ॥

ಪಿತ್ತಾಧಿಕ್ಯದ ರೋಗಗಳಲ್ಲಿ ಸ್ನೇಹದ್ರವ್ಯವು ಸ್ವಲ್ಪ ಬಿಸಿಯಾಗಿಯೂ ಶುದ್ಧ ವಾತರೋಗಗಳಲ್ಲಿ ಸಹಿಸಲು ಶಕ್ಯವಾದ ಉಷ್ಣದಿಂದಲೂ, ಕಫ ಯುಕ್ತವಾದ ರೋಗಗಳಲ್ಲಿ ವ ರಕ್ತಪಿತ್ತಗಳಲ್ಲಿ ದ್ರವವಾಗುವಷ್ಟು ಮಾತ್ರ ಬಿಸಿಯಿರುವಂತೆಯೂ (ಅಂಗಗಳಲ್ಲಿ), ಉಪಯೋಗಿಸಿಕೊಳ್ಳುವುದು. ಎಲ್ಲಾ ವಿಧದ ರೋಗಗಳಲ್ಲಿಯೂ ತಲೆಗೆ ಬಿಸಿಯಿಲ್ಲದ ತಣ್ಣಗಾದ ಸ್ನೇಹದ್ರವ್ಯವನ್ನು ಮಾತ್ರ ಉಪಯೋಗಿಸಬೇಕು. ಯಾವ ತರದ ವಿಪತ್ತುಗಳಲ್ಲಿಯಾದರೂ ಧಾರೆಯನ್ನು ಯುಕ್ತ ವಿಧಿಗಿಂತ ಸ್ವಲ್ಪ ಹೆಚ್ಚಾಗಿ, ಕಡಿಮೆಯಾಗಿ, ವೇಗವಾಗಿ, ಎತ್ತರವಾಗಿ ವ ತಗ್ಗಾಗಿಯಾಗಲಿ ಮಾಡದೆ, ಯುಕ್ತ ವಿಧಿಗನುಸರಿಸಿಯೆ ಧಾರೆಯನ್ನು ಕೈಕೊಳ್ಳಬೇಕು.

रूक्षे पित्तयुतेऽनिले च परमः कालो मुहूर्तद्वयं ।
साधँ तत्र तदर्धं मात्र उदितः स्निग्धे कफोन्मिश्रिते ॥
यावत्स्वेदसमुद्भवो भवति तत्तावन्निवर्तेत वा ।
स्नेहोऽत्र त्रिभिरेति रोमविवरं मात्राशतैश्च क्रमात् ॥ १७ ॥

ಸ್ನಿಗ್ಧತೆಯಿಲ್ಲದ ಶರೀರದಲ್ಲಿ ಮತ್ತು ಪಿತ್ತಸಹಿತವಾದ ವಾತರೋಗಗಳಲ್ಲಿ 7½ ಘಳಿಗೆಯ ವರೆಗೆ ಮಾಡುವ ಚಿಕಿತ್ಸೆಯು ಶ್ರೇಷ್ಠವಾಗಿರುವುದು. ಸ್ನಿಗ್ಧವಾದ ಶರೀರದಲ್ಲಿ ಮತ್ತು ಕಫಯುಕ್ತವಾದ ವಾತರೋಗದಲ್ಲಿ 3¾ ಘಳಿಗೆಯು ಸಾಕಾಗುವುದು. ಎಷ್ಟರ ವರೆಗೆ ಶರೀರದಲ್ಲಿ ಬೆವರು ಉಂಟಾಗುವುದೋ ಅಷ್ಟರತನಕ ಚಿಕಿತ್ಸೆಯನ್ನು ಮಾಡಬೇಕು, ಎಂದು ಪಕ್ಷಾಂತರವುಂಟು. ಸ್ನೇಹದ್ರವ್ಯವು 300 ಮಾತ್ರೆಗಳಿಂದ (ಈ ಮಾತ್ರಾ: – 'ನಿಮೇಷೊ ಮಾತ್ರಯಾಸಮಃ' ಎಂದು ಅಮರಸಿಂಹನ ಅಭಿಪ್ರಾಯವು). ಸರ್ವಸ್ವೇದಕೂಪಗಳಲ್ಲಿ ಕ್ರಮೇಣ ವ್ಯಾಪಿಸುವುದೆಂದು ಸಾರವತ್ತಾದ ಅಭಿಪ್ರಾಯವು. (ಇಲ್ಲಿ ಸೂಚಿಸಿದ ಮಾತ್ರಾಕಾಲವು ಅಮರಸಿಂಹನ ಅಭಿಮತಕ್ಕೆ ಸರಿಯಾಗುವುದಿಲ್ಲ.)

सप्तापि त्वच एति सप्तभिरथो षड्भिस्तथास्रादिकान् ।
षड्धातूनिषुसिंधुदिग्ग्रहमिता मात्रा मुहूर्तो भवेत् ॥
धाराच्चं चतुरङ्गुलं तु शिरसः सेके तदन्यत्र तत् ।
प्रोक्तं तत्त्रिगुणं च मंदपतनात्तद्रोगवृद्धिर्भवेत् ॥ १८ ॥

ಸ್ನೇಹದ್ರವ್ಯವು ಏಳು ದಿವಸಗಳಲ್ಲಿ "ಭಾಸಿನಿ, ಲೋಹಿನಿ, ಶ್ವೇತಾ, ತಾಮ್ರಾ, ತ್ವಗೇದಿನೀ, ರೋಹಿಣೀ, ಮಾಂಸಧರಾ" ಎಂಬ ಏಳು ಚರ್ಮಗಳಲ್ಲಿಯೂ, ಆರು ದಿನಗಳಲ್ಲಿ "ರಕ್ತ, ಮಾಂಸ, ಮೇದಸ್, ಅಸ್ಥಿ, ಮಜ್ಜಾ, ಶುಕ್ರ, ಎಂಬ 6 ಧಾತುಗಳಲ್ಲಿಯೂ ವ್ಯಾಪಿಸುವುದು. ಉತ್ತಮಾಂಗಕ್ಕೆ ಸುರಿಯುವ ಧಾರೆಯು 4 ಬೆರಳುಗಳ ಎತ್ತರದಿಂದಲೂ, ಬಾಕಿ ಅಂಗಗಳಿಗೆ 12 ಬೆರಳುಗಳ ಎತ್ತರದಿಂದಲೂ ಆಗಿರಬೇಕು. ಯುಕ್ತವಿಧಿಗಿಂತ ಮಂದವಾಗಿ ಮಾಡುವ ಧಾರೆಗಳಿಂದ ರೋಗವು ವರ್ಧಿಸುವುದು ವಿನಹ

ಕಡಿಮೆಯಾಗಲಾರದು. (ಇಷುಸಿಂಧುದಿಗ್ಗ್ರಹಮಿತಾಃ) ಇಷು = ಬಾಣ (5 ಬಾಣಗಳು ಎಂದರ್ಥ). ಸಿಂಧು = ಸಮುದ್ರ (7 ಸಮುದ್ರ). ದಿಕ್ = ದಿಕ್ಕುಗಳು (ಪೂರ್ವ ಮೊದಲಾದ 8 ದಿಕ್ಕುಗಳು). ಗ್ರಹ = ಸೂರ್ಯಾದಿ ಗ್ರಹ(9 ಗ್ರಹಗಳು ಎಂದರ್ಥ) ಐದುಸಾವಿರದ ಏಳನೂರಎಂಭತ್ತೊಂಭತ್ತು (5789 ಇದು ಮಾತ್ರೆಗಳು). ಒಂದು ಮುಹೂರ್ತಕ್ಕೆ 5789 ಮಾತ್ರೆ ಗಳೆಂದರ್ಥ. (ಕೆಲವರ ಅಭಿಪ್ರಾಯವು—"700 ಮಾತ್ರೆಗಳಿಂದ 7 ಚರ್ಮಗಳಲ್ಲಿಯೂ 600 ಮಾತ್ರೆಗಳಿಂದ ಎಲ್ಲಾ ಧಾತುಗಳಲ್ಲಿಯೂ ಪ್ರವೇಶಿಸುತ್ತದೆಂಬ ಪಕ್ಷಾಂತರವು ಸ್ಮರಿಸದೆ ಇರುವುದೆಂದಿಲ್ಲ".)

अत्युच्चद्रुतभूरिकालषेकाद्दाहविसर्परुक्- ।
मूर्छाङ्गस्वरसादसंधिदलनच्छर्द्यस्रपित्तज्वराः ॥
कोठाद्याश्च भवन्त्यतः परदिने गंडूषनस्यादिकम् ।
कृत्वा शुद्धमहौषधेन सुश्रृतं तोयं पुनः पाययेत् ॥ १९ ॥

ಅಧಿಕ ಎತ್ತರದಿಂದ ಅತಿ ಶೀಘ್ರದಿಂದ ಹೆಚ್ಚು ಸಮಯದಿಂದ ವಿಧಿಯನ್ನುಲ್ಲಂಘಿಸಿ, ಸ್ನೇಹದ್ರವ್ಯವನ್ನು ಧಾರೆಮಾಡುವುದರಿಂದ ದಾಹ, ವಿಸರ್ಪ, ಮೋಹಾಲಸ್ಯ, ಸ್ವರಭೇದ, ಸಂಧಿ(ಬಿಂಕ)ಗಳಲ್ಲಿ ನೋವು, ವಾಂತಿಯಾಗೋಣ, ರಕ್ತಪಿತ್ತ, ಜ್ವರ, ಕೆಂಪಾದ ವಿಸರ್ಪ, ಮೊದಲಾದ ರೋಗಗಳು ಸಂಭವಿಸುವುವು. ಅದರ ಮರುದಿನ ಗಂಡೂಷ, ನಸ್ಯ, ಅಂಜನ ಮುಂತಾದ ವಿಧಿಗಳಿಂದ ಒಣಶುಂಠಿಯನ್ನು ಜಜ್ಜಿಹಾಕಿ ಕುದಿಸಿದ ಕಷಾಯವನ್ನು ಕುಡಿಯಬೇಕು.

सायाह्ने लघुभोजयेत् कटुतरं यूषान्वितं चाप्यथो ।
बस्तिं स्नेहकृतं च सैंधवकृतं कुर्यात्तृतीयेऽहनि ॥
स्नेहव्यापदि चोक्तकर्मनिखिलं कुर्याच्चतुर्थेऽन्यतः ।
प्राग्वत् स्नेहनिषेचणं च विधिवत् कुर्यादिने पञ्चमे ॥ २० ॥

ಅನಂತರ ಸಾಯಂಕಾಲ, ಖಾರ ಮಿಶ್ರಿತ ರಸ, ತೋವೆ ಯಾ ಸಾರಿನಿಂದ ಲಘು ಭೋಜನವನ್ನು ಭುಂಜಿಸಿ, ಮರುದಿನ ಸ್ನೇಹಬಸ್ತಿಯನ್ನೂ,

ಮೂರನೇ ದಿನ ಬಸ್ತಿದ್ರವ್ಯಗಳಲ್ಲಿ ಸೈಂಧವಲವಣವನ್ನು ಕೂಡಿಸಿ ಮಾಡಿದ ಬಸ್ತಿಯನ್ನೂ ಮಾಡಿಕೊಳ್ಳಬೇಕು. ನಾಲ್ಕನೇ ದಿನ ಸ್ನೇಹವ್ಯಾಪತ್ತಿನಲ್ಲಿ ಹೇಳಿದ ಎಲ್ಲಾ ಕ್ರಿಯೆಗಳನ್ನೂ ಮಾಡಿಸಬೇಕು. ಐದನೇ ದಿನ ಹಿಂದೆ ಹೇಳಿದಂತೆ ವಿಧ್ಯುಕ್ತರೀತಿಯಿಂದ ಸ್ನೇಹನಿಷೇವಣಕಾರ್ಯವನ್ನು ಧಾರೆ ಮಾಡಿಸಬೇಕು.

एकाहादपरं न सेचनविधौ क्षीरादिकं गृह्यते ।
धान्याम्लं त्रिदिनात् परं विधिरयं स्नेहस्य तु प्रायशः ॥
एकेन त्रिदिनं परेण च तथा सिंचेत्त्र्यहं तद्द्वयं ।
मिश्रीकृत्य च सप्तमेऽहनि पुनस्त्यक्त्वा न चैवं चरेत् ॥ २१ ॥

ದನದ ಹಾಲು ಮುಂತಾದ ದ್ರವ್ಯಗಳು ಒಂದು ದಿನ ಉಪಯೋಗಿಸಿದ್ದನ್ನು ಪುನಃ ಸ್ವೀಕರಿಸಕೂಡದು. ಧಾನ್ಯಾಮ್ಲ(ಕಾಡಿನೀರು) ಮೂರು ದಿನಗಳ ವರೆಗೆ ಉಪಯೋಗಿಸಿ ಅನಂತರ ತ್ಯಜಿಸಬೇಕು. ಮಿಕ್ಕ ಸ್ನೇಹದ್ರವ್ಯಗಳನ್ನು ಪ್ರಾಯಶಃ ಮೂರೇ ದಿನಗಳ ಪರ್ಯಂತ ಉಪಯೋಗಿಸಬಹುದು. ಅಂದರೆ ಪ್ರಥಮ ಮೂರು ದಿನಗಳಲ್ಲಿ ಉಪಯೋಗಿಸಿ ಅದರ ನಂತರ ಬೇರೆ ತೆಗೆದು ಅದನ್ನು ಮೂರು ದಿವಸಗಳ ತನಕ ಉಪಯೋಗಿಸಿ, ಆಮೇಲೆ ಅವನ್ನು ಹಿಂದೆ ಪ್ರಥಮದಲ್ಲಿ ಉಪಯೋಗಿಸಿದ ಸ್ನೇಹದ್ರವ್ಯದೊಂದಿಗೆ ಕೂಡಿಸಿ, ಏಳನೇ ದಿನ ಪುನಃ ಉಪಯೋಗಿಸಿಕೊಂಡು ಪುನಃ ತ್ಯಜಿಸಬೇಕು. ಕಡಿಮೆಯಾಗಿದ್ದರೆ ಕೂಡಿಸಿಕೊಳ್ಳಬೇಕು. ಈ ರೀತಿಯಿಂದ ಉಪಯೋಗಿಸಿಕೊಳ್ಳಲ್ಪಡಬೇಕು.

यन्नूतनं तेन निषेचनं प्रतिदिनं तं तत्तोत्तमं मध्यमम् ।
तेनैव त्रिदिनं ततोऽपि च परं मिश्रीकृतं चाधमम् ॥
अत्युष्णेऽपि च मंदकोपसमये मंदातपे शीतले ।
कुर्यान्नत्वपराह्णकेऽपि च भिषग्रात्रौ तथा सेचनम् ॥ २२ ॥

ಪ್ರತಿದಿನಗಳಲ್ಲಿ ಹೊಸದಾಗಿ ಆರಿಸಿದ ಸ್ನೇಹದ ಉಪಯೋಗವು ಉತ್ತಮವಾಗಿಯೂ, ಒಂದು ಬಾರಿ ಸ್ವೀಕರಿಸಿದ್ದನ್ನೇ ಪುನಃ ಮೂರುದಿನ

ಉಪಯೋಗಿಸುವುದು ಮಧ್ಯಮವಾಗಿಯೂ, ಮೂರುಮೂರು ದಿನ ಉಪಯೋಗಿಸಿ ಅದನ್ನೆ ಪುನಃ ಕೂಡಿಸಿಕೊಂಡು ಉಪಯೋಗಿಸುವುದು ಅಧಮತರದ್ದಾಗಿರುವುದು. ಅತ್ಯುಷ್ಣಕಾಲದಲ್ಲಿಯೂ, ತ್ರಿದೋಷಗಳ ಕೋಪವು ಮಂದವಾಗಿರುವಾಗಲೂ, ಬಿಸಿಲಿನ ತಾಪವು ಕಡಿಮೆಯಾಗಿರುವಾಗಲೂ, ಅಧಿಕ ತಂಪಾಗಿರುವಾಗಲೂ, ಅಪರಾಹ್ಣಕಾಲಗಳಲ್ಲಿಯೂ, ರಾತ್ರಿಯಲ್ಲಿಯೂ, ವೈದ್ಯನು ಧಾರೆಯನ್ನು ಎಂದೂ ಮಾಡಬಾರದು.

सेकानंतरमातुरस्तु शिशिरांबुप्रोक्षणैर्वीजनै ।
श्चोत्क्षैपैर्मृदुमारुतैरनुगुणं विश्रम्य तत्रोत्थितः ॥
मंदं किंचन मर्दितोऽनु च रसैः स्नेहं कषायैस्त्यजेत् ।
स्नात्वा कोष्णजलैः सुगंधसुभगा धान्यौषधांभः पिबेत् ॥ २३ ॥

ಧಾರಾ ಸೇಚನವಿಧಿಯನ್ನು ಮುಗಿಸಿದ ನಂತರ ಕುದಿಸಿ ಆರಿಸಿದ ನೀರಿನಿಂದ ಪ್ರೋಕ್ಷಣ, ಕೈಕಾಲುಗಳ ಪ್ರಕ್ಷಾಳನ, ಬಾಯಿಮುಕ್ಕಳಿಸುವಿಕೆ, ತಂಪಾದ ಗಾಳಿಯು, ಸೇವನೆ ಇತ್ಯಾದಿ ಸುಖಕರಗಳಾದ ಯೋಗ್ಯ ಸತ್ಕಾರಗಳಿಂದ ವಿಶ್ರಮಿಸಿ, ಮಲಗಿದ್ದ ರೋಗಿಯನ್ನು ಮೆಲ್ಲಗೆ ಎಬ್ಬಿಸಿ, ಅನಂತರ ಶರೀರದ ಎಲ್ಲಾ ಅಂಗಾಂಗಗಳಲ್ಲಿಯೂ ಸಾವಧಾನದಿಂದ ಸ್ವಲ್ಪಸ್ವಲ್ಪವಾಗಿ ಮರ್ದಿಸಿ, ಕಷಾಯರಸಗಳಾದ ಔಷಧಿಗಳನ್ನು ಬಿಟ್ಟು, ಸ್ವಲ್ಪ ಬಿಸಿಯುಳ್ಳ ನೀರಿನಿಂದ ಸ್ನಾನಮಾಡಿಸಿ, ಸುಗಂಧದ್ರವ್ಯಗಳಿಂದಲೂ, ಶುಚಿ ಬಟ್ಟೆಗಳಿಂದಲೂ ಅಲಂಕೃತನಾಗಿ, ಒಣಶುಂಠಿ, ಕೊತ್ತಂಬರಿ ಜಜ್ಜಿ ಮಾಡಿದ ಕಷಾಯವನ್ನು (ಕಷಾಯಕಞ್ಜಿ) ಸೇವಿಸಿಕೊಳ್ಳಬೇಕು.

पेयां वा लघुसोषणाज्यकटुतक्रायूषायुक्तं मितं ।
भुक्तं कोष्णमथाचरेद्विधि मितः स्नेहोक्तमात्राखिलम् ॥
एवं सप्तदिनं व्यतीत्य पुनरन्येद्युर्विरेकं ततो ।
बस्तिं तत्र तु कारयेदिति विधिर्नासुत्य संभाषितम् ॥ २४ ॥

ಅಥವಾ ತಕ್ರಗಂಜಿ ಮಾಡಿ, ಅದರಲ್ಲಿ ತುಪ್ಪವನ್ನೂ ಕರಿಮೆಣಸು, ಒಣಶುಂಠಿ ಮೊದಲಾದ ಖಾರಪದಾರ್ಥಗಳನ್ನೂ ಮಿಶ್ರಿಸಿ (ಮೊರ್ ಕಞ್ಜಿ)

ಸೇವಿಸುವಿಕೆ, ಸ್ವಲ್ಪ ಬಿಸಿಯೂ, ಮಿತವೂ ಆದ ಆಹಾರವನ್ನು ತೋವೆ ಕೂಡಿಸಿ ಭುಂಜಿಸುವಿಕೆ, ಮತ್ತು ಸ್ನೇಹವಿಧಿಯಲ್ಲಿ ಹೇಳಿದ ಎಲ್ಲಾ ಕ್ರಮ ಗಳನ್ನು ವಿರಚಿಸಬೇಕು. ಈ ಕ್ರಮದಂತೆ 7 ದಿನಗಳ ವರೆಗೆ ಮಾಡಿ, ಆ ಮೇಲೆ 8ನೇ ದಿನದಲ್ಲಿ ವಿರೇಚನೆಯನ್ನೂ, 9 ದಿನ ಬಸ್ತಿವಿಧಿಯನ್ನೂ ವಿರಚಿಸಬೇಕು. ಈ ವಿಧಿಗಳಿಂದ ಈ ಚಿಕಿತ್ಸಾವಿಶೇಷವನ್ನು ವಿರಚಿಸ ಬೇಕೆಂದು ದೇವವೈದ್ಯರಾದ ಅಶ್ವಿನೀ ದೇವತೆಗಳು ಹೇಳಿರುವರು.

यावंत्यौषधयोजितानि दिवसान्येतानि तावंत्यहो ।
न्यन्यान्यऽप्यथ सर्वकर्मसु बुधो नित्यं जितात्मा नयेत् ॥
स्त्रीणां स्पर्शनदर्शनस्मृतिवशात् शुक्ले स्रुते संति तत् ।
संपर्केण विनापि तन्नवगदस्तस्मात् त्यजेत् सर्वदा ॥ २५ ॥

ಸ್ವಹಿತವನ್ನು ಆಕಾಂಕ್ಷಿಸಿ ಆರೋಗ್ಯಲಾಭವನ್ನಪೇಕ್ಷಿಸುವ, ವೈದ್ಯನ ಮಾತನ್ನನುಸರಿಸುವ, ತಿಳುವಳಿಕೆಯುಳ್ಳ ರೋಗಿಯು ಎಷ್ಟು ದಿನಗಳ ವರೆಗೆ ಮದ್ದನ್ನು ಸೇವಿಸುತ್ತಾನೋ, ಅಷ್ಟರವರೆಗೆ ಪಥ್ಯದಲ್ಲಿರಬೇಕು. ಹಾಗೆ ಮಾಡುವುದಲ್ಲದೆ, ಆ ಕಾಲದಲ್ಲಿ ಸ್ತ್ರೀಯರ ಅಂಗಸ್ಪರ್ಶಾಭಿಲಾಷೆ, ದರ್ಶನಾಕಾಂಕ್ಷೆ, ಸ್ಮರಣೆ ಇತ್ಯಾದಿ ಸುಖ, ವಿಷಯೋಪಭೋಗಮಗ್ನನಾಗಿ, ಶುಕ್ಲ ಪತನವಾಗುವುದಾದರೆ ಅಥವಾ ಸಂಪರ್ಕವಿನಾಪಿ ವೀರ್ಯಸ್ಖಲನ ಸಂಭವಿಸುವ ಯಾವತರದ ಕಾರ್ಯಗಳಲ್ಲಿಯೂ ಮಗ್ನನಾಗಬಾರದು. ಅಲ್ಲದೇ ನಿಯಮನಿಷ್ಠನಾಗಿ ಪವಿತ್ರಾಂತಃಕರಣಿಯಾಗಬೇಕು.

गुल्मानाहभगंदर व्रणतुनी शूलाभिघातास्रवा- ।
तोदावर्तककोठमूढमरुदष्ठीलाविसर्पादिषु ॥
प्लीहाध्मानकविद्रधिप्रतितूनीष्वेकाङ्गसेकं तथा ।
कुर्याद्धस्ततलप्रचूर्णपिचुना मंदे सुखोष्णं भिषक् ॥ २६ ॥

ಗುಲ್ಮ, ಆನಾಹ, ಭಗಂದರ, ವ್ರಣ, ತೂನಿ, ಶೂಲ, ಅಭಿಘಾತ, ರಕ್ತವಾತ, ಉದಾವರ್ತಕ, ಕೋಠ, ಮೂಢವಾತ, ಅಷ್ಠೀಲಾ, ವಿಸರ್ಪ,

ಪ್ಲೀಹ, ಆಧ್ಮಾನ, ವಿದ್ರಧಿ, ಪ್ರತಿತೂನಿ ಮುಂತಾದ ರೋಗಗಳಲ್ಲಿ ವಸ್ತ್ರವನ್ನು ಎಣ್ಣೆಯಲ್ಲಿ ಮುಳುಗಿಸಿ, ತೆಗೆದು ಕೈಗೆ ತಡೆದುಕೊಳ್ಳಲು ಸಾಧ್ಯವಾಗಿರುವ ಸುಖಕರವಾದ ಉಷ್ಣದಿಂದ ಆಯಾಯ ಅಂಗಗಳಿಗೆ ತಕ್ಕಂತೆ ಮಂದವಾಗಿ ಸೇಕವನ್ನು ಮಾಡುವುದು. ಈ ಚಿಕಿತ್ಸಾ ವಿಶೇಷಕ್ಕೆ "ಏಕಾಂಗಸೇಕ" ಎಂದು ಹೆಸರು.

व्यायामातपवेगरोधहिममधूमात्युच्चनीचोपधा- ।
नाहःस्वप्नरजः प्रवातचिरकालासीनता संस्थितिः ॥
शोकं जागरपादयानगमनक्रोधातिभाष्यादिकां- ।
स्त्यक्त्वाथोष्णजलोपचार्यनतिभुक स्याद्ब्रह्मचारी सदा ॥ २७ ॥

ಚಿಕಿತ್ಸೆಯು ಇರುವ ಕಾಲಗಳಲ್ಲಿ ಅತಿ ವ್ಯಾಯಾಮ, (ಶರೀರಾಯಾಸಕರ ಕರ್ಮ), ವಾತ ಪುರೀಷಮೂತ್ರಾದಿ ಹದಿನಾಲ್ಕು ವಿಧದ ವೇಗಗಳನ್ನು ತಡೆಯುವುದು, ಬಿಸಿಲು, ಹಿಮ, ಹೊಗೆಸೇದುವುದು, ಎತ್ತರ ವ ತಗ್ಗಾದ ತಲೆದಿಂಬುಗಳನ್ನಿಟ್ಟುಕೊಳ್ಳುವುದು, ಹಗಲು ನಿದ್ರಿಸುವುದು, ಧೂಳಿ, ಹೆಚ್ಚು ಕೂತ ಕಡೆಗಳಲ್ಲಿ ವ ಅತ್ಯಂತ ಗಾಳಿ ಇರುವ ಸ್ಥಳಗಳಲ್ಲಿ ಕೂತುಕೊಳ್ಳುವುದು, ಹೆಚ್ಚು ಸಮಯ ನಿಂತಲ್ಲೇ ನಿಲ್ಲುವುದು, ವ್ಯಸನ, ರಾತ್ರಿ ನಿದ್ದೆಗೆಡುವುದು, ಕಾಲ್ನಡೆಯಿಂದ ವ ವಾಹನಗಳ ಮೂಲಕ ಹೆಚ್ಚಾಗಿ ತಿರುಗುವುದು, ಕೋಪ, ಅತ್ಯಂತ ಸಂಭಾಷಣೆ, ಅತಿಭಕ್ಷಣೆ, ಇತ್ಯಾದಿ ಅತಿರೇಕ ಕಾರ್ಯಗಳನ್ನು ಉಪೇಕ್ಷಿಸಿ ಬಿಸಿನೀರಿನಿಂದಲೇ ಶೌಚಾದಿ ಕಾರ್ಯಗಳನ್ನು ಮಾಡುತ್ತಾ ಸದಾ ಬ್ರಹ್ಮಚರ್ಯೆಯನ್ನು ಕಾಯೇನವಾಚಾಮನಸಾಪಿ ಪರಿಪಾಲಿಸಿ ಶುಚಿರ್ಭೂತನಾಗಿ ನಿತ್ಯಾನಂದದಿಂದ ಶೋಭಿಸುತ್ತಿರಬೇಕು.

ಇತಿ ಆಯುರ್ವೇದ ವೈದ್ಯಶಾಸ್ತ್ರಿ ಎಂ. ಎಂ. ಆಳ್ವರಿಂದ ರಚಿತವಾದ 'ಲಘುದೀಪಿಕಾ', ಎಂಬ ಕರ್ಣಾಟಕ ವ್ಯಾಖ್ಯೆಯೊಳ್ ಧಾರಾಕಲ್ಪ ಪ್ರಕರಣವು ಸಮಾಪ್ತವಾದುದು.



# ॥ अथ मानपरिभाषा ॥

# ಅಥ ಮಾನಪರಿಭಾಷಾ

---

न मानेन विना युक्तिर्द्रव्याणां जायते क्वचित् ।
अतः प्रयोगकार्यार्थे मानमत्रोच्यते मया ॥ १ ॥
यवोऽष्टसर्षपैः प्रोक्तो गुञ्जा स्यात्तच्चतुष्टयम् ।
षड्भिस्तु रक्तिकाभिः स्यान्माषको हेमधान्यकौ ॥ २ ॥
माषैश्चतुर्भिः शाणःस्याद्धरणं तन्निगद्यते ।
टङ्कः स एव कथितस्तद्वयं कोल उच्यते ॥ ३ ॥
क्षुद्रको वटकश्चैव द्रङ्क्षणः स निगद्यते ।
कोलद्वयं च कर्षः स्यात्स प्रोक्तः पाणिमानिका ॥ ४ ॥
अक्षः पिचुः पाणितलं किंचित्पाणिश्च तिंदुकम् ।
बिडालपदकं चैव तथा षोडशिका मता ॥ ५ ॥
करमध्ये हंसपदं सुवर्णं कवडग्रहः ।
उदुंबरं च पर्यायैः कर्ष एव निगद्यते ॥ ६ ॥
स्यात्कर्षाभ्यामर्धपलं शुक्तिरष्टमिका तथा ।
शुक्तिभ्यां च पलं ज्ञेयं मुष्टिराम्रं चतुर्थिका ॥ ७ ॥
प्रकुञ्चः षोडशी बिल्वं पलमेवात्र कीर्त्यते ।
पलाभ्यां प्रसृतिर्ज्ञेया प्रसृतश्च निगद्यते ॥ ८ ॥
प्रसृतिभ्यामञ्जलिः स्यात्कुडवोऽर्धशरावका ।
अष्टमानं च स ज्ञेयः, कुडवाभ्यां च मानिका ॥ ९ ॥
शरावोऽष्टपलं तद्वज्ज्ञेयमत्र विचक्षणैः ।
शरावाभ्यां भवेत्प्रस्थश्चतुःप्रस्थैस्तथाऽढकम् ॥ १० ॥
भाजनं कंसपात्रं च चतुःषष्टिपलं स्मृतम् ।
चतुर्भिराढकैर्द्रोणः कलशो नल्वणोऽर्मणः ॥ ११ ॥

उन्मानं च घटो राशिद्रोणपर्यायसंज्ञकाः ।
द्रोणाभ्यां सूर्पकुंभौ च चतुःषष्ठि शरावकः ॥ १२ ॥
सूर्पाभ्यां च भवेद्रोणी वहो गोणी च सा स्मृता ।
द्रोणी चतुष्टयं खारी कथिता सूक्ष्मबुद्धिभिः ॥ १३ ॥
चतुःसहस्रपलिका षण्णवत्यधिका च सा ।
पलानां द्विसहस्रं च भार एक प्रकीर्तितः ॥ १४ ॥
तुला पलशतं ज्ञेयं सर्वत्रैष विनिश्चयः ।
माषटङ्काक्षबिल्वानि कुडवः प्रस्थमाढकम् ॥ १५ ॥
राशिर्द्रोणिः खारिकेति यथोत्तर चतुर्गुणाः ।

ಔಷಧಿದ್ರವ್ಯಗಳಲ್ಲಿ ಪರಸ್ಪರ ಒಂದಕ್ಕೊಂದನ್ನು ಸೇರಿಸಿಕೊಳ್ಳುವುದಕ್ಕೆ ಪ್ರಮಾಣವು ಅತ್ಯಗತ್ಯವು. ಇಂಥಾ ಕರ್ತವ್ಯವಿಧಿಗೆ "ಯುಕ್ತಿ"ಎಂದು ಹೆಸರು. ಆದ್ದರಿಂದ ಭೇಷಜ ದ್ರವ್ಯಗಳ ಯೋಜನೆಗೆ ಪ್ರಮಾಣ ವಿನಹ ಆಗದಿರುವುದರಿಂದ ಇಲ್ಲಿ ಅಳತೆಗಳ ಲೆಖ್ಖವನ್ನು ಸೂಚಿಸುವುದು:—

| | |
|---|---|
| 8 ನರ್ಷಪ(ಬಿಳಿ ಸಾಸ್ವೆಕಾಳು) | = 1 ಯವ (ಸಿಪ್ಪೆ ಕಳದ ಯವಧಾನ್ಯ) |
| 4 ಯವ | = 1 ಗುಂಜಾ (ಕೆಂಪು ಮಂಜೋಟಿ). |
| 6 ಗುಂಜಾ . . . . | = 1 ಮಾಷಕ (ಸುವರ್ಣಮಾಷಕ, ಸುಶ್ರು |
| 4 ಮಾಷಕ . . . . | = 1 ಶಾಣ ತಾದಿ ಗ್ರಂಥಗಳಲ್ಲಿ ಪ್ರಸಿದ್ಧ). |
| 2 ಶಾಣ . . . . . | = 1 ಕೋಲ (ಕ್ಷುದ್ರಕ, ವಟಕ, ದ್ರಂಕ್ಷಣ). |
| 2 ಕೋಲ. . . . . | = 1 ಕರ್ಷ (ಪಾಣಿಮಾನಿಕಾ, ಅಕ್ಷಃ, ಪಿಚುಃ, ಪಾಣಿತಲಂ, ತಿಂದುಕ, ಬಿಡಾಲಪದಕ, ಕರಮಧ್ಯ, ಹಂಸಪದ, ಸುವರ್ಣ, ಕವಡಗ್ರಹ, ಉದುಂಬರ). |
| 2 ಕರ್ಷ . . . . . | = ½ ಪಲ (ಶುಕ್ತಿಃ, ಅಷ್ಟಮಿಕಾ). |
| 2 ಶುಕ್ತಿ . . . . . | = 1 ಪಲ (ಮುಷ್ಟಿ, ಆಮ್ರಂ, ಚತುರ್ಥಿಕಾ, ಪ್ರಕುಂಚಃ, ಷೋಡಶೀ, ಬಿಲ್ವ, ಪಲ). |
| 2 ಪಲ . . . . . | = 1 ಪ್ರಸೃತಿಃ (ಪ್ರಸೃತಃ) |
| 2 ಪ್ರಸೃತಿಃ . . . . . | = 1 ಅಂಜಲಿಃ (ಕುಡವಃ, ಅರ್ಧರಾವಕಃ, ಅಷ್ಟಮಾನ). |

| | | |
|---|---|---|
| 2 ಕುಡವ | . . . . . | = 1 ಮಾನಿಕಾ (ಶರಾವಃ, ಅಷ್ಟಪಲ). |
| 2 ಶರಾವ | . . . . . | = 1 ಪ್ರಸ್ಥ. |
| 4 ಪ್ರಸ್ಥ | . . . . . . | = 1 ಆಢಕ (ಭಾಜನ, ಕಂಸಪಾತ್ರ, 64 ಪಲ). |
| 4 ಆಢಕ | . . . . . . | = 1 ದ್ರೋಣ (ಕಲಶ, ನಲ್ವಣ, ಅರ್ಮಣ, ಉನ್ಮಾನಂ, ಘಟ, ರಾಶಿ, ದ್ರೋಣ, ಇತಿ ಪರ್ಯಾಯ). |
| 2 ದ್ರೋಣ | . . . . . | = 1 ಸೂರ್ಪಕುಂಭ(64-ಚತುಃಷಷ್ಟಿಶರಾವಕಃ) |
| 2 ಸೂರ್ಪ | . . . . . | = 1 ದ್ರೋಣಿ(ವಹಃ, ಗೋಣೀ). |
| 4 ದ್ರೋಣೀ | . . . . | = 1 ಖಾರೀ(4096 =ಪಲ). |

2000 ಪಲ =1 ಭಾರ. 100 ಪಲ =1 ತುಲಾ.

ಮಾಷ, ಟಂಕ, ಅಕ್ಷ, ಬಿಲ್ವ, ಕುಡವ, ಪ್ರಸ್ಥ, ಆಢಕ, ರಾಶಿ, ದ್ರೋಣಿ, ಖಾರಿಕಾ, ಇವುಗಳು ಕ್ರಮಾತ್ 4 ಪಾಲಿನಷ್ಟು ದೊಡ್ಡದಾಗುತ್ತಾ ಬಂದಿವೆ. 'ಕರ್ಷ' ಎಂಬುದು ಈಗ ಚಾಲ್ತಿಯಾಗಿರುವ (ತೊಲೆ) ಒಂದು ರೂಪಾಯಿ ತೂಕದಷ್ಟು ಭಾರವಿದೆ. ಮಾಷಃ–ಒಂದಾಣೆ ತೂಕ, ಶಾಣ–ನಾಲ್ಕಾಣೆ ತೂಕ (ಒಂದು ಪಾವಲಿ), ಕೋಲ–$\frac{1}{2}$ರೂಪಾಯಿ ತೂಕ, ($\frac{1}{16}$, $\frac{1}{4}$, $\frac{1}{2}$ ) ಎಂದು ತಿಳಿದುಕೊಳ್ಳುವುದು. ಶರಾವ ಎಂಬ ಶಬ್ದಕ್ಕೆ 'ಸೇರು' ಎಂತಲೂ, ದ್ರೋಣಕ್ಕೆ 'ಮಣ' ಎಂತಲೂ ಪ್ರಸಿದ್ಧವಿದೆ.

शुष्काणां स्यादिदं मानं द्विगुणं तद्द्रवार्द्रयोः ॥ १६ ॥
न द्वैगुण्यं तुलामाने पलोल्लेखागते तथा ।
शुष्कद्रव्येषु यन्मानमार्द्रस्य द्विगुणं हि तत् ॥ १७ ॥
शुष्कस्य गुरुतीक्ष्णत्वं तस्मादर्धं प्रयोजयेत् ।
शुष्कं नवीनं यद्द्रव्यं योज्यं सकलकर्मसु ॥ १८ ॥
आर्द्रं च द्विगुणं दद्यादेष सर्वत्र निश्चयः ।

ಯಾವುದಾದರೊಂದು ಯೋಗದಲ್ಲಿ ಒಣಗಿದ ನೂತನ ದ್ರವ್ಯವನ್ನು ಎಷ್ಟು ಪ್ರಮಾಣವೆಂದು ಹೇಳಿರುವುದೋ ಅಷ್ಟನ್ನೇ ಸ್ವೀಕರಿಸತಕ್ಕದು. ಅದೇ ಯೋಗದಲ್ಲಿ ಅದೇ ಮದ್ದನ್ನು ಹಸಿ ಸೇರಿಸಬೇಕೆಂದಲ್ಲಿ ಹೇಳಿದ ಪ್ರಮಾಣಕ್ಕಿಂತ ದ್ವಿಗುಣ ಕೂಡಿಸಬೇಕು. ಅದಲ್ಲದೆ ಸಕಲ ಕಾರ್ಯಗಳಲ್ಲಿಯೂ ಹೊಸತಾದ ಮತ್ತು ಶುಷ್ಕ ದ್ರವ್ಯಗಳನ್ನು ಸಮತೂಕ ತೆಗೆದು

ಕೊಳ್ಳಬೇಕೆಂದರೂ, ಕೆಲವರ ಅಭಿಪ್ರಾಯವು "ಹಸಿ ಮದ್ದುಗಳಲ್ಲಿ ಗುಣ ಅಧಿಕವಾಗಿದ್ದು ಉತ್ಕೃಷ್ಟ ಕಾರ್ಯವುಳ್ಳದ್ದರಿಂದ ಆದಷ್ಟು ಪ್ರಯತ್ನಿಸಿ ಸರ್ವತ್ರ ಸಮವಾಗಿಯೇ ಅಂಗೀಕರಿಸಿ ಯಾವಡೆಗಳಲ್ಲಿಯೂ ಆರ್ದ್ರ ದ್ರವ್ಯ ಗಳನ್ನು ದ್ವಿಗುಣವಿಡದೆ ನವೀನ ಔಷಧಿಗಳನ್ನೇ ಯೋಗಗಳಲ್ಲಿ ಸೇರಿಸಿ ಕೊಳ್ಳುವುದು" ಎಂದಿರುವುದು. ಹಾಗೆಯೇ ದ್ರವಪದಾರ್ಥಗಳಾದ ಹಾಲ್, ನೀರು. ಹೇಳಿದ ಪ್ರಮಾಣಕ್ಕಿಂತ 2ರಷ್ಟು ಕೂಡಿಸಬೇಕು. ದ್ರವಪದಾರ್ಥ ಮತ್ತು ಆರ್ದ್ರದ್ರವ್ಯಗಳ ದ್ವಿಗುಣ ಪ್ರಮಾಣವು ರಕ್ತಕಾದಿಗಳಲ್ಲಿಯೂ ಕುಡುವಾದಿಗಳಲ್ಲಿಯೂ ಅನ್ವಯಿಸತಕ್ಕದು. ಆದರೆ ಯೋಗದಲ್ಲಿ ತುಲಾ, ಅಥವಾ ಪಲ, ಎಂದು ಸೂಚಿಸಿದ ಕಡೆಗಳಲ್ಲಿ ದ್ವಿಗುಣ ಸೇರಿಸಕೂಡದು ಯಥಾ "ರೋಹಿತಕತ್ವಚಃ ಶ್ರೇಷ್ಠಾತ್ವಲಾನಾಂ ಪಂಚವಿಂಶತಿಃ" ಎಂಬಲ್ಲಿ ದ್ವಿಗುಣತ್ವವು ಗ್ರಾಹ್ಯವಲ್ಲ.

"ರೋಹಿತಕತ್ವಚಃ ಶ್ರೇಷ್ಠಾತ್ಪಲಾನಾಂ ಪಂಚವಿಂಶತಿಃ" ಎಂಬಲ್ಲಿ ದ್ರವಾರ್ದ್ರದ್ರವ್ಯಗಳ ದ್ವಿಗುಣತ್ವವು ಮಾಡತಕ್ಕದ್ದಲ್ಲ.

"ಗುಂಜಾದಿ ಮಾನಮಾರಭ್ಯ ಯಾವತ್ಸ್ಯಾತ್ ಕುಡವಸ್ಥಿತಿಃ ||
ದ್ರವಾರ್ದ್ರ ಶುಷ್ಕದ್ರವ್ಯಾಣಾಂ ತಾವನ್ಮಾನಂ ಸಮಂ ಮತಂ ||
ಪ್ರಸ್ಥಾದಿ ಮಾನಮಾರಭ್ಯ ದ್ವಿಗುಣಂ ತದ್ದ್ರವಾರ್ಧಯೋಃ || "

ಈ ಪ್ರಮಾಣವು ಸುಶ್ರುತ ಚರಕಾದಿ ಸಂಹಿತೆಗಳಿಗೆ ವಿರೋಧವಾಗಿ ಅಲ್ಲದೆ ಯುಕ್ತಿಗೂ ಕೂಡಾ ವಿರೋಧವಾಗಿ ಪರಿಣಮಿಸುತ್ತದೆ.

गुडूची कुटजो वासा कूष्मांडं च शतावरी ॥ १९ ॥
अश्वगंधासहचरौ शतपुष्पा प्रसारिणी ।
प्रयोक्तव्या सदैवार्द्रां द्विगुणं नैव कारयेत् ॥ २० ॥

ಅಮೃತಬಳ್ಳಿ, ಸಣ್ಣಕೊಡಸಿಗನ ಕೆತ್ತೆ, ಕೂಷ್ಮಾಂಡ, ಶತಾವರಿ, ಅಶ್ವಗಂಧಿ, ಕರಿಕುರಿಂಞ ಬೇರು, ಸತಾಪೆ, ಪ್ರಸಾರಿಣೀ ಈ ಬಗೆಯ ಮದ್ದುಗಳನ್ನು ಎರಡು ಪಾಲಾಗಿ ಉಪಯೋಗಿಸದೆ ಹಸಿಯಾಗಿಯೇ ಒಂದು ಪಾಲು ಕೂಡಿಸಿಕೊಳ್ಳಬೇಕು.

वासानिंबपटोलकेतकिबलाकूष्मांडकेंदीवरी ।
वर्षाभूकुटजाश्वगंधसहितास्ताः पूतिगंधामृताः ॥ २१ ॥
मांसं नागबला सहाचरपुरौ हिंग्वार्द्रके नित्यशो ।
ग्राह्यास्तत्क्षणमेव न द्विगुणिता ये चेक्षुजाता घनाः ॥ २२ ॥

ಅಡುಸೋಗೆ ಬೇರು, ಕಹಿಬೇವಿನ ಕೆತ್ತೆ, ಕಾಡುಪಟೋಲ, ಕೇದಿಗೆ ಬೇರು, ಕಡಿರ ಬೇರು, ಕೂಷ್ಮಾಂಡ, ಶತಾವರಿ, ಪುನರ್ನವೆ ಬೇರು, ಸಣ್ಣ ಕೊಡಸಿಗನ ಕೆತ್ತೆ, ಅಶ್ವಗಂಧಿ, ಪ್ರಸಾರಿಣೀ, ಅಮೃತಬಳ್ಳಿ, ಮಾಂಸಿ, ದೊಡ್ಡ ಕಡಿರ ಬೇರು, ಕರಿಕುರಿಂಜಿ, ಗುಗ್ಗುಲು, ಹಿಂಗು, ಶುಂಠಿ, ಇಕ್ಷು ಜಾತೀಯುಗಳಾದ ಬೆಲ್ಲ ಮುಂತಾದ್ದನ್ನು ದ್ವಿಗುಣವಿಡದೆ ನವೀನ ವಾದದ್ದನ್ನೇ ಸೇರಿಸಿಕೊಳ್ಳಬೇಕು.

॥ अथ भेषजादिग्रहणसंकेतः ॥

लवणं सैंधवं प्रोक्तं चंदनं रक्तचंदनम् ।
चूर्णलेहासवाः साध्याः धवलचंदनैः ॥ २३ ॥
कषायलेपयोः प्रायो युज्यते रक्तचंदनम् ।
पयः सर्पिः प्रयोगेषु गव्यमेव हि गृह्यते ॥ २४ ॥
शकृद्रसो गोमयकं मूत्रं गोमूत्रमुच्यते ।
सिद्धार्थः सर्षपे ग्राह्य उत्पले नीलमुत्पलम् ॥ २५ ॥
कालेऽनुक्ते प्रभातं स्यादङ्गेऽनुक्ते जटा भवेत् ।
भागेऽनुक्ते च साम्यं स्यात् पात्रेऽनुक्ते च मृण्मयम् ॥ २६ ॥
द्रव्येऽनुक्ते जलं ग्राह्यं तैलेऽनुक्ते तिलोद्भवम् ।
एकमप्यौषधं योगे यस्मिन्यत्पुनरुच्यते ॥ २७ ॥
मानतो द्विगुणं ग्राह्यं तद्द्रव्यं तत्वदर्शिभिः ।
व्याधेरयुक्तं यद्द्रव्यं गणोक्तमपि तत्यजेत् ॥ २८ ॥
अनुक्तमपि युक्तं यद्योजयेत्तत्र तद्बुधः ।
कदाचित् द्रव्यमेकं हि यदि योगे न लभ्यते ॥ २९ ॥

तत्तद्गुणयुतं द्रव्यं परिवर्तेन गृह्यते ।
द्रव्यभावे तु तत्तुल्यं द्रव्यमेव प्रदीयते ॥ ३० ॥
न्यग्रोधाधेस्त्वचो ग्राह्या सारः स्याद्बीजकादितः ।
तालीसादेश्च पत्राणि फलं स्यात्रिफलादितः ॥ ३१ ॥
धातक्यादेश्च पुष्पाणि स्नुह्यादेः क्षीरमाहरेत् ।
महांति यानि मूलानि काष्ठगर्भाणि यानि च ॥ ३२ ॥
तेषां तु वल्कलं ग्राह्यं सूक्ष्ममूलानि कृत्स्नतः ।
जांगलानां वयस्थानां चर्मरोम नखादिकम् ॥ ३३ ॥
क्षीरमूत्रपुरीषाणि जीर्णाहारे तु ग्राहयेत् ।
चतुष्पत्सु स्त्रियः श्रेष्ठाः पुमांसो विहगेषु च ॥ ३४ ॥
वल्मीककुत्सितानूपश्मशानोषरमार्गजाः ।
जंतुवह्निहिमव्याप्ता नौषध्यः कार्यसाधिकाः ॥ ३५ ॥
शरद्यखिलकार्यार्थं ग्राह्यं सरसमौषधम् ।
विरेकवमनार्थं च वसंतांते समाहरेत् ॥ ३६ ॥

ಯೋಗಗಳಲ್ಲಿ **ಲವಣಂ** ಎಂದು ಹೇಳಿದ್ದಲ್ಲಿ **ಸೈಂಧವಲವಣವ**ನ್ನೂ, **ಚಂದನಂ-ರಕ್ತಚಂದನ**ವನ್ನೂ, ಚೂರ್ಣ, ಲೇಹ, ಆಸವ, ಲೇಹಾದಿಗಳಲ್ಲಿ **ಶ್ರೀಗಂಧ**ವನ್ನೂ, ಕಷಾಯ, ಲೇಪಗಳಲ್ಲಿ ಪ್ರಾಯಶಃ **ರಕ್ತಚಂದನ**ವನ್ನೂ, **ಪಯಃ ಸರ್ಪಿ-ದನದ ಹಾಲು ತುಪ್ಪ**ಗಳನ್ನೂ, **ಶಕೃದ್ರಸಂ-ದನದ ಸೆಗಣಿಯ ರಸ**ವನ್ನೂ, **ಮೂತ್ರಂ-ಗೋಮೂತ್ರ**ವನ್ನೂ, **ಸಿದ್ಧಾರ್ಥ-ಬಿಳಿಸಾಸಿವೆ**ಯನ್ನೂ, **ಉತ್ಪಲ-ನೆಲಸಂಪಿಗೆಗಡ್ಡೆ**ಯನ್ನೂ, ಔಷಧಿ ಸ್ವೀಕರಿಸುವ ಕಾಲವನ್ನು ಸ್ಪಷ್ಟವಾಗಿ ಸೂಚಿಸದಿದ್ದಲ್ಲಿ **ಪ್ರಭಾತ ಕಾಲ**ದಲ್ಲಿಯೂ, ಅಂಗವು ಅನುಕ್ತವಾದ್ದಲ್ಲಿ **ಉತ್ತಮಾಂಗ**ದಲ್ಲಿಯೂ, ಭಾಗವು ಹೇಳದಿದ್ದಲ್ಲಿ **ಸಮಭಾಗ**ವೆಂದೂ, ಪಾತ್ರಕ್ಕೆ-**ಮೃಣ್ಮಯಪಾತ್ರ**ವನ್ನೂ, ದ್ರವವು ಹೇಳದಿದ್ದಲ್ಲಿ **ಜಲ**ವನ್ನೂ, **ತೈಲಂ-ಎಳ್ಳೆಣ್ಣೆ**ಯನ್ನೂ, ಒಂದು ಯೋಗದಲ್ಲಿ ಒಂದು ಬಗೆಯ ಮದ್ದನ್ನು ಮತ್ತೊಮ್ಮೆ ಹೇಳಿದರೆ **ದ್ವಿಗುಣ** ಸೇರಿಸಬೇಕೆಂದೂ, ವ್ಯಾಧಿಗೆ ಅಯುಕ್ತವಾದ ಔಷಧಿಯನ್ನು

ಗಣದಲ್ಲಿ ಹೇಳಿದ್ದರೂ, ಯುಕ್ತವಾದ ಮದ್ದನ್ನು ಹೇಳದಿದ್ದರೂ ತಿಳಿದ ವೈದ್ಯನು ಕೂಡಿಸುವಲ್ಲಿ ಕೂಡಿಸಿ, ತ್ಯಜಿಸುವಲ್ಲಿ ತ್ಯಜಿಸಬೇಕು. ಒಂದು ವೇಳೆ ಯೋಗದಲ್ಲಿ ಒಂದು ದ್ರವ್ಯ ಸಿಕ್ಕಲಿಲ್ಲವೆಂದಾದರೆ ಅದೇ ಗುಣವೀರ್ಯ ವಿಪಾಕವುಳ್ಳ ಮತ್ತೊಂದು ಮದ್ದನ್ನು ಬದಲಿಗಾಗಿ ಉಪಯೋಗಿಸಿಕೊಳ್ಳ ಬಹುದು. ಕಿನ್ನಿಗೋಳಿ, ಗೋಳಿ, ಅಶ್ವತ್ಥ ಮುಂತಾದ ದೊಡ್ಡ ವೃಕ್ಷಗಳ ಕೆತ್ತೆಯನ್ನೂ, ಬೇಂಗ ಮೊದಲಾದ ಕೆಲವು ಮರಗಳ ತಿರುಳು ಭಾಗವನ್ನೂ, ತಾಲೀಸಾದಿ ಎಲೆಗಳನ್ನೂ, ಅಣಿಲೆ, ಶಾಂತಿ, ನೆಲ್ಲಿ ಮುಂತಾದ ಮರಗಳ ಕಾಯಿಗಳನ್ನೂ, ಧಾತಕೀ ಮುಂತಾದ್ದರ ಪುಷ್ಪಗಳನ್ನೂ, ಕಳ್ಳಿ ಮುಂತಾದ್ದರ ಹಾಲನ್ನೂ ಸ್ವೀಕರಿಸತಕ್ಕದ್ದು. ಮಣ್ಣಿನೊಳಗಿರುವ ಬಹಳ ದೊಡ್ಡದಾಗಿರುವ ಬೇರುಗಳ ಮೇಲಿನ ಸಿಪ್ಪೆಯನ್ನೂ, ಸಣ್ಣ ಸಣ್ಣ ಬೇರು ಗಳನ್ನೂ, ತೆಗೆದುಕೊಳ್ಳಬೇಕು. ವಾತಭೂಯಿಷ್ಟ ದೇಶಗಳಲ್ಲಿ ಸಂಭವಿಸಿದ ತರುಣಪ್ರಾಯದ ಮೃಗಪಕ್ಷಿಗಳ, ಆಹಾರವು ಜೀರ್ಣವಾಗಿರುವ ಕಾಲದಲ್ಲಿ, ಚರ್ಮರೋಮ ಕ್ಷೀರಮೂತ್ರಾದಿಗಳನ್ನು ಸ್ವೀಕರಿಸಬೇಕು. ಮೃಗಗಳಲ್ಲಿ ಹೆಣ್ಣು ಜಾತಿಯವುಗಳೂ, ಪಕ್ಷಿಜಾತಿಗಳಲ್ಲಿ ಗಂಡುಜಾತಿಯವುಗಳೂ ಶ್ರೇಷ್ಠವುಗಳಾಗಿವೆ. ಕುತ್ಸಿತ, ಕಫೋಲ್ಬಣ ದೇಶ, ಶ್ಮಶಾನ, ಜಂತು, ವಹ್ನಿ, ಹಿಮ ಇವುಗಳಲ್ಲಿ ಬೆಳೆದು ವ್ಯಾಪಿಸಿಕೊಂಡಿರುವ ಗಿಡಮೂಲಿಕೆಗಳು ಕಾರ್ಯಸಿದ್ಧಿಯನ್ನುಂಟುಮಾಡುವುದಿಲ್ಲ. ಶರತ್ಕಾಲದಲ್ಲಿ ಕಿತ್ತು ತೆಗೆದ ಎಲ್ಲಾ ವನಸ್ಪತ್ಯೌಷಧಗಳು ತುಂಬಾ ಪ್ರಯೋಜನಕಾರಿಗಳಾಗುತ್ತವೆ. ವಿರೇಚನ, ವಮನ ವಿಧಿಗಳಿಗೆ ವಸಂತ ಋತುವಿನ ಆರ್ಭ್ಯಂ ಸಮಯದಲ್ಲಿ ಸಂಗ್ರಹಿಸಿಕೊಳ್ಳಬೇಕು.

धन्वसाधरणे देशे समे सन्मृत्तिके शुचौ ।
श्मशानचैत्यायतनश्वभ्रवल्मीकवर्जिते ॥ ३७ ॥
मृदौ प्रदक्षिण जले कुशरोहिष संस्कृते ।
अफालकृष्टेऽनाक्रांते पादपैर्बलवत्तरैः ॥ ३८ ॥
अस्यते भेषजं जातं युक्तं वर्णे रसादिभिः ।
जंत्वजग्धं दवादग्धमविदग्धं च वैकृतैः ॥ ३९ ॥

भूतैश्छायातपाम्बाद्यैर्यथाकालं च सेवितम् ।
अवगाढमहामूलमुदीचीं दिशमाश्रितम् ॥ ४० ॥

ನಿರ್ಮಲವಾದ ಭೂಪ್ರದೇಶದಲ್ಲಿ ಕುಶ ಮುಂತಾದವುಗಳು ಇರುವ ಬಲವತ್ತರವಾದ ವೃಕ್ಷಗಳಿಂದ ಆಕ್ರಮಿಸಲ್ಪಡದಿರುವ, ಶ್ಮಶಾನ, ಬುದ್ಧಾಲಯ (ವಿಶಿಷ್ಟ ದೇವತಾಧಿಷ್ಠಿತ ಲೋಕಪ್ರಸಿದ್ಧ ವೃಕ್ಷವಿಶೇಷ), ವಲ್ಮೀಕ ಮುಂತಾದ ಕಡೆಗಳನ್ನು ಬಿಟ್ಟು, ಜಂತುಗಳಿಂದ ಜಗಿಯಲ್ಪಡದಿರುವ, ಕಾಡ್ಗಿಚ್ಚಿನಿಂದ ದಹಿಸಲ್ಪಡದಿರುವ, ಬಿಸಿಲು, ನೀರು ಇವುಗಳಿಂದ ಸ್ಪರ್ಶಿಸಲ್ಪಡದಿರುವ, ವಿಕಾರವಾಗದಿರುವ, ಔಷಧಿಗಳನ್ನು—

अथ कल्याणचरितः श्राद्धः शुचिरुपोषितः ।
गृह्णीयादौषधं सुस्थं स्थितं काले च कल्पयेत् ॥ ४१ ॥
सक्षीरं तदसंपत्तावनतिक्रांतवत्सरम् ।
ऋते गुडघृतक्षौद्रधान्यकृष्णाविडङ्गतः ॥ ४२ ॥

ಅನಂತರ ಸ್ಥಳ, ಕಾಲ ಮುಂತಾದುವುಗಳನ್ನು ಚೆನ್ನಾಗಿ ವಿಚಾರಿಸಿ, ಶ್ರದ್ಧೆಯಿಂದ ಕೂಡಿದವನಾಗಿ, ಶುಚಿಭೂರ್ತನಾಗಿ, ಉಪವಾಸಾದಿಗಳಿಂದ ಕೂಡಿದವನಾಗಿ ಭೇಷಜಕಲ್ಪವನ್ನು ಮಾಡಬೇಕು. ಒಂದು ವತ್ಸರ ಕಳೆಯದಿರುವ ಔಷಧಿಗಳನ್ನೇ ಸ್ವೀಕರಿಸತಕದ್ದು. ಈ ಪ್ರಕಾರ ಅಂಗೀಕರಿಸಲ್ಪಟ್ಟ ಔಷಧಿಗಳು ವಿಶಿಷ್ಟ ಕರ್ಮವನ್ನು (ಪ್ರಭಾವ) ರೋಗಿಯಲ್ಲಿ ಉಂಟುಮಾಡುವುದು. ಔಷಧ ಪ್ರಭಾವ ಸಂದರ್ಭದಲ್ಲಿ ವಿದ್ಯಾರಣ್ಯ ಸ್ವಾಮಿಗಳ ಅಭಿಪ್ರಾಯವು ಇದೇ ಹಿಂದೆ ಹೇಳಿದ್ದಾಗಿರುವುದು. ಆದರೆ 1 ವತ್ಸರ ಕಳೆದ ಎಲ್ಲಾ ಔಷಧಿಗಳು ಅನಂಗೀಕಾರವೋ, ಎಂದರೆ ಬೆಲ್ಲ, ತುಪ್ಪ, ಜೇನುತುಪ್ಪ, ಧಾನ್ಯ, ಹಿಪ್ಪಿಲಿ, ವಾಯುವಿಳಂಗ ಇವುಗಳ ಹೊರತು ಬೇರೆ ಔಷಧಿಗಳನ್ನು ಒಂದು ವರ್ಷಕ್ಕೆ ಮುಂಚೆಯೇ ಅಂಗೀಕರಿಸುವುದು.

पयो बाष्कयणं ग्राह्यं विण्मूत्रं तच्च नीरुजम् ।
वयोबलवतां धातुपिच्छश्रृङ्गखुरादिकम् ॥ ४३ ॥

ಬೆಳಗ್ಗೆ ಮತ್ತು ಸಾಯಂಕಾಲ ಎರಡು ಸರ್ತಿ ಕರೆಯಲ್ಪಡುವ, ಕರುವುಳ್ಳ ಮತ್ತು ರೋಗವಿಲ್ಲದಿರುವ ಯೌವನವಾದ ದನದ ಬೆಳಗ್ಗಿನ ಸೆಗಣಿ, ಮೂತ್ರ ಮತ್ತು ಶೃಂಗ, ಗೊರಸು ಮುಂತಾದುವುಗಳನ್ನು ಸ್ವೀಕರಿಸಿ ಔಷಧಿಗಳಿಗೆ ಉಪಯೋಗಿಸುವುದು.

सद्यः समुद्धृतक्षुण्णाद्यः स्रवेत्पटपीडितात् ।
स्वरसः स समुद्दिष्टः ॥

ಯೋಗ್ಯ ಸ್ಥಳದಿಂದ ಆಗತಾನೆ ತಂದು ಚೆನ್ನಾಗಿ ಜಜ್ಜಿ ವಸ್ತ್ರದಿಂದ ಗಾಳಿಸಿದ ಯಾವದೊಂದು ಕಲ್ಪನಾ ಕಷಾಯವಿದೆಯೋ ಅದೇ ಸ್ವರಸ ವೆನ್ನಲ್ಪಡುವುದು.

कल्कः पिष्टो द्रवाप्लुतः ।
चूर्णोऽप्लुतः ॥ ४४ ॥

ದ್ರವಗಳಿಂದ ಒದ್ದೆಯಾಗಿ ಮಾಡಿದ ಚೂರ್ಣವೇ ಕಲ್ಕ. ದ್ರವ ವಿಲ್ಲದೇ ವಸ್ತ್ರಗಾಳಿತ ಮಾಡಿದ್ದೇ ಚೂರ್ಣ.

शृतः क्वाथः ।

ಯೋಗೋಕ್ತ ಔಷಧಿಗಳನ್ನು ಲೆಖ್ಖಪ್ರಕಾರ ಹಾಕಿ ಕುದಿಸಿ ಉಳಿಸಿದ ದ್ರವವೇ ಕಷಾಯ.

शीतो रात्रिं द्रवे स्थितः ॥ ४५ ॥

ಯಾವ ದ್ರವ್ಯವು ದ್ರವದಲ್ಲಿ ಇಡೀ ರಾತ್ರಿ ಇಟ್ಟು ಬೆಳಗ್ಗೆ ಉಪ ಯೋಗಿಸಲ್ಪಡುವುದೋ ಅದೇ ಶೀತವೆನ್ನಲ್ಪಡುವುದು.

सद्योभिषुनपूतस्तु फांट ।

ಯಾವುದೊಂದು ದ್ರವ್ಯವು ಸದ್ಯಃ ದ್ರವದಲ್ಲಿ ಹಾಕಿ ಪೂತವಾಗಿ ಮಾಡಲ್ಪಡುವುದೋ ಅದೇ ಫಾಂಟ.

पाकस्तु त्रिविधो मंदश्चिक्कणः खरचिक्कणः ।
मंदः कल्कसमे किंचिच्चिक्कणो मदनोपमे ॥ ४६ ॥
किञ्चित्सीदति कृष्णे च वर्तमाने च पश्चिमः ।
दग्धोत ऊर्ध्वं निष्कार्यः स्यादामस्त्वाग्निसादकृत् ॥ ४७ ॥
मृदुर्नस्ये खरोऽभ्यङ्गे पाने बस्तौ च चिक्कणः ।

### ಪಾಕವು ಮೂರು ವಿಧ–

ಮಂದ, ಚಿಕ್ಕಣ, ಖರಚಿಕ್ಕಣ, ಇದಕ್ಕಿಂತ ಹೆಚ್ಚಿನ ಪಾಕಕ್ಕೆ ಬಂದರೆ ದಗ್ಧಪಾಕ, ಇದು ಯಾವುದೊಂದು ಕಾರ್ಯಕ್ಕಾಗದೇ ನಿಷ್ಫಲ ವಾಗುವುದು. ಆಮವಾದರೆ, ಅಗ್ನಿಮಾಂದ್ಯವೇ ಮೊದಲಾದ ವಿಪರೀತ ಗುಣಗಳಿಂದ ಕೂಡಿಕೊಂಡಿರುವುದು. ಮೃದುಪಾಕವು ನಸ್ಯಕ್ಕೂ, ಖರ ಪಾಕವು ಅಭ್ಯಂಗಕ್ಕೂ, ಪಾನ, ಬಸ್ತಿಗಳಲ್ಲಿ ಚಿಕ್ಕಣಪಾಕವೂ ಉಪ ಯೋಗಿಸಲ್ಪಡುವುದು.

नाङ्गुलिग्राहिता कल्के न स्नेहेऽग्नौ सशब्दता ।
वर्णादि संपन्न यदा तदैनं शीघ्रमावहेत् ॥ ४८ ॥

### ಪಾಕಲಕ್ಷಣ

ಕಲ್ಕವು ಯಾವಾಗ ಅಂಗುಲಿ ಗ್ರಾಹಿತ್ವವಾಗುವುದಿಲ್ಲವೋ, ಅಗ್ನಿ ಯಲ್ಲಿ ಸ್ನೇಹವನ್ನು ಇಡುವಾಗ್ಗೆ ಚಟಚಟ ಮುಂತಾದ ಶಬ್ದವು ಉಂಟಾಗು ವುದಿಲ್ಲವೋ, ವರ್ಣ, ಗಂಧ, ರಸ ಸ್ಪರ್ಶಗಳಿಗೆ ಶುಭತ್ವವುಂಟಾಗುವುದೋ ಅಂಥಾ ಕಾಲದಲ್ಲಿ ಶೀಘ್ರದಿಂದ ಇಳಿಸಬೇಕು. ಇದೇ ಕಟಾಹದಲ್ಲಿರುವ ಸ್ನೇಹದ ಅವತರಣಕ್ಕೆ ಯೋಗ್ಯಕಾಲವು.

तैलस्य कल्कं सञ्चूर्ण्य बुधः सम्मर्द्य योजयेत् ।
घृतस्य कल्कं मतिमान् जर्जरीकृत्य योजयेत् ॥ ४९ ॥

### ಕಲ್ಕವನ್ನು ಸೇರಿಸುವ ಕ್ರಮ

ಎಣ್ಣೆಗೆ ಕಲ್ಕಚೂರ್ಣವನ್ನು ಅರೆದು ಸೇರಿಸಬೇಕು. ಘೃತಕ್ಕೆ ಚೂರ್ಣವನ್ನೇ ನೆನೆಯಿಸಿ ಸೇರಿಸಬೇಕು.

अमर्दितं तैलकल्कत चक्षुष्ये भवेन्नृणाम् ।
मर्दितं घृतकल्कं च तेजो धातुक्षयं भवेत् ॥ ५० ॥

ತೈಲಕ್ಕೆ ಕಲ್ಕವನ್ನು ಮರ್ದನೆ ಮಾಡದೇ ಸೇರಿಸಿದರೆ ನೇತ್ರಕ್ಕೆ ಅಹಿತವನ್ನುಂಟುಮಾಡುತ್ತದೆ. ಘೃತಕ್ಕೆ ಮರ್ದಿಸಿ ಸೇರಿಸಿದರೆ, ತೇಜೋಹಾನಿ, ಧಾತುಕ್ಷಯವುಂಟಾಗುತ್ತದೆ.

मृद्वग्निना पचेत्तस्य पुनः पाकं शनैः शनैः ।
एतत्तैलं महावीर्यं त्रिदोषशमनं परम् ॥ ५१ ॥

### ಅಗ್ನಿಪಾಕ ವಿಧಿ

ತೈಲ, ಘೃತ ಇವೇ ಮುಂತಾದ ಔಷಧಿಗಳನ್ನು ಮೃದ್ವಗ್ನಿಯಿಂದಲೇ ತಯಾರಿಸುವುದು. ಯಾಕೆಂದರೆ ಅಧಿಕ ವೀರ್ಯವನ್ನುಂಟುಮಾಡಿ ತ್ರಿದೋಷಗಳ ವೈಷಮ್ಯವನ್ನು ಹೋಗಲಾಡಿಸುವುದು.

घृतं वा तिलतैलं वा लेह्यं वा विपचेद्भिषक् ।
नेत्रौषधान् विशेषेण विषवृक्षेधनं त्यजते् ॥ ५२ ॥

### ತಯಾರಿಸುವಾಗ್ಯೆ ತ್ಯಜಿಸತಕ್ಕ ಕಟ್ಟಿಗೆಗಳು

ಘೃತವಾಗಲೀ, ತೈಲವಾಗಲೀ, ಲೇಹ್ಯವಾಗಲೀ ತಯಾರಿಸುವಾಗ ವಿಷಕಾರಿ ಕಟ್ಟಿಗೆಗಳನ್ನು ವರ್ಜಿಸಬೇಕು. ವಿಶೇಷತಃ ನೇತ್ರೌಷಧಿಗಳಿಗೆ

ಆಗತ್ಯವಿದ್ದ ಮದ್ದನ್ನು ಪಾಕಮಾಡುವಾಗ್ಗೆ, ಯೋಗ್ಯ ಜಾತಿಯ ಕಟ್ಟಿಗೆಗಳನ್ನು ಮಾತ್ರ ಉಪಯೋಗಿಸಬೇಕು.

धन्वंतरीं गरुत्मंतं पावकं सूर्यमश्विनौ ।
अच्युतं चामृतं चैव स्मरेदौषध कर्मणि ॥ ५३ ॥

## ಔಷಧಿ ಪ್ರವೃತ್ತಿಕಾಲದಲ್ಲಿ ಸ್ಮರಿಸಲ್ಪಡತಕ್ಕವರು

ಔಷಧ ಕೆಲಸ ಮಾಡುವಾಗ ಧನ್ವಂತರಿ, ಗರುಡ, ಅಗ್ನಿ, ಸೂರ್ಯ, ಅಶ್ವಿನೀದೇವತೆಗಳು, ವಿಷ್ಣು, ಅಮೃತ ಇವರನ್ನು ಚೆನ್ನಾಗಿ ವಿಚಾರಿಸಿ, ಔಷಧಿಗಳ ಕೆಲಸಗಳನ್ನು ಪ್ರಾರಂಭಿಸಬೇಕು.

पञ्चषड्दिवसैः क्वाथे द्रव्याद्वीर्यं विमुञ्चति ।
कल्कद्रव्ययुतं स्नेहं पीडयेत् पञ्चभिर्दिनैः ॥ ५४ ॥

ಕುದಿಸತಕ್ಕ ಔಷಧಿಗಳ ಶಕ್ತಿಯು ಕಷಾಯದೊಂದಿಗೆ 5 ದಿವಸಗಳಲ್ಲಿ ಸೇರುತ್ತದೆ. 6ನೇ ದಿವಸದಲ್ಲಿ ಗಾಳಿಸಿ ಸ್ನೇಹದೊಡನೆಯೂ, ಕಲ್ಕ ಸೇರಿಸಿದ 5ನೇ ದಿವಸದಲ್ಲಿ ಪಾಕಮಾಡಿ ಇಳಿಸಬೇಕು.

लाजामाषकुलत्थमुद्गलशुना शुंठीयवौ क्वाथयेत् ।
सद्यस्त्वेव कषायपाकविधिना स्नेहेन संयोजयेत् ॥ ५५ ॥
कुर्यात्पीडनमेकरात्र परतः सौवीर तक्रान्विते ।
स्नेहे मस्तु पयोरसैश्च सहितद्वाभ्यां दिनाभ्यां परम् ॥ ५६ ॥

ಹೊದಳು, ಉದ್ದು, ಹುರುಳಿ, ಸಣ್ಣಹೆಸರು, ಬೆಳ್ಳುಳ್ಳಿ, ಶುಂಠಿ, ಇವುಗಳ ಕಷಾಯವನ್ನು ಆಯಾ ದಿನವೇ ಕುದಿಸಿ, ಗಾಳಿಸಿ, ಸೇರಿಸಬೇಕು. ಅಥವಾ ಒಂದು ದಿನಕ್ಕಿಂತ ಹೆಚ್ಚು ಸಮಯ ತೆಗೆಯಬಾರದು. ಮಜ್ಜಿಗೆ ಮಾಂಸರಸ, ಹಾಲು ಸೇರಿಸಿದರೆ, ಎರಡು ದಿವಸಗಳಿಗಿಂತ ಜಾಸ್ತಿ ಕಳೆಯಬಾರದು.

ಇತಿ ಆಯುರ್ವೇದ ವೈದ್ಯಶಾಸ್ತ್ರಿ ಎಂ. ಎಂ. ಆಳ್ವರಿಂದ ರಚಿತವಾದ 'ಲಘುದೀಪಿಕಾ' ಎಂಬ ಕರ್ಣಾಟಕ ವ್ಯಾಖ್ಯೆಯೊಳ್ ಮಾನಪರಿಭಾಷಾ ಪ್ರಕರಣವು ಸಮಾಪ್ತವಾದುದು.

## ॥ स्नेहपाकपरिभाषाः ॥
## ಸ್ನೇಹಪಾಕಪರಿಭಾಷಾ

अत्राहसुश्रुतः-

स्नेहाच्चतुर्गुणो द्रवः, स्नेहचतुर्थांशो भेषज कल्कः ।
तदैकध्यं संसृज्य विपचेदित्येष स्नेहपाककल्पः ॥ १ ॥
स्नेहभेषजतोयानां प्रमाणं यत्र नेरितम् ।
तत्रायं विधिरास्थेयो निर्दिष्टे तत्तदेव तु ॥ २ ॥

**ಸುಶ್ರುತ ಸಂಹಿತೆಯು ಈ ಪ್ರಕಾರ ಸೂಚಿಸುತ್ತದೆ:—**

ಸ್ನೇಹದ್ರವ್ಯದ 4 ಪಾಲು ದ್ರವಪದಾರ್ಥವನ್ನೂ, ಸ್ನೇಹದ $\frac{1}{4}$ ಅಂಶ ಮದ್ದಿನ ಕಲ್ಕವನ್ನೂ, ಹೀಗೇ ಸೇರಿಸಿಕೊಂಡು ಪಾಕಮಾಡತಕ್ಕದ್ದು. ಕೆಲವೆಡೆ ಒಂದು ಸ್ನೇಹಪಾಕಕ್ಕೆ ಐದಾರು ವಿಧದ ಸ್ವರಸ ಕಷಾಯುಗಳನ್ನು ಸೇರಿಸಬೇಕೆಂದು ಹೇಳಿದ್ದಲ್ಲಿ, ಎಲ್ಲಾ ದ್ರವಗಳು ಕೂಡಿ ಸ್ನೇಹದ 4 ಪಾಲು ಎಂದೂ, ಅಥವಾ ಒಂದೇ ಬಗೆಯ ದ್ರವವಾದರೂ 4 ಪಾಲು ಎಂದೂ, ವ್ಯಕ್ತವಾಗುವುದು. ಕೆಲವು ಸಮಯ 3 ಬಗೆಯ ದ್ರವಗಳಿದ್ದರೆ, 3 ದ್ರವಗಳು ಕೂಡಿ 4 ಪಾಲು ಎಂದೂ, 4 ವಿಧದ್ದಾದರೂ ಪ್ರತಿಯೊಂದು ಸ್ನೇಹ ಪದಾರ್ಥದಷ್ಟೇ ಕೂಡಿಸಿ, 4 ಪಾಲೆಂದೂ ಸ್ಪಷ್ಟಾಭಿಪ್ರಾಯವಿದೆ. ಆದರೆ ಹಾಲು ಮಾತ್ರ-

यत्र द्रवांतरं नोक्तं तत्र क्षीरं चतुर्गुणम् ।
द्रवांतरप्रयोगे तु क्षीरं स्नेहसमं मतम् ॥ ३ ॥

ಯಾವ ಕಡೆಯಲ್ಲಿ ಬೇರೆ ಸ್ವರಸಕಷಾಯಾದಿ ದ್ರವಗಳನ್ನು ಹೇಳದೆ ಹಾಲು ಒಂದರಿಂದಲೇ ಪಾಕವಾಗಬೇಕೆಂದಿದ್ದರೆ, ಹಾಲನ್ನು ಸ್ನೇಹದ 4 ಪಾಲು ಕೂಡಿಸಿಕೊಳ್ಳಬೇಕು. ಬೇರೆ ದ್ರವಗಳನ್ನು ಕೂಡಿಸಿಕೊಂಡು ಪಾಕ ಮಾಡಬೇಕೆಂದಲ್ಲಿ ಹಾಲನ್ನು ಸ್ನೇಹದ ಸಮಾಂಶ ಕೂಡಿಸಿಕೊಳ್ಳತಕ್ಕದು.

ಎಲ್ಲಿ ಸ್ನೇಹಕ್ಕೆ ಹಾಲು ಕೊಡಿರುವ ದ್ರವವನ್ನು ಸೇರಿಸಬೇಕೊ ಅಲ್ಲಿ ಸ್ನೇಹಸಮಾಂಶ ಹಾಲು, ಬಾಕಿ ಉಳಿದ 3 ಅಂಶ ದ್ರವವನ್ನೂ ಕೂಡಿಸಿ ಕೊಳ್ಳಬೇಕು.

ದ್ರವಾದಿ ಕುಸುಮೈಃ ಕಲ್ಕೈರ್ಯತ್ರೋಕ್ತಂ ಸ್ನೇಹಸಾಧನಂ ।
ಕಲ್ಕಾಧಿಕ್ಯತ್ವಾತ್ತು ಪಾದಾರ್ಧಂ ತತ್ರ ಕಲ್ಕಂ ಪ್ರದಾಪಯೇತ್ ॥

ಸ್ನೇಹಕ್ಕೆ ಎಲ್ಲಿ ಅಡ್ಮೋಗೆಯೇ ಮುಂತಾದ್ದರ ಕುಸುಮಗಳನ್ನು ಕಲ್ಕ ಕೂಡಿಸಿ ಸ್ನೇಹಪಾಕವನ್ನು ಮಾಡಬೇಕೆಂದುಂಟೊ ಅಲ್ಲಿ ಕಲ್ಕವು ಹೆಚ್ಚಾಗುವುದರಿಂದ $\frac{1}{8}$ ಅಂಶ ಕಲ್ಕವನ್ನು ಹಾಕಬೇಕು.

अकल्कः खलु यः स्नेहः ससाध्यः केवले द्रवे ।

ಯಾವುದೊಂದು ಯೋಗದಲ್ಲಿ ದ್ರವ್ಯಗಣಗಳನ್ನು ಮಾತ್ರ ಹೇಳಿ ಕ್ವಾಥವನ್ನಾಗಲೀ, ಕಲ್ಕವನ್ನಾಗಲೀ ಹೇಳಲಿಲ್ಲವೆಂದಾದರೆ, ಹಿಂದೆ ಹೇಳಿದ ಔಷಧಿಗಣಗಳನ್ನೇ ಕಲ್ಕ ಕ್ವಾಥವಾಗಿ ಕೊಡಿಸಿಕೊಳ್ಳಬೇಕು. ಸುಶ್ರುತ ಸಂಹಿತೆಯು ಕೂಡಾ ಹೇಳುತ್ತದೆ—ಕಲ್ಕ ಕ್ವಾಥಾವನಿರ್ದೇಶೆ ಗಣಾತ್ತಸ್ಮಾತ್ ಪ್ರಯೋಜಯೇತ್ । ಎಲ್ಲಿ ಸ್ನೇಹಕ್ಕೆ ಕಲ್ಕ ಹೇಳಲಿಲ್ಲವೋ, ಅಲ್ಲಿ ಕೇವಲ ದ್ರವದಿಂದಲೇ ತಯಾರಿಸತಕ್ಕದ್ದು.

मृदौ चतुर्गुणं देयं कठिनेऽष्टगुणं जलम् ।
कठिनात्कठिनं यत्र तत्र षोडषिकं जलम् ॥ ४ ॥
मृद्वादौ द्रव्यसंघाते मानानुक्तौ चिकित्सकाः ।
मध्यस्योभयभागित्वादिच्छंत्यष्टगुणं जलम् ॥ ५ ॥

ಸಣ್ಣ ಚೂರುಗಳಾಗಿ ಮಾಡುವ ವಸ್ತುಗಳನ್ನು ಚೂರುಗಳಾಗಿಯೂ, ತ್ವಕ್, ಪತ್ರ, ಫಲ, ಮೂಲಾದಿಗಳನ್ನು ಬಿಸಿಲಲ್ಲಿ ಒಣಗಿಸುವುದನ್ನು ಒಣಗಿಸಿ, ಆ ಮೇಲೆ ಮೃದುವಾದ ದ್ರವ್ಯಗಳಿಗೆ 4 ಪಾಲು ನೀರನ್ನೂ, ಕಠಿಣವಾದ ದ್ರವ್ಯಗಳಿಗೆ 8 ಪಾಲು ನೀರನ್ನೂ, ಅತಿ ಕಠಿಣಗಳಾದ ವಸ್ತುಗಳಿಗೆ

16 ಪಾಲು ನೀರನ್ನೂ ಕೂಡಿಸಿಕೊಳ್ಳಬೇಕು. ಒಂದು ವೇಳೆ ಕೆಲವು ಯೋಗಗಳಲ್ಲಿ ಮೃದು, ಕಠಿನ, ಅತಿ ಕಠಿನಗಳಾದ ವಸ್ತುಗಳಿಗೆ ನೀರಿನ ಅಳತೆಯನ್ನು ಹೇಳದಿದ್ದಲ್ಲಿ ಮೃದು–ಅತಿಕಠಿನಗಳೆರಡರಲ್ಲಿಯೂ ಅನ್ವಯಿಸುವ, ಮಧ್ಯಮ ತರಗತಿಯ, 8 ಪಾಲು ನೀರನ್ನು ಕೂಡಿಸಿಕೊಳ್ಳಬೇಕು.

क्वाथ्यादष्टगुणं वारि, पादस्थं स्याच्चतुर्गुणम् ।
स्नेहात् स्नेहसमं क्षीरं, कल्कस्तु स्नेहपादिकः ॥ ६ ॥
चतुर्गुणं त्वष्टगुणं द्रवद्वैगुण्यतो भवेत् ।

ಕಷಾಯಗಳ 8 ಪಾಲು ನೀರನ್ನು ಕಷಾಯಪಾಕಕ್ಕೂ, ಸ್ನೇಹದ 4 ಪಾಲನ್ನು $\frac{1}{4}$ ಪಾಲು ಉಳಿದ ಕಷಾಯವನ್ನೂ ಸ್ನೇಹ ಪಾಕಕ್ಕೂ, ಸ್ನೇಹ ಸಮ ಹಾಲನ್ನೂ, ಸ್ನೇಹದ $\frac{1}{4}$ ಪಾಲು ಕಲ್ಕದ್ರವ್ಯವನ್ನೂ ಕೂಡಿಸಿಕೊಳ್ಳಬೇಕು.

ಪ್ರತಿ ಸಂದರ್ಭಗಳಲ್ಲಿಯೂ ತುಲಾ (100 ಪಲ)ಕ್ಕೆ 1 ದ್ರೋಣ ಜಲವನ್ನು ಕೂಡಿಸಿಕೊಳ್ಳಬೇಕು. ಕೆಲವೆಡೆ ಸ್ನೇಹದ ಪ್ರಮಾಣವು ಹೇಳದಿದ್ದಲ್ಲಿ ಪ್ರಸ್ಥ ಪ್ರಮಾಣ ಸ್ವೀಕರಿಸತಕ್ಕದ್ದು. ಅನಿರ್ದಿಷ್ಟಪ್ರಮಾಣಾನಾಂ ಸ್ನೇಹಾನಾಂ ಪ್ರಸ್ಥ ಇಷ್ಯತೇ। ಎಂದು, ಕಷಾಯವು ಅಧಿಕವಾಗಿ ಕುದಿಸಿ ಹೋದರೆ:–

क्वाथेऽतोयनात् प्रायः प्रमादात् परिशोषिते ।
आक्षिप्य पूर्वतोयार्धं त्रिभागं विपचेत् ततः ॥ ७ ॥
महावीर्यमिदं विद्यात् पश्चात् शुष्कं विषोपमम् ।

ಕಷಾಯದ್ರವಕ್ಕೆ ಯುಕ್ತಪ್ರಮಾಣ ನೀರು ಕೂಡಿಸಿ, ಪ್ರಮಾದವಶದಿಂದ ನೀರು ಸಂಪೂರ್ಣ ಬತ್ತಿಹೋದರೆ, ಪುನಃ ಅದೇ ಮದ್ದುಗಳಿಗೆ ಮುಂಚೆ ಸೇರಿಸಿದ ನೀರಿನ ಅರ್ಧಾಂಶ ನೀರು ಕೂಡಿಸಿ, $\frac{1}{3}$ ಅಂಶದಲ್ಲಿ ನಿಲ್ಲಿಸಿ ಯಥಾವಿಧಿ ಸೇವಿಸಬಹುದು. ಅನಂತರವೂ ಮುಂಚಿನಂತೆ ಶುಷ್ಕವಾದರೆ ವಿಷತುಲ್ಯವು.

रात्रौ भुक्त्वा पिबेत्क्वाथमभुक्त्वा च दिवा पिबेत् ।
भोजनादौ तदन्त्ये च क्वाथकालं प्रशस्यते ॥ ८ ॥

### ಕಷಾಯ ಸೇವನಾಕಾಲ

ರಾತ್ರಿಕಾಲದಲ್ಲಿ ಭೋಜನ ತೀರಿಸಿದ ಮೇಲೆಯೂ, ಹಗಲಿನಲ್ಲಿ ಪ್ರಾತಃಕಾಲದ ಭೋಜನದ ಮುಂಚಿತವಾಗಿಯೂ, ಸೇವಿಸಬೇಕು. ಇದು ಪ್ರಶಸ್ತ ಕಾಲವು.

कषायेषु यवागूषु पानीयेषु यथाक्रमम् ।
पलं तदर्धं तस्यार्धं द्रव्यमाहुर्मनीषिणः ॥ ९ ॥
प्रस्थार्धं द्विगुणं तस्मात् द्विगुणं च जलं स्मृतम् ।
अष्टभागं चतुर्भागमर्धभागं च शेषयेत् ॥ १० ॥

ಸೇವಿಸುವ ಕಷಾಯದ್ರವ್ಯಗಳಿಗೆ ಯಾವಾಗಲೂ ಒಂದು ಪಲ ಮದ್ದನ್ನು ಜಜ್ಜಿ, ಒಂದು ಪ್ರಸ್ಥ ನೀರು ಸೇರಿಸಿ, ಕುದಿಸಿ $\frac{1}{8}$ ಅಂಶದಲ್ಲಿ ನಿಲ್ಲಿಸಬೇಕು. (ಸರ್ವತ್ರ ಕ್ವಾಥಕ್ಕೆ ಮದ್ದಿಗಿಂತ 8 ಪಾಲು ನೀರು ಕೂಡಿಸಿ ಕುದಿಸತಕ್ಕದ್ದು.) ಮದ್ದಿನ ಗಂಜಿಗೆ $\frac{1}{2}$ ಪಲ ಮದ್ದುಗಳನ್ನು ಜಜ್ಜಿ, $\frac{1}{2}$ ಪ್ರಸ್ಥ ಜಲವನ್ನು ಸಹ ಸೇರಿಸಿ 4ರಲ್ಲಿ ಒಂದಂಶ ಬತ್ತಿಸಿ ತಯಾರಿಸಬೇಕು. ರೋಗಿಯು ಬಾಯಾರಿಕೆಗೆ ಕುಡಿಯುವ ಕ್ವಾಥಕ್ಕೆ $\frac{1}{4}$ ಪಾಲು ಮದ್ದು ಸೇರಿಸಿ, ಜಜ್ಜಿ, ಮದ್ದಿನ ಎರಡು ಪಾಲು ನೀರು ಸೇರಿಸಿ, ಕುದಿಸಿ ಸೇವಿಸಬೇಕು.

क्षीरे द्विरात्रं स्वरसे त्रिरात्रं स्नेहे कषायेषु च पञ्चरात्रम् ।
गुडेन युक्तेषु तथाखिलेषु विंशद्दिनं पाकविधिः क्रमात् स्यात् ॥ ११ ॥

ಘೃತ ತೈಲಾದಿಗಳಿಗೆ ಹಾಲು ಕೂಡಿಸಿದ ಮೇಲೆ 2 ರಾತ್ರಿಯ ವರೆಗೂ, ಸ್ವರಸ ಸೇರಿಸಿ ಕೂಡಿಸಿದ ಮೇಲೆ 3 ರಾತ್ರಿಗಳ ವರೆಗೂ, ಕಷಾಯಗಳು 5 ರಾತ್ರಿಗಳ ವರೆಗೂ, ಬೆಲ್ಲ ಸೇರಿಸಿದ ಕಷಾಯಗಳು ಕುದಿಸುತ್ತಾ 20 ದಿವಸಗಳ ಪರ್ಯಂತ ಇಟ್ಟು ಕೂಡಲೇ ಪಾಕದಲ್ಲಿಳಿಸುವುದು.

पत्रकंदलताचर्ममूलं वीर्यं विमुञ्चति ।
एकद्वित्रिचतुःपञ्चादिनात् पाकक्रमेण तु ॥ १२ ॥
घृततैलगुडादींश्च नैकाहादवतारयेत् ।
व्युषितास्तु प्रकुर्वंति विशेषेण गुणान् यतः ॥ १३ ॥

ಘೃತ, ತೈಲ, ಲೇಹಾದಿಗಳ ಕೆಲಸಗಳನ್ನು ಒಂದೇ ದಿನದಲ್ಲಿ ಮುಗಿಸಿ ಪಾಕಮಾಡಿ, ಇಳಿಸಕೂಡದು. ಏಕೆಂದರೆ, ಹೆಚ್ಚುದಿನಗಳ ಪಾಕ ವಾಗುತ್ತಾ ಇದ್ದರೆ ಅದರ ಶಕ್ತಿಯು ಅತ್ಯಧಿಕವಾಗುವುದು.

घृतस्य फेनोपरमस्तैलस्य च तदुद्भवः ।
लेहस्य तंतुमत्ताप्सु मज्जनं रणनं न च ॥ १४ ॥

ಸೇವನೆಗೋಸ್ಕರ ತಯಾರಿಸಿದ ಘೃತದ ಪಾಕವು ಫೇನ(ನೊರೆ)ವು ನಿಂತಕೂಡಲೇ, ತೈಲದ ಪಾಕವು ಫೇನವುಂಟಾಗುವ ಸಮಯದಲ್ಲಿ, ಲೇಹ್ಯದ ಪಾಕವು ಪಾಕವಾಗುವ ಸಮಯದಲ್ಲಿ ಸ್ವಲ್ಪ ತೆಗೆದು ಬೆರಳು ಗಳಿಗೆ ತಾಗಿಸಿ, ಮತ್ತೊಂದು ಬೆರಳಿಂದ ಮೇಲಕ್ಕೆತ್ತುವಾಗ, ವಿಶೀರ್ಣ ನಾಗದೆ ನೂಲಿನಂತೆ ಉದ್ದಕ್ಕೆ ತುಂಡಾಗದೆ ಬಂದರೆ, ಮತ್ತು ಸ್ವಲ್ಪ ತೆಗೆದು ನೀರಿನಲ್ಲಿ ಹಾಕುವಾಗ ಹಾಗೆಯೇ ತಲದಲ್ಲಿ ನಿಂತದ್ದಾದರೆ, ಒಳ್ಳೆಯ ಪಾಕವೆಂದರಿಯಬೇಕು.

ಅದಲ್ಲದೆ **ಸುಶ್ರುತ ಸಂಹಿತೆಯು** ಮೃದುಃ, ಮಧ್ಯಃ, ಖರಃ ಎಂದು ಮೂರು ಬಗೆಯಾಗಿ ಹೇಳುತ್ತದೆ. ಅವುಗಳ ಪೈಕಿ ಪಾಕದಲ್ಲಿ . ಸೇರಿಸಿದ ಸ್ನೇಹವು ಬೇರೆಯಾಗಿ ಔಷಧಿಯು ಕೂಡಾ ಪೃಥಕ್ಕಾಗಿ ಕಂಡಾಗ ಮಾತ್ರ ಮೃದುಪಾಕವೆಂದೂ, ಜೇನುಮಯಣದಂತೆ, ಕಲ್ಕವು ಬೆರಳುಗಳಿಗೆ ತಾಗದೆ ಸ್ಪಷ್ಟವಾಗಿರುವ ಕಾಲವು ಮಧ್ಯಮಪಾಕವೆಂದೂ, ಕಲ್ಕವು ಕೃಷ್ಣವರ್ಣವಾಗಿ ಬೆರಳುಗಳಿಗೆ ಸ್ವಲ್ಪ ದೊರಗೂರುವ ಕಾಲವು ಖರಪಾಕ ವೆಂದೂ ತಿಳಿಯುವುದು. ಅದರಿಂದಲೂ ಊರ್ಧ್ವಪಾಕಕ್ಕೆ ಬಂದರೆ ಅದು ದಗ್ಧಪಾಕವೆಂದೆನಿಸುತ್ತದೆ. ಪಾನಾಭ್ಯವಹಾರಾದಿ ಕಾರ್ಯಗಳಲ್ಲಿ

ಮೃದುಪಾಕವೂ, ನಸ್ಯಾಭ್ಯಂಜನಾದಿಗಳಲ್ಲಿ ಮಧ್ಯಮಪಾಕವೂ, ಬಸ್ತಿ ಕರ್ಣಪೂರಣಾದಿಗಳಲ್ಲಿ ಖರಪಾಕವೂ ಉಪಯೋಗಿಸಲ್ಪಡುವುದು.

ಯಥಾಃ– ಶಬ್ದಸ್ಯೋಪರಮೋ ಪ್ರಾಪ್ತೇ ಫೇನಸ್ಯೋಪರಮೇ ತಥಾ ।
ಗಂಧವರ್ಣರಸಾದೀನಾಂ ಸಂಪತ್ತೌ ಸಿದ್ಧಿಮಾದಿಶೇತ್ ॥
ಘೃತಸ್ಯೈವಂ ವಿಪಕ್ವಸ್ಯ ಜಾನೀಯಾತ್ ಕುಶಲೊ ಭಿಷಕ್ ।
ಫೇನೋಽತಿಮಾತ್ರಂ ತೈಲಸ್ಯ ಶೇಷಂ ಘೃತವದಾದಿಶೇತ್ ॥*॥

## ॥ अथ चूर्णपरिभाषा ॥

## ಅಥ ಚೂರ್ಣ ಪರಿಭಾಷಾ

अत्यंतशुष्कं यद्द्रव्यं सुपिष्टं वस्त्रगालितम् ।
तत् स्याच्चूर्णं रजः क्षोदस्तन्मात्रा कर्षसंमिता ॥ १ ॥
चूर्णे गुडः समो देयः शर्करा द्विगुणा भवेत् ।
चूर्णेषु भर्जितं हिंगु देयं नोत्क्लेदकृद्भवेत् ॥ २ ॥
लिहेच्चूर्णं द्रवैः सर्वैर्घृताद्यैर्द्विगुणोन्मितैः ।
पिबेच्चतुर्गुणैरेव चूर्णमालोडितं द्रवैः ॥ ३ ॥

ಯೋಗೋಕ್ತಪ್ರಮಾಣದಲ್ಲಿ ಸರ್ವ ಬಗೆಯ ಮದ್ದುಗಳನ್ನು ಕೂಡಿಸಿ, ಬಿಸಿಲಿನಲ್ಲಿ ಒಣಗಿಸಿ, ಪುಡಿಮಾಡಿ ವಸ್ತ್ರದಲ್ಲಿ ಗಾಳಿಸಿದ್ದನ್ನು, ಚೂರ್ಣ, ರಜಃ, ಕ್ಷೋಧಃ ಎಂದು ಹೇಳುತ್ತಾರೆ. ಚೂರ್ಣ ಸಮಾನ ಬೆಲ್ಲ, ಸಕ್ಕರೆ ಯಾದರೆ ದ್ವಿಗುಣ ಹಾಕಬೇಕು. ಹಿಂಗನ್ನು ತುಪ್ಪದಲ್ಲಿ ಭರ್ಜಿಸಿ, ಚೂರ್ಣ ದೊಂದಿಗೆ ಕೂಡಿಸಲು, ಉತ್ಕ್ಲೇದಾದಿ ಉಪದ್ರವಗಳುಂಟಾಗುವುದಿಲ್ಲ. ಚೂರ್ಣವನ್ನು ಘೃತಾದಿ 2 ಪಾಲಷ್ಟು ದ್ರವಪದಾರ್ಥಗಳಿಂದ ಮಿಶ್ರಿಸಿ ಉಪಯೋಗಿಸಬೇಕು. ಅನೇಕ ಯೋಗಗಳಲ್ಲಿ ಜಂಬೀರ, ಹಸಿ ಶುಂಠಿರಸಗಳಿಂದ ಭಾವನೆ ಮಾಡಬೇಕೆಂದು ಹೇಳಿದ್ದಲ್ಲಿ "ಸ್ವರಸ"ವನ್ನೇ ಉಪಯೋಗಿಸಬೇಕು. ಸ್ವರಸಾಭಾವದಲ್ಲಿ "ಭಾವ್ಯದ್ರವ್ಯಸಮಂ ಕ್ವಾಥ್ಯಂ ಕ್ವಾಥ್ಯಾದಷ್ಟಗುಣಂಜಲಂ। ಅಷ್ಟಾಂಶ ಶೇಷಿತಃ ಕ್ವಾಥೊ ಭಾವ್ಯಾನಾಂ ತೇನ ಭಾವನಂ"॥ ಕ್ವಾಥವನ್ನು ತಯಾರಿಸಿ ಅದರಿಂದ ಭಾವಿಸಬೇಕು. ಭಾವನಾವಿಧಿ—

"ದ್ರವೇಣ ಯಾವತಾ ಸಮ್ಯಕ್ ಚೂರ್ಣಂ ಸರ್ವಂ ಪ್ಲುತಂ ಭವೇತ್ ।
ಭಾವನಾಯಾಃ ಪ್ರಮಾಣಂ ತು ಚೂರ್ಣೇ ಪ್ರೋಕ್ತಂ ಭಿಷಗ್ವರೈಃ ॥
ದಿವಾ ದಿವಾತಪೆ ಶುಷ್ಕಂ ರಾತ್ರೌ ರಾತ್ರೌ ನಿವಾಸಯೇತ್ ।
ಶುಷ್ಕಂ ಚೂರ್ಣೀಕೃತಂ ದ್ರವ್ಯಂ ಯಥೋಕ್ತಂ ಭಾವನಾವಿಧಿಃ" ॥

ಭಾವನೆಗೆ ದಿನಸಂಖ್ಯೆಯನ್ನು ಸೂಚಿಸದಿದ್ದಲ್ಲಿ 7 ದಿನಗಳ ವರೆಗೆ ಭಾವನೆ ಮಾಡಬೇಕು.

---

## ॥ गुटिका परिभाषा ॥
## ಅಥ ಗುಟಿಕಾ ಪರಿಭಾಷಾ

---

वटकाश्चाथ कथ्यंते तन्नाम गुटिका वटी ।
मोदको वटकः पिंडी गुंडी वर्तिस्तथोच्यते ॥ १ ॥
लेहवत्साध्यते वह्नौ गुडो वा शर्कराऽथवा ।
गुग्गुलुर्वा, क्षिपेत्तत्र चूर्णितं तन्निर्मिता वटी ॥ २ ॥
कुर्यादवह्निसिद्धेन क्वचिद्गुग्गुलुना वटीं ।
द्रवेण मधुना वाऽपि गुटिकां कारयेद्बुधः ॥ ३ ॥

ವಟಿಕಾ. ಗುಟಿಕಾ, ವಟೀ, ಮೋದಕಃ, ಪಿಂಡೀ, ಗುಂಡೀ, ವರ್ತಿಃ ಎಂದು ಪರ್ಯಾಯ ಹೆಸರುಗಳು. ಲೇಹದಂತೆ, ಗುಡ, ಸಕ್ಕರೆ, ಗುಗ್ಗುಲುಗಳನ್ನು ಹಾಕಿ ಪಾಕವಾಗುವ ಸಂದರ್ಭದಲ್ಲಿ ಚೂರ್ಣವನ್ನು ಕೂಡಿಸಿ, ಇಳಿಸಿ, ಗುಟಿಕೆಗಳಾಗಿ ಮಾಡಬೇಕು. "ಗುಡವದ್ಗುಗ್ಗುಲೋಃ ಪಾಕಃ ಸಂಬಂಧಸ್ತು ವಿಶೇಷತಃ । ಮಂಡೂರಾಣಾಂ ಚ ಸರ್ವೇಷಾಂ ಪಾಕೋಽಯಂ ಪರಿಕೀರ್ತಿತಃ ॥" ಮಾತ್ರೆಗಳಿಗೆ ಸೇರಿಸತಕ್ಕ ಗುಡಶರ್ಕರಾದಿಗಳ ಪ್ರಮಾಣ.

"ಸಿತಾ ಚತುರ್ಗುಣಾ ದೇಯಾ ವಟೀಷು ದ್ವಿಗುಣೋ ಗುಡಃ ।
ಚತುರ್ಗುಣಂ ಚೂರ್ಣಾಚ್ಚೂರ್ಣಸಮಃ ಕಾರ್ಯೋ ಗುಗ್ಗುಲುರ್ಮಧು [ತತ್ಸಮಂ ॥
ದ್ರವಂ ಚ ದ್ವಿಗುಣಂ ಮೋದಕೇಷು ಭಿಷಗ್ವರೈಃ ॥"

ಇದು ವ್ಯಕ್ತಾಭಿಪ್ರಾಯವು ಅನುಕ್ತ ಪ್ರಮಾಣಗಳಲ್ಲಿ ಯೋಚಿಸಿಕೊಳ್ಳುವುದು.

---

# ॥ अवलेह परिभाषा ॥

## ಅಥ ಅವಲೇಹ ಪರಿಭಾಷಾ

---

क्वाथादीनां पुनः पाकाद्घनत्वं सा रसक्रिया ।
सोऽवलेहश्च तन्मात्रा ह्युक्ता स्यात्पलोन्मिता ॥ १ ॥

सिता चतुर्गुणा देया चूर्णाच्च द्विगुणो गुडः ।
द्रवं चतुर्गुणं दद्यादिति सर्वत्र निश्चयः ॥ २ ॥

ಸರಿಯಾದ ಪ್ರಮಾಣದಲ್ಲಿ 'ಮರದರಸಿನ' ಮೊದಲಾದ ಔಷಧಿಗಳನ್ನು ಕೂಡಿಸಿ, ಕ್ವಾಥ ಮಾಡಿ ವಸ್ತ್ರದಿಂದ ಗಾಳಿಸಿ ಪುನಃ ದಪ್ಪವಾಗುವವರೆಗೆ ಚೆನ್ನಾಗಿ ಕುದಿಸಿ, ಮಾಡಿದ ಪಾಕಕ್ಕೆ "ರಸಕ್ರಿಯಾ" ಎಂದು ಪ್ರಸಿದ್ಧ ನಾಮವು. ಹಾಗೆಯೇ ("ಗೃಹೀತ್ವಾ ಕ್ವಾಥಕಲ್ಕೇನ ಕ್ವಾಥಂ ಪೂತಂ ಪುನಃ ಪುನಃ । ಕ್ವಾಥಯೇತ್ ಫಾಣಿತಾಕಾರಂ ಏಷಾ ಪ್ರೋಕ್ತಾ ರಸಕ್ರಿಯಾ" ॥) ಒಂದು ವಿಧ, ಅವಲೇಹಕ್ಕಾದರೆ ಯಥೋಕ್ತ ಪ್ರಮಾಣ ಔಷಧಿಗಳನ್ನು ಕಷಾಯ ಮಾಡಿ, ಗಾಳಿಸಿದ ಕ್ವಾಥದಲ್ಲಿ ಶರ್ಕರಾದಿಗಳನ್ನು ಕೂಡಿಸಿ ಪುನಃ ಪಾಕಮಾಡಿ ಯೋಗ್ಯ ಪಾಕಕಾಲದಲ್ಲಿ ಚೂರ್ಣಾದಿಗಳನ್ನು ಹಾಕಿ ಮಾಡುವುದು 2ನೇ ವಿಧ, ಕೇವಲ ಜಲದಲ್ಲಿ ಸಕ್ಕರೆ ಕೂಡಿಸಿ, ಚೂರ್ಣವನ್ನು ಹಾಕಿ ಮಾಡುವ ವಿಧಿಯು 3ನೇಯದು, ಕೇವಲ ಚೂರ್ಣಕ್ಕೆ ಜೇನುತುಪ್ಪ, ತುಪ್ಪ, ಕಲ್ಲುಸಕ್ಕರೆಗಳನ್ನು ಕೂಡಿಸಿ ಮಾಡುವ ವಿಧಿಯು 4ನೇಯದು. "ಪ್ರಾಯೋ ನ ಪಾಕಶ್ಚೂರ್ಣಾನಾಂ ಭೂರಿ ಚೂರ್ಣಸ್ಯ ತೇನಪಿ । ಆಸನ್ನ ಪಾಕೆ ಪ್ರಕ್ಷೇಪಃ ಸ್ವಲ್ಪಸ್ಯ ಪಾಕಮಾಗತೇ ॥ ಪಾಕ ಲಕ್ಷಣಂ ತು = "ಸುಪಕ್ವೇ ತಂತುಮತ್ವಂ ಸ್ಯಾದವಲೇಹೋಽಪ್ಸು ಮಜ್ಜನಂ । ಸ್ಥಿರತ್ವಂ ಪೀಡಿತೇ ಮುದ್ರಾ ಗಂಧವರ್ಣ ರಸೋದ್ಭವಃ । ರಸೋ ಗಂಧಃ ಶುಭಃ ಪಾಕೇ ವರ್ತಿಃ ಸ್ಯಾತ್ ಗಾಢ ಮರ್ದನಾತ್ "॥-*-॥

---

## ॥ अथ आसवारिष्ट परिभाषा ॥
## ಅಥ ಆಸವಾರಿಷ್ಟ ಪರಿಭಾಷಾ

द्रवेषु चिरकालस्थं द्रव्यं यत्संहितं भवेत् ।
आसवारिष्टभेदैस्तत्प्रोच्यते भेषजोचितम् ॥ १ ॥

यदपक्वौषधांबुभ्यं सिद्धं मद्यं स आसवः ।
अरिष्टः क्वाथसिद्धः स्याचन्मानं द्विपलोन्मितम् ॥ २ ॥

अनुक्तमानारिष्टेषु द्रवद्रोणे गुडात्तुलाम् ।
क्षौद्रं दद्याद्गुडादर्धं प्रक्षेपं दशमांशिकम् ॥ ३ ॥

ದ್ರಾಕ್ಷಾದಿ ಕ್ವಾಥ್ಯದ್ರವ್ಯಗಳಿಗೆ ಯಥೋಕ್ತ ಪ್ರಮಾಣದಂತೆ ಜಲವನ್ನು ಕೂಡಿಸಿ ಕಷಾಯ ಮಾಡಿ ವಸ್ತ್ರದಿಂದ ಗಾಳಿಸಿ, ಆ ಕ್ವಾಥಕ್ಕೆ ಯೋಗೋಕ್ತ ಪ್ರಕಾರ ಬೆಲ್ಲವನ್ನೂ, ಅದರ $\frac{1}{10}$ಅಂಶ ಧಾತಕೀ ಕುಸುಮ ಮೊದಲಾದ ದ್ರವ್ಯಗಳನ್ನು ವಸ್ತ್ರಗಾಳಿತ ಚೂರ್ಣಿಸಿ, ಘೃತ ಲೇಪಿಸಿದ ಮಣ್ಣಿನ ಶುದ್ಧಪಾತ್ರದಲ್ಲಿ ಅರ್ಧಾಂಶ ತುಂಬಿಸಿ, ಆ ಮೇಲೆ ಗಾಳಿ, ಕ್ರಿಮಿ ಕೀಟಾದಿಗಳು ಒಳಗೆ ಬೀಳದಂತೆ ಭದ್ರವಾಗಿಟ್ಟು, ಒಂದು ತಿಂಗಳ ವರೆಗೆ ಭೂಮಿಯಲ್ಲಿ ಸ್ಥಾಪಿಸಿಟ್ಟು, ಆ ಮೇಲೆ ಈ ಅರಿಷ್ಟವನ್ನು ವಸ್ತ್ರದಿಂದ ಗಾಳಿಸಿ, ಪ್ರಮಾಣಾನುಸಾರ ಉಪಯೋಗಿಸುತ್ತಿರುವುದು. ಆಸವ ಸಿದ್ಧಮಾಡುವ ವಿಧಾನವು, "ಕೇವಲ ಜಲಾದಿಗಳಲ್ಲಿ ಬೆಲ್ಲ, ಚೂರ್ಣಾದಿ ಯುಕ್ತಪ್ರಮಾಣ ದಂತೆ ಕೂಡಿಸಿ, ತಯಾರಿಸುವ ವಿಧಿಗೆ ಆಸವ" ಎಂದು ಹೆಸರು. ಇದರಲ್ಲಿ ಕಷಾಯ ಮಾಡುವ ಅಗತ್ಯವಿಲ್ಲದೇ, ಬಾಕಿ ಎಲ್ಲವೂ, ಅರಿಷ್ಟಮಾಡುವ ವಿಧಾನದಂತೆಯೇ ಆಗಿರುವುದು.

ಇತಿ ಆಯುರ್ವೇದ ವೈದ್ಯಶಾಸ್ತ್ರಿ ಎಂ. ಎಂ. ಆಳ್ವರಿಂದ ರಚಿತವಾದ 'ಲಘುದೀಪಿಕಾ', ಎಂಬ ಕರ್ಣಾಟಕ ವ್ಯಾಖ್ಯೆಯೊಳ್ ಆಸವಾರಿಷ್ಟ ಪರಿಭಾಷಾ ಪ್ರಕರಣವು ಸಮಾಪ್ತವಾದುದು.

## ಕೆಲವು ಬಗೆಯ ಸಂಕೇತಗಳು.

पंचमूलं सहद्भिश्च रसोनं च शतावरी ।
गुडूचीसार्द्रकं चैवं त्वक्छेद्याः परिकीर्तिताः ॥ १ ॥

ಬಿಲ್ವಪತ್ರೆ ಬೇರು, ನವ್ರೋಳು ಬೇರು, ಆನೆಮುಂಗು ಬೇರು, ಕುಂಬುಳು ಬೇರು, ಪಾಟಲಿ ಬೇರು ಇವುಗಳ ಬೇರಿನ ಮೇಲಿನ ಸಿಪ್ಪೆ ತೆಗೆದು ಒಳಗಿನ ತಿರುಳನ್ನು ಸೇರಿಸಬೇಕು. ಒಣಶುಂಠಿ, ಬೆಳ್ಳುಳ್ಳಿ, ಶತಾವರಿ ಬೇರು, ಅಮೃತಬಳ್ಳಿ, ಹಸಿಶುಂಠಿ ಈ ಎಲ್ಲಾ ಮದ್ದುಗಳ ಮೇಲಿನ ಸಿಪ್ಪೆಯನ್ನು ತೆಗೆದುಕೊಳ್ಳತಕ್ಕದ್ದು.

पाठा च चविकानंता लोहितापुष्पिकापि च ।
पिप्पलीमूलमित्येषां मूलमेव प्रयोजयेत् ॥ २ ॥

ಪಾಡಾವಳಿ ಬೇರು, ಕಾಡುಕರಿಮೆಣಸಿನ ಬೇರು, ಬಳ್ಳಿಆಕಿರೆ ಬೇರು, ಹಿಪ್ಪಲೀಮೂಲ, ಇವುಗಳ ಬೇರುಗಳನ್ನು ಮಾತ್ರ ಉಪಯೋಗಿಸಬೇಕು.

जंबूकरंजयुग्म वत्सकसैललोध्र ।
भूर्जारिमेदधवधातकिसोच निंबात् ॥
क्षीरिद्रुमारकुलवल्लुककदंबपार्थात् ।
ग्राह्यास्त्वचोवरळपीलु पलाशा च ॥ ३ ॥

ನೇರಳೆ ಮರ, ಕೊಂಗುರ್ಗು ಮರ, ರಾಹುಬೀಜದ ಮರ, ಕೊಡಂಚಿ ಮರ, ಪ್ಪಾಚೋಟ ಮರ, ಭೂರ್ಜವೃಕ್ಷ, ಅರಿಮೇದ, ಧಾತಕೀ ಮರ, ಮಾವಿನ ಮರ, ಕಹಿಬೇವಿನ ಮರ, ಅತ್ತಿಮರ, ಅಶ್ವತ್ಥ, ಗೋಳಿಮರ, ಕಿನ್ನಿಗೋಳಿಮರ, ಪೆರುಮರ, ಲವಂಗದ ಮರ, ಕಡಂಬು, ನೀರ್ಮಾದಳ, ಕಂಪಿಲ್ಲಕ, ಪಲಾಶ ಈ ಎಲ್ಲಾ ಮರಗಳ ಮೇಲಿನ ತೊಗಲನ್ನು (ಕೆತ್ತೆ) ಕೂಡಿಸಿಕೊಳ್ಳಬೇಕು.

अळर्कामसृताब्राह्मी कूष्मांडालाबुमेव च ।
कारवेल्ली पटोली च तन्मूलं न प्रयोजयेत् ॥ ४ ॥

ಬಿಳಿ ಎಕ್ಕೆ, ಅಮೃತಬಳ್ಳಿ, ಬ್ರಹ್ಮಿ, ಕೂಷ್ಮಾಂಡ, ಸೋರೆಕಾಯಿ, ಕಾಡುಪಟೋಲ ಇವುಗಳ ಬಳ್ಳಿಗಳನ್ನು ಸೇರಿಸಿಕೊಳ್ಳಬೇಕು. ಇವುಗಳ ಬೇರುಗಳನ್ನು ಎಂದಿಗೂ ಯೋಚಿಸಕೂಡದು.

चंदनं खदिरोदारुर्मधूक शिंशपागतः ।
शिरीषासनमेतेषां सारं गृह्णाति शास्त्रवित् ॥ ५ ॥

ಚಂದನ, ಕಾಚು, ದೇವದಾರು, ಇಪ್ಪೆಮರ, ಶಿಂಶುಪ, ಬಾಗೆಮರ, ಬೇಂಗ, ಇವುಗಳ ಒಳಗಿನ ಸಾರವತ್ತಾದ ತಿರುಳುಗಳನ್ನು ಮಾತ್ರ ಉಪಯೋಗಿಸಿಕೊಳ್ಳಬೇಕು.

पुष्पसारस्तु चांपेयकेतक्याशोकपाटला: ।
पुन्नागभूर्जबकुलमाधवीजातिमल्लिका: ॥ ६ ॥
शेफालीयूथिका शिग्रुश्शतपत्रानृपद्रुमा: ।
वरालं धातकी पुष्पनंद्यावर्तोत्पलादय: ॥ ७ ॥

ಪುಷ್ಪಸಾರ, ಸಂಪಿಗೆ, ಕೇತಕೀ, ಅಶೋಕ, ಪಾಟಲೀ, ಪುನ್ನಾಗ, ಭೂರ್ಜ, ರೆಂಜೆ, ಮಲ್ಲಿಗೆ, ಜಾಜಿಮಲ್ಲಿಗೆ, ಸೇವಂತಿಕೆ, ಯೂಥಿಕೆ ಪುಷ್ಪ, ನುಗ್ಗೆ, ತಾವರೆ, ಕೊಂದೆ, ಸಣ್ಣ ಏಲಕ್ಕಿ, ಧಾತಕೀಕುಸುಮ, ನಂದ್ಯಾವರ್ತಪುಷ್ಪ, ನೆಲಸಂಪಿಗೆ, ಇವೇ ಮೊದಲಾದುವುಗಳ ಪುಷ್ಪಗಳನ್ನು ಸೇರಿಸಿಕೊಳ್ಳುವುದು.

बिल्वकाश्मर्यतर्कारीपाटलाटुंटुकैर्महत् ।
जयेत्कषायतिक्तोष्णं पञ्चमूलं कफानिलौ ॥ ८ ॥

**ದೊಡ್ಡ ಪಂಚಮೂಲಗಳು:**—"ಬಿಲ್ವಪತ್ರೆ ಬೇರು, ಕುಮುದ ಬೇರು, ನರ್ವೋಳು ಬೇರು, ಅನೆಮುಂಗು ಬೇರು, ಪಾದಿರಿ ಬೇರು, ಈ ಬೇರುಗಳ ಮೇಲಿನ ಸಿಪ್ಪೆ ತೆಗೆದು ಒಳಗಿನ ತಿರುಳನ್ನು ಮಾತ್ರ ಉಪಯೋಗಿಸಬೇಕು. ಕಷಾಯ ಮತ್ತು ಕಹಿ ರಸಗಳಿಂದ ಕೂಡಿ, ಉಷ್ಣವೀರ್ಯವುಳ್ಳದ್ದಾಗಿ ವಾತಕಫಗಳನ್ನು ಹೋಗಲಾಡಿಸುವುದು.

**ह्रस्वं बृहत्यंशुमतीद्वयगोक्षुरकैः स्मृतम् ।**
**स्वादुपाकरसं नातिशीतोष्णं सर्वदोषजित् ॥ ९ ॥**

**ಹ್ರಸ್ವ ಪಂಚಮೂಲಗಳು:**–"ಓರೆಲೆ ಬೇರು, ಮೂರೆಲೆ ಬೇರು, ಚಿತ್ರುಟಿ ಬೇರು, ಕಲ್ಯಟಿ ಬೇರು", ಈ ಹ್ರಸ್ವ ಪಂಚಮೂಲವು, ಪಾಕದಲ್ಲಿ ಮಧುರ ರಸವುಳ್ಳದ್ದಾಗಿ, ಅತಿಶೀತೋಷ್ಣವಲ್ಲದೆ, ಸರ್ವದೋಷಗಳನ್ನು ನೀಗಾಡಿಸುವುದು. ಹೃಸ್ವ ಪಂಚಮೂಲವೂ, ಬಿಲ್ವಪತ್ರೆ ಬೇರು, ನವೋ‍ರ್ಳು ಬೇರು, ಆನೆಮುಂಗು ಬೇರು, ಕುಮುದ ಬೇರು, ಪಾಟಲಿ ಬೇರು ಎಂಬ ಈ ಐದು ಬಗೆಯುಳ್ಳ ಮಹತ್ಪಂಚಮೂಲವೂ ಸೇರಿ ದಶಮೂಲಗಳಾಗುವುವು.

**ह्रस्वं महत्पञ्चमूलं दशमूलं समीरजित् ।**
**कासहिक्कावमिश्वासशोषपार्श्वरुजापहम् ॥ १० ॥**

**ಬೃಹತ್ಪಂಚಮೂಲವು:**–– ವಾತವನ್ನು, ಕಾಸ, ಹಿಕ್ಕಾ, ಶೋಷ, ಪಾರ್ಶ್ವನೋವುಗಳನ್ನು ನಿವಾರಿಸುವುದು.

**बलापुनर्नवैरंडसूर्प्यपर्णिद्वयेन तु ।**
**मध्यमं कफवातघ्नं नातिपित्तकरं सरम्  ११ ॥**

**ಮಧ್ಯಮ ಪಂಚಮೂಲಗಳು**–"ಕಡಿರಬೇರು, ಪುನರ್ನವೆ ಬೇರು, ಸಣ್ಣಹರಳು ಬೇರು, ಕಾಡುದ್ದು ಬೇರು, ಕಾಡುಹೆಸರು ಬೇರು", ಈ ಮಧ್ಯಮ ಪಂಚಮೂಲಗಳು ಕಫ, ವಾತಗಳನ್ನು ಹೋಗಲಾಡಿಸಿ, ಅತಿಯಾಗಿ ಪಿತ್ತವನ್ನುಂಟುಮಾಡದೆ ಪಾಕದಲ್ಲಿ ಲಘುವಾಗಿರುವುವು.

**अभीरुवीराजीवंतीजीवकर्षभकैः स्मृतम् ।**
**जीवनाख्यं च चक्षुष्यं वृष्यं पित्तानिलापहम् ॥ १२ ॥**

**ಜೀವನ ಪಂಚಮೂಲ**–"ತೊಂಡೆ ಬೇರು, ಶತಾವರಿ ಬೇರು, ಬುಗುಡಿಹೂವಿನ ಗಡ್ಡೆ, ಜೀವಕ, ಋಷಭಕ", ನೇತ್ರ ರೋಗಗಳಲ್ಲಿ ಹಿತಕಾರಿಯಾಗಿಯೂ, ವೃಷ್ಯವಾಗಿಯೂ, ಪಿತ್ತವಾತಹಾರಿಯಾಗಿಯೂ, ಇರುವುದು.

तृणाख्यं पित्तजीद्दर्भकासेक्षुशरशालिभिः ।

**ತೃಣ ಪಂಚಮೂಲವು:—**"ಕಬ್ಬಿನ ಬೇರು, ದರ್ಭೆ ಬೇರು, ಆವ್ರು ಬೇರು, ಆಟ್‌ದರ್ಭೆ ಬೇರು, ನೆಲನೆಲ್ಲಿ ಬೇರು, ಇವುಗಳು ತೃಣ ಪಂಚ ಮೂಲಗಳು. ಪಿತ್ತಹಾರಿ.

पिप्पलीपिप्पलीमूलं चव्यचित्रकनागरम् ।
पञ्चकोलकमेतद्वा सैंधवेन च षट्फलम् ॥ १३ ॥

**ಪಂಚಕೋಲವು:**—ಹಿಪ್ಪಲಿ, ಹಿಪ್ಪಲಿಮೂಲ, ಕಾಡು ಕರಿಮೆಣಸಿನ ಬೇರು, ಚಿತ್ರಮೂಲ, ಒಣಶುಂಠಿ, ಇವುಗಳು ಪಂಚಕೋಲವೆನ್ನಲ್ಪಡುತ್ತವೆ. ಇದಕ್ಕೆ 'ಸೈಂಧವಲವಣ' ಮಾತ್ರ ಕೂಡಿಸಲು, 'ಷಟ್ಫಲ'ವೆಂದು ಹೆಸರಾಗುವುದು.

**ಐದು ಬಗೆಯ ಉಪ್ಪುಗಳು:**—ಸೈಂಧವಲವಣ, ಗಾಜುಲವಣ, ಬಿಡಾಲಲವಣ, ಸೌವರ್ಚಲಲವಣ, ಸಮುದ್ರಲವಣ.

**ಐದು ಸುಗಂಧ ದ್ರವ್ಯಗಳು:**—ಕಸ್ತೂರಿ, ಕೇಸರಿ, ಪಚ್ಚಕರ್ಪೂರ, ಚಂದನ, ಗೋರೋಜನ, ಈ 5 ಸೇರಿದರೆ ಪಂಚಸುಗಂಧಗಳೆಂದಾಗುವುವು.

**ಎಂಟು ಬಗೆಯ ಎಲೆಗಳು:**—ಗರುಗ, ಬಿಲ್ವಪತ್ರೆ, ಕಂಟಕಾರಿ, ಸಾಂಬ್ರಾಣಿ, ಕಾಡು ಪಟವಲ, ಮುಕ್ಕಾಪೀರ, ಆಡುಸೋಗೆ, ಪೊನ್ನಾವೀರ, ಇವು 8 ಬಗೆಯ ಎಲೆಗಳು.

**ಆರು ಬಗೆಯ ಗಡ್ಡೆಗಳು:**—ನೆಲತಾಳಿ, ಪಾಡಾವಳಿ, ಶತಾವರಿ, ಸುಗಂಧಿ, ಬುಗುಡಿ ಹೂ, ನೆಲಕುಂಬುಳು ಇವು 6 ಬಗೆಯ ಗಡ್ಡೆಗಳು.

**ದಶಪುಷ್ಪಗಳು:**—ಸಹದೇವಿ, ಮುಯಲ್‌ಚೆವಿ, ಕರಿಕೆ, ಗರುಗ, ನೆಲತಾಳಿ, ವಿಷ್ಣುಕ್ರಾಂತಿ, ಪಾಷಾಣಭೇದಿ, ತಿರುತಾಳಿ, ಇಂದ್ರವಲ್ಲೀ, ಮುಕ್ಕುಟೀ ಇವೇ ದಶಪುಷ್ಪಗಳು.

**ಭೂತಾಷ್ಟಗಂಧ:**—ಹತ್ತಿಬೀಜ, ಬೆಳ್ಳುಳ್ಳಿಸಿಪ್ಪೆ, ಗುಗ್ಗುಲು, ಪಿನಾರಿ, ಜಟಾಮಾಂಸಿ, ಬಿಳಿಕಂಕುಷ್ಟ, ಅಗಿಲುಗಂಧ, ಮುಡಿವಾಳ.

**ಗಣೇಶಾಷ್ಟಗಂಧ:**—ಅಗಿಲು, ಕಂಕುಷ್ಠ, ಗುಗ್ಗುಲು, ಜಟಾ ಮಾಂಸಿ, ಕುಂಕುಮಕೇಸರಿ, ಚಂದನ, ಲಾಮಂಚ, ಇರುವೇರಿದಂಡು.

**ಶಕ್ತ್ಯಷ್ಟಗಂಧ:**—ಅಗಿಲು, ಕಚ್ಚೂರ, ಕಂಕುಷ್ಠ, ಕುಂಕುಮ ಕೇಸರಿ, ಕಂಡಿವೆಣ್ಣೆ, ಗೋರೋಜನ, ಚಂದನ, ಜಟಾಮಾಂಸಿ.

**ದುರ್ಗಂಧಾಷ್ಟಗಂಧ:**—ಸಾಂಬ್ರಾಣಿ, ಕರ್ಪೂರ, ಗೋರೋಜನ, ಲಾಮಂಚ, ಚಂದನ, ಕಂಡಿವೆಣ್ಣೆ, ಗುಗ್ಗುಲು.

**ಭೂತಗಳ ಚಿಕಿತ್ಸೆಗಳಲ್ಲಿ ಸೇರಿಸತಕ್ಕ ಕೊಂಬುಗಳು:**- ಕಾಟ ಕೊಂಬು, ಆನೆದಂತ, ದನದ ಕೊಂಬು, ಎತ್ತಿನ ಕೊಂಬು, ಜಿಂಕೆ ಕೊಂಬು.

**ಗಡ್ಡೆಗಳ ಸತ್ವ:**- ನೆಲತಾಳಿಗಡ್ಡೆಸತ್ವ, ಪಾಡಾವಳಿಗಡ್ಡೆಸತ್ವ, ಶತಾವರಿಗಡ್ಡೆಸತ್ವ, ಸುಗಂಧ ಬೇರಿನಸತ್ವ, ಬುಗುಡಿಹೂವಿನಸತ್ವ, ಭೂಕೂಷ್ಮಾಂಡ ಸತ್ವ.

---

## ಮಾನಸಮಿತ್ರ ವಟಿ

ಕಡಿರಬೇರು, ಆನೆಕಡಿರು, ಬಿಲ್ವಪತ್ರೆ, ಮೂರೆಲೆ, ಪ್ರವಾಳ, ಶಂಖಪುಷ್ಪ, ಕೋಳಿಕಾಲುಬೇರು, ಸ್ವರ್ಣತಗಡು, ಪುಷ್ಕರಮೂಲ, ಗಂಡಾಮೃಗದ ಕೊಂಬು, ಬಜೆ, ಮಾಕಿರಕಲ್ಲು, ಶ್ರೀಗಂಧ, ರಕ್ತಚಂದನ, ಮುತ್ತಾಭಸ್ಮ, ಲೋಹಭಸ್ಮ, ಇರಿಪ್ಪೆ ಚಕ್ಕೆ, ಸಣ್ಣಹಿಪ್ಪಲಿ, ಪಚ್ಚೆ ಕರ್ಪೂರ, ಮುಕ್ಕಾಪೀರಬೇರು, ಕಾಡು ಸೌತೆಬಳ್ಳಿ (ಕಾಯಿ), ದೀವಿತೆಂಗಿನ ಕಾಯಿ, ಕರಿನೆಕ್ಕಿ, ಕಪ್ಪು ಭದ್ರಮುಷ್ಟಿ, ಕೆಂಪರತ್ತೆ, ಬೆಳ್ಳಿತಗಡು, ಕಪ್ಪು ಕಲ್ಮದ, ಮರದರಸಿನಸಿಪ್ಪೆ, ಪದ್ಮಕೇಸರ, ಋಷಭಕ, ಜೀವಕ, ಕಾಕೋಲೀ, ಕ್ಷೀರಕಾಕೋಲೀ, ಸಣ್ಣಬದನೆಬೇರು, ಬೃಹತೀ, ಶ್ರಾವಣೀ, ಮಹಾಶ್ರಾವಣೀ, ಪುತ್ತರಿಚ್ಚುಂಡ, ಕೊಂದೆ ಬೇರು, ಶಾಂತಿಕಾಯಿ ಅಣಿಲೆಕಾಯಿಸಿಪ್ಪೆ, ನೆಲ್ಲಿಕಾಯಿಸಿಪ್ಪೆ, ಅಮೃತಬಳ್ಳಿ, ನಾಮದಬೇರು, ಹಾಲುಬಳ್ಳಿ, ಬುಗುಡಿ ಹೂವಿನಗೆಡ್ಡೆ, ಸೋಮಲತೆ,

ಸಣ್ಣ ಈಂದಿನಬೇರು, ಅಶ್ವಗಂಧಿ, ಅರಸಿನ, ಲಾಮಂಚ, ದ್ರಾಕ್ಷಿ, ಜ್ಯೇಷ್ಠಮಧು, ಕಾಡು ಹುರುಳಿಬೇರು, ಗರುಗದ ಬೇರು, ನೆಲಪರಂಡೆಬೇರು, ಪಾಷಾಣಭೇದಿ, ದಾಲ್ಚೀನಿ ಕೆತ್ತೆ, ತುಳಸಿಎಲೆ, ಕಸ್ತೂರಿ, ಕುಂಕುಮಕೇಸರಿ, ಈ ಎಲ್ಲಾ ಬಗೆಯ ಮದ್ದುಗಳನ್ನು ಸಮತೂಕ ತೆಗೆದು ಚೂರ್ಣ ಮಾಡಿ, ಮುಂದೆಹೇಳುವ ಮದ್ದುಗಳಿಂದ ಚೆನ್ನಾಗಿ ಭಾವನೆಮಾಡಬೇಕು. ಬ್ರಾಹ್ಮಿಯ ಸ್ವರಸ, ಕಪ್ಪು ತಿಮರೆರಸ, ಶಂಖಪುಷ್ಪದ ಬೇರಿನ ಕಷಾಯ, ಬಜೆ, ಕದಿಕೆ ಹುಲ್ಲು, ಕಿರುತಾಳಿ, ಬಿಲ್ವಪತ್ರೆ, ಕಡಿರಬೇರು, ದನದಹಾಲು, ಜೀರಿಗೆ, ಸೋಮಲತೆ, ಮೊಲೆಹಾಲು, ಇವುಗಳಲ್ಲಿ ಚೆನ್ನಾಗಿ ಭಾವನೆ ಮಾಡಿ, ಪುತ್ತರಿಚ್ಚುಂಡ ಕಾಯಿಯ ಪ್ರಮಾಣದ ಮಾತ್ರೆಗಳಾಗಿ ಮುಂದೆ ಹೇಳುವ ರೋಗಗಳಲ್ಲಿ ಯುಕ್ತವಾದ ಅನುಪಾನದಿಂದ ಕೊಡಲು ಎಲ್ಲಾ ಮನೋದೋಷ, ಪ್ರಜ್ಞಾ, ಮೇಧಸ್ಸ್, ಪ್ರತಿಭಾ, ವಾಙ್ಮಾಧುರ್ಯ, ಕಾಮೋತ್ತೇಜಕ ಶಕ್ತಿ, ಉನ್ಮಾದ, ಅಪಸ್ಮಾರ, ಮದ, ಮೂರ್ಚ್ಛಾ, ಸನ್ಯಾಸ, ಭೂತಬಾಧೆ, ವಿಷ, ಸರ್ಪಕಡಿತ, ವಿಷೂಚಿಕಾದಿ ರೋಗಗಳು ಸಂಪೂರ್ಣ ಉಪಶಮನಹೊಂದಿ ಸುಖಶಾಂತಿ ಆಯುರಾರೋಗ್ಯಲಾಭವನ್ನೀಯುವುದರಲ್ಲಿ ಪ್ರಖ್ಯಾತಿ ಪಡೆದ ಪರಮೌಷಧವಾಗಿರುವುದು.

---

## ತಲೆಗೆ ಚಂದನಾದಿ ಎಣ್ಣೆ

**ಕಷಾಯಕ್ಕೆ:**— ಶ್ರೀಗಂಧ, ರಾಮಚ್ಚಾ, ನೆಲ್ಲಿಚಟ್ಟು, ಭದ್ರಮುಷ್ಟಿ, ಸಂಪಿಗೆ ಹೂ, ಇರುವೇರಿದಂಡು, ಇವು ಪ್ರತಿಒಂದು 1½ಸೇರು ಪ್ರಕಾರ ತೆಗೆದು ಜಜ್ಜಿ ನೀರು ಕುತ್ತಿ 18, ಬತ್ತಿಸಿ ಕುತ್ತಿ 5, ಒಳ್ಳೆ ಎಳ್ಳೆಣ್ಣೆ ಕುತ್ತಿ 1¼, ದನದ ಹಾಲು ಕುತ್ತಿ 2½.

**ಕಲ್ಕಕ್ಕೆ:**—ಏಲಕ್ಕಿ, ಲವಂಗ, ತಕ್ಕೋಲ, ಜಾಯಿಕಾಯಿ, ದೇವದಾರ, ಮಂಜಿಷ್ಟ, ನಾಗಪ್ಪು, ಪಚ್ಚಿಲೆ, ಜಟಾಮಾಂಜಿ, ರಾಮಚ್ಚಾ, ಅಗರ, ಮುಡಿವಾಳ, ಸಂಪಿಗೆ ಹೂ, ಶ್ರೀಗಂಧ, ರಕ್ತಚಂದನ ಇವು ತೊಲೆ 1ರ ಪ್ರಕಾರ ತೆಗೆದು, ದನದ ಹಾಲಿನಲ್ಲಿ ಚೆನ್ನಾಗಿ ಅರೆದು ಕೂಡಿಸಿ, 4 ದಿನ ಇಟ್ಟು ನಂತರ ಇಳಿಸುವದು.

**ಪಾತ್ರಭಾಗಕ್ಕೆ:**— ಕಸ್ತೂರಿ ದಾಮತೂಕ 1, ಕುಂಕುಮಕೇಸರ ತೊಲೆ 1, ಪಚ್ಚಕರ್ಪೂರ ತೊಲೆ ½, ಪುನುಗು ದಾಮತೂಕ 3.

---

## ॥ अथ प्रत्यौषधविधिर्लिख्यते ॥

## ಪ್ರತ್ಯೌಷಧವಿಧಿಯು

---

मत्स्याजीर्णेषु सर्वेषु निर्गुंडीस्वरसं पिबेत् ।
वराहमांसाजीर्णे तु प्रपिबेदम्लवेतसम् ॥ १ ॥

पुलाजीर्णे पटोलस्य कल्कः छागे प्रशस्यते ।
मद्याजीर्णे पुनर्मद्यं जंबीरस्वरसेन वा ॥ २ ॥

तैलाजीर्णे च पिण्याकं दद्ध्न्याजीर्णे च शर्करम् ।
जलाजीर्णे च धान्याकं क्षीराजीर्णे च शर्करः ॥ ३ ॥

शुद्धशुंठीकषायं वा क्षौद्राजीर्णे जलं पिबेत् ।
सिताजीर्णे तथा कृष्णा गुडाजीर्णे च तक्रकम् ॥ ४ ॥

पिष्टाजीर्णे चोष्णजलं तक्राजीर्णे महौषधम् ।
पृथुकानामजीर्णे तु नालिकेरोद्भवं जलम् ॥ ५ ॥

मोचाजीर्णे तु लवणं चोचाजीर्णे महौषधम् ।
वृश्चिकाळयाश्च मूलं वा शुंठीक्वाथं ससैंधवम् ॥ ६ ॥

यवक्षारपरागं वा पनसस्य विकारजित् ।
आम्रपक्वाद्यजीर्णे तु नाळिकेरं ससैंधवम् ॥ ७ ॥

कुळुत्थस्य विकारघ्नमभयाभल्कीरसम् ।
गृहधूमविकारघ्नं तक्रं सैंधवनागरम् ॥ ८ ॥

निष्पावस्य विकारघ्नं कणासैंधवनागरम् ।
चणकस्य विकारघ्नं शुंठीसैंधवजीरकम् ॥ ९ ॥

माषमुद्गविकारघ्नं शुंठीक्वाथं तु सैंधवम् ।
सर्वधान्यविकारघ्नं पटुसैंधवनागरम् ॥ १० ॥

गरुंखलमूलेन शुंठाक्वाथं पिबेत्तथा ।
वत्सापूर्वविकारस्य शुंठीकैडर्यसैंधवैः ॥ ११ ॥
अष्टचूर्णं विशेषेण यवक्षारोदकेन वा ।
सर्वकंदविकारघ्नं हिङ्गुत्रिकटुकांबुना ॥ १२ ॥
पायसान्नविकारस्य प्रत्यौषधमपूर्ववत् ।
इक्षो रसविकारस्य मरिचं नागरांबु वा ॥ १३ ॥
अम्लाहारविकारस्य तुटी शुंठ्यंबुशर्कराः ।
कटुकाहारदोषस्य नवनीतं घृतं गुडम् ॥ १४ ॥
तिक्तद्रव्यविकारस्य मधुरद्रव्यसेवनम् ।
क्षारद्रव्यविकारस्य क्षीराज्यदधिशर्कराः ॥ १५ ॥
मधुराहारदोषस्य कटुकाहारसेवनम् ।
कषायद्रव्यदोषस्य क्षारद्रव्यं विधीयते ॥ १६ ॥
पात्रदोषविकारघ्नमुशीरं चंदनोदकम् ।
फलशाकादिदोषाणां हिंगुसैंधवनागरम् ॥ १७ ॥
साजमोजोदकेनैव तक्रं वा सकणांबु वा ।
परूषकविकारघ्नं शुंठीक्वाथं ससैंधवम् ॥ १८ ॥
तालचूर्णविकारघ्नं क्वाथं सैंधवनागरम् ।
जीरकस्योदकेनैव यवक्षारघृतान्वितम् ॥ १९ ॥
लशुनस्य विकारघ्नं लामंचं चंदनं घृतम् ।
सर्षपस्य विकारघ्नं नवनीतं घृतोऽपि वा ॥ २० ॥
रामठस्य विरारघ्नमाज्यमामलकीरसम् ।
सर्वाजीर्णेषु योज्यं स्याल्लङ्घनं परमौषधम् ॥ २१ ॥
सूतादोषविकारघ्नी कूष्मांडस्वरसान्वितम् ।
जंबीरस्वरसे तद्वत् तक्रेषु हरिमञ्जरिः ॥ २२ ॥

कार्पासपत्रस्वरसे कांजिकैः सहितं पिबेत् ।
गंधकस्य विषं तीव्रं हरते तक्र चंदनम् ॥ २३ ॥
धात्रीरसमुशीरं वा माहिषं दधिसंयुतम् ।
वत्सनाभविषं हंति वरासारं पिबेत् क्षणात् ॥ २४ ॥
आज्यं मरिचचूर्णं वा तंडुली जलगोपयः ।
अर्कक्षीरविषं हंति सतिलं गुडसंयुतम् ॥ २५ ॥
स्नुहीक्षीरविषं हंति आकुलीतिलशर्कराः ।
तिल्वकस्य विकारघ्नं सतिलं मधुरत्रयम् ॥ २६ ॥
अन्योन्यं योजयेद्धीमान् माहिषस्नुग्विषेऽथवा ।
कङ्कोष्टस्य विषं हंति तुंगक्षीरं सतक्रकम् ॥ २७ ॥
ज्योतिष्मतीविषं हंति मृणाळरससर्पिषा ।
लिलतैलविकारघ्नं पिंण्याकं मधुरत्रयम् ॥ २८ ॥
सर्वतैलविकारघ्नं चित्रमूलकषायकम् ।
क्रमुकस्य विकारघ्नं रजनीपट्ट संयुतम् ॥ २९ ॥
कारस्करविषं हंति जंबूपत्ररसं परम् ।
गुञ्जाफलविषं हंति मेघनादी रसेन वाँ ॥ ३० ॥
चंदनं मधुकक्वाथे मतघ्नीस्वरसेन वा ।
छिन्नोद्भवारसेनैव रंभायाः स्वरसे परम् ॥ ३१ ॥
कन्यारसविकारघ्नं स्नुहीक्षारं ससैंधवम् ।
भल्लातकविषं हंति सतिलं गुडसंयुतम् ॥ ३२ ॥
माहिषं नवनीतं वा अक्षमूलत्वचापि वा ।
चित्रकस्य विषं तीव्रं गुडं कृष्णतिलेन वा ॥ ३३ ॥
लवणस्य विषं हंति तुळसीकेतकीरसम् ।
दुर्धूरस्य विषं हन्ति मृणाळस्वरसं परम् ॥ ३४ ॥

औदुंबरजलेनैव तन्मूलेन जलेन वा ।
कार्पासपत्रस्वरसे हरिद्राकाञ्जिकेन वा ॥ ३५ ॥
कर्पूरस्य विषं हंति कुटजत्वग्रसं परम् ।
शालीमूलविषं हंति लामञ्चं तंडुलोदकम् ॥ ३६ ॥
सूरणस्य विषं तद्वत् तांबूलीपत्रसारतः ।
वनसूरणदोषघ्नं चिञ्चापत्ररसं परम् ॥ ३७ ॥
काकमाचीविषं हंति सतक्रं चंदनोदकम् ।
सगुडं नवनीतं निशासारेण सर्पिषा ॥ ३८ ॥
जातीफलविकारस्य लिकुचाम्लेण शर्करा ।
बकुलस्य विकारं तु हरते त्रैफलोदकम् ॥ ३९ ॥
काञ्जिकं लिकुचाम्लं वा नाळिकेरोदकेन वा ।
आढकीफलदोषघ्नं तक्रं नागरसैंधवम् ॥ ४० ॥
द्रोणमूलं तु संमर्द्य नागवल्ली जलैः पिबेत् ।
सेवितं प्रगदोषघ्नं शुष्कदारुमिवाशनिः ॥ ४१ ॥
घुणदोषविकारस्य लवणं पाणिपल्लवम् ।
उष्णांबुना पिबेत्तेन गरुडेनेव पन्नगः ॥ ४२ ॥
नाळिकेरस्य बालस्य क्वाथं सर्पिर्विमिश्रितम् ।
घुणदोषहरं शीघ्रं पट्टत्तमयुतं पिबेत ॥ ४३ ॥
गृहगोळीविषं हंति निशा सा पयसस्तथा ।
पूगपक्वत्वचः सारैः स्वर्णं चंदनसर्पिषम् ॥ ४४ ॥
आत्मगुप्तविकारस्य शीघ्रं गोमयलेपनम् ।
सम्मर्द्य कदळीपक्वं भारद्वाजी च सर्पिषा ॥ ४५ ॥
उद्वर्तनं पुनस्नानं पुनः श्रीगंधलेपनम् ।
दुस्पर्शकविकारस्य शक्रमर्दलतांबुना ॥ ४६ ॥
काकतुंडीविषं हंति नीलीचंदनसर्पिषा ।

॥ इति शुभम् भूयात् ॥

# ಪ್ರತ್ಯೌಷಧವಿಧಿಯು

| ಕೆಲ ಬಗೆಯ ಪದಾರ್ಥಗಳ ಅತಿ ಸೇವನ ಪಾನ ಸ್ಪರ್ಶನಾದಿಗಳಿಂದುದ್ಭವಿಸಿದ ದೋಷ (ವಿಕಾರ)ಗಳ ಸಂದರ್ಭದಲ್ಲಿ | ತನ್ನಿವೃತ್ತಿಗಿರುವ ಅತಿ ಸುಲಭಕರವಾದ ಔಷಧೋಪಚಾರವು |
|---|---|
| **"ಶ್ಲೋಕ ಸಂಖ್ಯೆ"** | |
| ಕೆಲ ಬಗೆಯ ಮತ್ಸ್ಯಮಾಂಸಾಜೀರ್ಣದಲ್ಲಿ = | ಕರಿನೆಕ್ಕಿಯ ಸ್ವರಸವನ್ನು ಸೇವಿಸಬೇಕು. |
| 1. ಹಂದಿ ಮಾಂಸಾಜೀರ್ಣದಲ್ಲಿ = | ಪುನರ್ಪುಳಿಯ ರಸ, ಅಥವಾ ಹುಳಿರಸ. |
| ಆಡಿನ ಮಾಂಸ = | ಎಲಕ್ಕಿ ಕಾಡುಪಟೋಲ ಬೇರು ಅರೆದು ಸೇವಿಸುವುದು. |
| 2. ಮದ್ಯದ ಅಜೀರ್ಣದಲ್ಲಿ = | ಪುನಃ ಮದ್ಯಕ್ಕೆ ನಿಂಬೆಹುಳಿ ರಸ ಕೂಡಿಸಿ ಸೇವಿಸಬೇಕು. |
| ಎಳ್ಳುಕಾಳು = | ಎಳ್ಳು ಹಿಂಡಿ. |
| ಮೊಸರು = | ಸಕ್ಕರೆ ನೀರು. |
| 3. ನೀರು = | ಕೊತ್ತಂಬರಿ. |
| ಹಾಲು ಕುಡಿದ ಅಜೀರ್ಣದಲ್ಲಿ = | ಶುಂಠೀಕಷಾಯದಲ್ಲಿ ಸಕ್ಕರೆ ಸೇರಿಸಿ ಸೇವಿಸಬೇಕು. |
| ಜೇನುತುಪ್ಪದಲ್ಲಿ = | ಶುದ್ಧ ಶೀತಲ ನೀರು. |
| ಸಕ್ಕರೆಗೆ = | ಹಿಪ್ಪಲಿಚೂರ್ಣ. |
| 4. ಬೆಲ್ಲಕ್ಕೆ = | ಮಜ್ಜಿಗೆ. |
| ಪಿಷ್ಟಪದಾರ್ಥ (ಗೋದಿ, ರಾಗಿ, ಕಡ್ಲೆ, ಮುಂತಾದ್ದರ ಪುಡಿ) = | ಬಿಸಿ ಬಿಸಿ ನೀರು. |
| ಮಜ್ಜಿಗೆ = | ಶುಂಠೀರಸ. |
| 5. ಅವಲಕ್ಕಿ = | ಎಳನೀರು. |
| ಮೋಚ = | ಉಪ್ಪು. |
| ಚೋಚ (ಬೂರುಗದ ಮಯಣ, ಲವಂಗಚಕ್ಕೆ) = | ಶುಂಠಿ. |
| 6. ಹಲಸಿನ ಹಣ್ಣು = | ತೇಲ್ಲಗಡೆ ಬೇರು, ಶುಂಠಿ ಇವೆರಡರ ಕ್ವಾಥ, ಸೈಂಧವ ಲವಣ, ಯವಕ್ಷಾರ, ಚೂರ್ಣ (ಕೇವಲ ತೇಲ್ಲಗಡೆ ಬೇರಿನ ಕಷಾಯ.) |

| ಕೆಲ ಬಗೆಯ ಪದಾರ್ಥಗಳ ಅತಿ ಸೇವನ ಪಾನ ಸ್ಪರ್ಶನಾದಿಗಳಿಂದುದ್ಭವಿಸಿದ ದೋಷ (ವಿಕಾರ)ಗಳ ಸಂದರ್ಭದಲ್ಲಿ | | ತನ್ನಿವೃತ್ತಿಗಿರುವ ಅತಿ ಸುಲಭಕರವಾದ ಔಷಧೋಪಚಾರವು |
|---|---|---|
| 7. ಮಾವಿನಹಣ್ಣಿನ ವಿಕಾರದಲ್ಲಿ | = | ಬೊಂಡದ (ಎಳನೀರು) ನೀರಿನಲ್ಲಿ ಸ್ವಲ್ಪ ಸೈಂಧವಲವಣ ಕೂಡಿಸಿ ಸೇವಿಸುವುದು. ಅಣಿಲೆಕಾಯಿ ನೆಲ್ಲಿಕಾಯಿಯ ಕಷಾಯ. |
| ಹುರುಳಿ | = | ಸೈಂಧವಲವಣ, ಒಣಶುಂಠಿ, ಮಜ್ಜಿಗೆಯಲ್ಲಿ ಮಿಶ್ರಿಸಿ ಸೇವಿಸುವುದು. |
| 8 ಗೃಹಧೂಮ | = | ಹಿಪ್ಪಲಿ, ಸೈಂಧವಲವಣ, ಒಣಶುಂಠಿ ಪುಡಿಮಾಡಿ ಸೇವಿಸುವುದು. |
| ನಿಷ್ಪಾವ | = | ಶುಂಠೀರಸದಲ್ಲಿ ಸೈಂಧವಲವಣ, ಜೀರಿಗೆಚೂರ್ಣ. |
| 9. ಕಡಲೆ | = | ಶುಂಠೀಕಷಾಯದಲ್ಲಿ ಸೈಂಧವಲವಣ. |
| ಉದ್ದು-ಹೆಸರು | = | ಶುಂಠೀರಸದಲ್ಲಿ ಸೈಂಧವಲವಣ ಕೂಡಿಸಿ |
| 10. ಸಕಲ ವಿಧದ ಧಾನ್ಯಗಳಲ್ಲಿ | = | ಸೇವಿಸಬೇಕು ಅಥವಾ ಶರಪುಂಖಬೇರು ಮತ್ತು ಶುಂಠೀಕ್ವಾಥ. |
| 11. ವತ್ಸಾವಿಕಾರದಲ್ಲಿ | = | ಶುಂಠಿ, ಕಹಿಬೇವು ಇವುಗಳ ಕಷಾಯದಲ್ಲಿ ಸೈಂಧವಲವಣ ಕೂಡಿಸಿ ಸೇವಿಸುವುದು ಅಥವಾ ಯವಕ್ಷಾರದ ನೀರಿನಲ್ಲಿ ಅಷ್ಟಚೂರ್ಣವನ್ನು ಕೂಡಿಸಿ ಸೇವಿಸುವುದು. |
| 12. ಸರ್ವ ಗಡ್ಡೆಗೆಣಸುಗಳಲ್ಲಿ | = | ಕರಿಮೆಣಸು, ಹಿಪ್ಪಲಿ, ಶುಂಠಿ ಕ್ವಾಥದಲ್ಲಿ ಹಿಂಗು ಮಿಶ್ರಿಸಿ ಸೇವಿಸುವುದು. |
| ಪಾಯಸಾನ್ನವಿಕಾರಗಳಲ್ಲಿ | = | ವತ್ಸಾವಿಕಾರದಲ್ಲಿ ಹೇಳಿದ್ದಾಗಿದೆ. |
| 13. ಕಬ್ಬಿನ ರಸದ ವಿಕಾರಗಳಲ್ಲಿ | = | ಕರಿಮೆಣಸು, ಶುಂಠೀಕಷಾಯ. |
| ಹುಳಿರಸಾಧಿಕ್ಯದಲ್ಲಿ | = | ಏಲಕ್ಕಿ, ಒಣಶುಂಠಿ ಕಷಾಯದಲ್ಲಿ ಸಕ್ಕರೆ ಕೂಡಿಸಿ ಸೇವಿಸುವುದು. |
| 14. ಕಟುಕದ್ರವ್ಯಗಳಲ್ಲಿ (ಖಾರ) | = | ಹೊಸ ಬೆಣ್ಣೆ, ತುಪ್ಪ, ಬೆಲ್ಲ, ಸೇವಿಸುವುದು. |
| ಕಹಿದ್ರವ್ಯಗಳಲ್ಲಿ | = | ಮಧುರ ರಸ. |
| 15. ಕ್ಷಾರದ್ರವ್ಯಗಳಲ್ಲಿ | = | ಹಾಲು, ತುಪ್ಪ, ಮೊಸರು, ಸಕ್ಕರೆ. |

| ಕಲವು ಬಗೆಯ ಪದಾರ್ಥಗಳ ಅತಿ ಸೇವನ ಪಾನ ಸ್ಪರ್ಶನಾದಿಗಳಿಂದುದ್ಭವಿಸಿದ ದೋಷ ಗಳಲ್ಲಿ | ತನ್ನಿವೃತ್ತಿಗಿರುವ ಅತಿ ಸುಲಭಕರವಾದ ಔಷಧೋಪಚಾರವು |
|---|---|
| ಮಧುರಾಹಾರ = | ಖಾರ ವಸ್ತುಗಳನ್ನು ಸೇವಿಸುವುದು. |
| 16. ಕಷಾಯದ್ರವ್ಯಗಳಲ್ಲಿ = | ಕ್ಷಾರದ್ರವ್ಯಗಳನ್ನು ಸೇವಿಸುವುದು. |
| ಆಂತ್ರದೋಷ = | ಲಾವಂಚ, ಶ್ರೀಗಂಧ ಇವುಗಳ ಕ್ವಾಥ. |
| 17. ಹಸಿಫಲ ಶಾಕಾದಿ ವಸ್ತುಗಳ ವಿಕಾರಗಳಲ್ಲಿ = | ಓಮದ ಕಷಾಯದಲ್ಲಿ ಹಿಂಗು, ಸೈಂಧವ ಲವಣ, ಒಣಶುಂಠಿ ಇವುಗಳ ಚೂರ್ಣ ವನ್ನು ಸೇರಿಸಿ ಸೇವಿಸಬೇಕು. |
| 18. ಈಂದು ಮತ್ತು ಸಣ್ಣ ಈಂದು = | ಹಿಪ್ಪಲಿಕ್ವಾಥ ಮಜ್ಜಿಗೆನೀರು ಹಿತಕರವು. |
| 19. ತಾಲಚೂರ್ಣ(ಪನೆ ಮುಂತಾದ್ದ ರಿಂದ ತಯಾರಿಸಿದ ಪುಡಿ) = | ಶುಂಠೀಕ್ವಾಥದಲ್ಲಿ ಸೈಂಧವಲವಣ, ಕೂಡಿಸಿ ಸೇವಿಸುವುದು. |
| ಬೆಳ್ಳುಳ್ಳಿ = | ಶುಂಠೀಕ್ವಾಥದಲ್ಲಿ ಸೈಂಧವಲವಣ ಅಥವಾ ಜೀರಿಗೆಕ್ವಾಥದಲ್ಲಿ ಜವಕ್ಷಾರ, ತುಪ್ಪವನ್ನು ಸೇರಿಸಿ ಸೇವಿಸಬೇಕು. |
| 20. ಸಾಸಿವೆ = | ಲಾವಂಚ, ಚಂದನ ಕಷಾಯದಲ್ಲಿ ತುಪ್ಪ ಕೂಡಿಸಿ ಸೇವಿಸಬೇಕು. |
| ಹಿಂಗು = | ನೆಲ್ಲಿಕಾಯಿಯ ರಸದಲ್ಲಿ ಬೆಣ್ಣೆ, ವ, ತುಪ್ಪ ಸೇರಿಸಿ ಸೇವಿಸುವುದು. |
| 21. ಸರ್ವಾಜೀರ್ಣಗಳಲ್ಲಿ = | ಲಂಘನ(ಉಪವಾಸ) ಪರಮೌಷಧವು. |
| 22. ಪಾದರಸ = | ಕೂಷ್ಮಾಂಡ ಸ್ವರಸ, ನಿಂಬೆಹುಳಿ ರಸ ಇವುಗಳಲ್ಲಿ ಸಕ್ಕರೆ ಕೂಡಿಸಿ ಸೇವಿಸ ಬೇಕು, ಅಥವಾ ಅಣಲೆಕಾಯಿ, ಅರ ಸಿನ, ಮಜ್ಜಿಗೆಯಲ್ಲಿ ಅರೆದು ಕುಡಿಸು ವುದು. ಹತ್ತಿಯ ಎಲೆಯ ರಸದಲ್ಲಿ ಕಾಡಿ ನೀರನ್ನು ಸೇರಿಸಿ ಸೇವಿಸಬೇಕು. |
| 23. ಗಂಧಕ ಸೇವಿಸಿಉಂಟಾದ ವಿಕಾರ ಗಳಲ್ಲಿ = | ಮಜ್ಜಿಗೆಯಲ್ಲಿ ಚಂದನ ಅರೆದು ಸೇವಿಸ ಬೇಕು. ನೆಲ್ಲಿಕಾಯಿಯ ರಸದಲ್ಲಿ ಲಾವಂಚ ಅರೆದು ಕುಡಿಸಬೇಕು. ಎಮ್ಮೆಯ ಮೊಸರನ್ನೂ ಸಹ ಸೇವಿಸ ಬಹುದು. |

| ಕೆಲವು ಬಗೆಯ ಪದಾರ್ಥಗಳ ಅತಿ ಸೇವನ ಪಾನ ಸ್ಪರ್ಶನಾದಿಗಳಿಂದುದ್ಭವಿಸಿದ ದೋಷಗಳಲ್ಲಿ | ತನ್ನಿವೃತ್ತಿಗಿರುವ ಅತಿ ಸುಲಭಕರವಾದ ಔಷಧೋಪಚಾರವು |
|---|---|
| 24. ವತ್ಸನಾಭಿ ವಿಷಗಳಲ್ಲಿ = | ತ್ರಿಫಲಾ ಕಷಾಯ ಕೂಡಲೇ ಕುಡಿಯಬೇಕು. ಕಾಡಿಜಲದಲ್ಲಿ ಕರಿಮೆಣಸಿನ ಚೂರ್ಣ ತುಪ್ಪಕೂಡಿಸಿ ಸೇವಿಸಬೇಕು ಅಥವಾ ಇವುಗಳನ್ನು ಹಾಲಿನಲ್ಲಿಯೂ ಕೂಡಿಸಿ ಕುಡಿಯಬಹುದು. |
| 25. ಎಕ್ಕಮಾಲೆಯ ಹಾಲಿನ ದೋಷಗಳಲ್ಲಿ = | ಎಳ್ಳುಕಾಳಿನ ಕಷಾಯದಲ್ಲಿ ಬೆಲ್ಲ ಕೂಡಿಸಿ ಸೇವಿಸಬೇಕು. |
| ಕಳ್ಳಿಹಾಲಿನ ವಿಷ ವಿಕಾರದಲ್ಲ = | ಆವೀರಕ್ಕುರು, ಎಳ್ಳು, ಸಕ್ಕರೆ ಇವುಗಳು. |
| 26. ಕನಪಡಿ ಹಾಲಿನ ದೋಷದಲ್ಲಿ = | ಎಳ್ಳುಕಾಳು ಮತ್ತು ತ್ರಿಮಧುರ ಅನ್ಯೋನ್ಯ ಕೂಡಿಸಿ ಸೇವಿಸಬೇಕು, ಅದಲ್ಲದೆ ವಿಷವೃಕ್ಷಗಳ ಹಾಲು ತಗಲದ ಸಂದರ್ಭದಲ್ಲಿ ಕಳ್ಳಿಯ ವಿಷಕ್ಕೆ ಹೇಳಿದ ಮದ್ದನ್ನು ಕೊಡಿಸಬಹುದು. |
| 27. ಕಂಕುಷ್ಠ = | ತುಂಗಕ್ಷೀರ ಮತ್ತು ಮಜ್ಜಿಗೆ. |
| ಜ್ಯೋತಿಷ್ಮತೀ ವಿಕಾರೆ (ಚೆರ್ಪುನ್ನಯರಿ) = | ತಾವರೆದಿಂಡಿನ ಕ್ವಾಥದಲ್ಲಿ ತುಪ್ಪ ಸೇವಿಸುವುದು. |
| 28. ಎಳ್ಳೆಣ್ಣೆ = | ಹಿಂಡಿ ಮತ್ತು ತ್ರಿಮಧುರ. |
| ಸರ್ವವಿಧದತೈಲಗಳ ವಿಕಾರಗಳಲ್ಲಿ | ಸಣ್ಣ ಹರಳುಬೇರು ಕಷಾಯ. |
| 29. ಅಡಿಕೆಕಾಯಿ = | ಅರಸಿನ ರಸದಲ್ಲಿ ಸೈಂಧವಲವಣವನ್ನು ಕೂಡಿಸಿ ಉಪಯೋಗಿಸಬೇಕು. |
| ಕಾಸರ್ಕನ ಕಾಯಿ = | ನೇರಳೆ ಎಲೆಯ ರಸ. |
| 30. ಗುಂಜಾಫಲ ( ಗುರುಗಂಜಿ ) ದೋಷಕ್ಕೆ = | ಭದ್ರಮುಷ್ಟಿ ಕಷಾಯ, ಅಥವಾ ಚಂದನ, ಜ್ಯೇಷ್ಠಮಧು ಇವುಗಳ ಕ್ವಾಥ, ಅಮೃತಬಳ್ಳಿಯ ಕಷಾಯರಸ, ಬಾಳೆಹಣ್ಣಿನ ರಸ ಸೇವಿಸಬಹುದು. |
| 31. ತುಂಬೆರಸವಿಕಾರದಲ್ಲಿ = | ಸ್ನುಹೀಕ್ಷಾರಕ್ಕೆ ಸೈಂಧವಲವಣ. |
| 32. ಗಟ್ಟಿದಗೇರು(ಭಲ್ಲಾತಕ) = | ಎಳ್ಳುಕಾಳು, ಬೆಲ್ಲಕೂಡಿಸಿ ಸೇವಿಸಬೇಕು. ಅಥವಾ ಶಾಂತಿಮರದ ಬೇರಿನ ಮೇಲಿನ ಸಿಪ್ಪೆತೆಗೆದು ಕಷಾಯಮಾಡಿ |

| ಕೆಲವು ಬಗೆಯ ಪದಾರ್ಥಗಳ ಅತಿ ಸೇವನ ಪಾನ ಸ್ಪರ್ಶನಾದಿಗಳಿಂದುದ್ಭವಿಸಿದ ದೋಷಗಳಲ್ಲಿ | | ತನ್ನಿವೃತ್ತಿಗಿರುವ ಅತಿ ಸುಲಭಕರವಾದ ಔಷಧೋಪಚಾರವು |
|---|---|---|
| | | ಆದಕ್ಕೆ ಎಮ್ಮೆಯ ತುಪ್ಪ ಸೇರಿಸಿ ಸೇವಿಸಬೇಕು. |
| 33. ಚಿತ್ರಮೂಲ ಬೇರು | = | ಎಳ್ಳುಕಾಳು ಬೆಲ್ಲವನ್ನು ಕೂಡಿಸಿ ಕೂಡಲೇ ಸೇವಿಸಬೇಕು. |
| ಉಪ್ಪು ಸೇವಿಸಿ ಉಂಟಾಗುವ ದೋಷಕ್ಕೆ | = | ತುಳಸೀ ಬೇರು ಮತ್ತು ಕೇದಿಗೆ ಬೇರು ಕೂಡಿಸಿ ಕ್ವಾಥಮಾಡಿ ಸೇವಿಸಲು ಶಮನ. |
| 34. ಉನ್ಮತ್ತದ ದೋಷಕ್ಕೆ | = | ತಾವರೆಗಂಡು ಕಷಾಯಮಾಡಿ ಸೇವಿಸಬೇಕು. ಅಥವಾ ಅತ್ತಿಮರದ ನೀರು, ಅತ್ತಿಮರದ ಬೇರಿನ ಕ್ವಾಥ, ಅತ್ತಿ ಎಲೆಯ ರಸದಲ್ಲಿ ಅರಸಿನ ಚೂರ್ಣ ಕೂಡಿಸಿ ಸೇವಿಸುವುದು; ಕಾಡಿನೀರಿನಲ್ಲಿ ಅರಸಿನ ಚೂರ್ಣ ಸಹ ಹಿತಕರವು. |
| 35. ಕರ್ಪೂರ ದೋಷಕ್ಕೆ | = | ಕೊಡಸಿಗ ಬೇರಿನ ಮೇಲಿನ ಸಿಪ್ಪೆಯ ಕ್ವಾಥಮಾಡಿ ಸೇವಿಸಲು ಶಮನ. |
| 36. ಶಾಲ್ಮಲೀಮೂಲ | = | ಅಕ್ಕಿತೊಳೆದ ನೀರಿನಲ್ಲಿ ಲಾಮಂಚ ಅರೆದು ಸೇವಿಸಬೇಕು. |
| ಕೇನಗಡ್ಡೆ (ಸೂರಣ) | = | ನೀಳ್ಳದೆಲೆರಸ ತೆಗೆದು ಸೇವಿಸಬೇಕು. |
| 37. ಕಾಡುಕೇನೆ ಗಡ್ಡೆ | = | ಹುಣಸೆ ಎಲೆಯ ಸ್ವರಸ. |
| ಕಾಕಮಾಚಿ(ಕಾಕತ್ತೊಂಡಿಫಲ) | = | ಮಜ್ಜಿಗೆ, ಶ್ರೀಗಂಧಕ್ವಾಥಕ್ಕೆ ಬೆಲ್ಲ, ಬೆಣ್ಣೆ ಕೂಡಿಸಿ ಸೇವಿಸಬೇಕು; ಅಥವಾ ಅರಸಿನಕಷಾಯದಲ್ಲಿ ತುಪ್ಪ ಕೂಡಿಸಿ ಕೊಡಬಹುದು. |
| 38. ಜಾಯಿಕಾಯಿ. | = | ಲಕುಚಾರಸಕ್ಕೆ ಸಕ್ಕರೆ ಕೂಡಿಸಿ ಕೊಡಬಹುದು. |
| 39. ರೆಂಜೆಕಾಯಿಯ ವಿಕಾರಕ್ಕೆ | = | ತ್ರಿಫಲಾಕ್ವಾಥ, ಕಾಡಿಜಲ, ಲಕುಚರಸ (ನಿಂಬೆ)ವನ್ನೂ ಎಳನೀರನ್ನೂ ಬೇರೆಯಾಗಿ ಸೇವಿಸಬಹುದು. |
| 40. ತೊಗರಿ | = | ಮಜ್ಜಿಗೆಯಲ್ಲಿ ಶುಂಠಿ, ಸೈಂಧವಲವಣ ಕೂಡಿಸಿಕೊಡಬಹುದು; ಅಥವಾ ವೀಳ್ಯ |

| ಕೆಲವು ಬಗೆಯ ಪದಾರ್ಥಗಳ ಅತಿ ಸೇವನ ಪಾನ ಸ್ಪರ್ಶನಾದಿಗಳಿಂದುದ್ಭವಿಸಿದ ದೋಷಗಳಲ್ಲಿ | ತನ್ನಿವೃತ್ತಿಗಿರುವ ಅತಿ ಸುಲಭಕರವಾದ ಔಷಧೋಪಚಾರವು |
|---|---|
| | ದೆಲೆಯ ರಸದಲ್ಲಿ ತುಂಬೆಬೇರನ್ನು ಅರೆದು ಕೊಡಬಹುದು. |
| ಘುಣದೋಷಕ್ಕೆ = | ದೇವದಾರು ಕಷಾಯ. ಪಾಣಿಪಲ್ಲವಕ್ಕೆ ಸೈಂಧವಲವಣ, ಬಿಸಿನೀರು, ಬೆಳೆಯದಿರುವ ಎಳನೀರಿನ ತಿರುಳು (ಕರ್ಕ್ಶ) ಕಷಾಯಮಾಡಿ ತುಪ್ಪ ಸೈಂಧವಲವಣ ಸೇರಿಸಿ ಸೇವಿಸುವುದು. |
| 41. ಗೃಹಗೋಳಿ (ಪಲ್ಲಿ) ವಿಷಕ್ಕೆ. = | ಹಾಲಿನಲ್ಲಿ ಸಕ್ಕರೆ, ಅರಸಿನ ಸೇರಿಸಿ ಕುಡಿಯಬೇಕು ಅಥವಾ ಹಣ್ಣಾದ ಅಡಿಕೆ ಸಿಪ್ಪೆಯ ರಸತೆಗೆದು ಬಂಗಾರ, ಚಂದನ ತುಪ್ಪ ಕೂಡಿಸಿ ಸೇವಿಸಬೇಕು. |
| 42. ನ್ಯಾಸೊಣಗು. = | ಕೂಡಲೆ ಸೆಗಣಿಯ ಲೇಪವಂ ಮಾಡಬೇಕು. ಅನಂತರ ಬಾಳೆಹಣ್ಣು, ತಾತರ್ಬವಲ್ ರಸವನ್ನೂ ತುಪ್ಪವನ್ನೂ ಸೇರಿಸಿ ವಕ್ಷಸ್ಥಳಕ್ಕೆ ಲೇಪಿಸಿಕೊಳ್ಳಬೇಕು ಆ ಮೇಲೆ ವಮನ ಮಾಡಿಸಿ, ಸ್ನಾನ ಮಾಡಿಸಿ, ಚಂದನ ಕರ್ಪೂರ ಸೇರಿಸಿ ಲೇಪಿಸಬೇಕು. |
| 43. ಬಳ್ಳಿಆಕಿರೆ ಬೇರು = | ಇಂದ್ರವಲ್ಲೀ ಸ್ವರಸ ತೆಗೆದು ಲೇಪಿಸಿಕೊಳ್ಳುವುದು. |
| ಕಾಕತುಂಡೀ ವಿಕಾರದಲ್ಲಿ = | ಅಮರಿ ಎಲೆಯ ರಸತೆಗೆದು ಚಂದನವನ್ನೂ ತುಪ್ಪವನ್ನೂ ಕೂಡಿಸಿ ಸೇವಿಸಬೇಕು. |
| ಜೆಂಬು = | ಹುಣಸೆ ಬೀಜವನ್ನು ಮಜ್ಜಿಗೆಯಲ್ಲಿ ಅರೆದು ಕುಡಿಸಬೇಕು. |
| ಕಾಸರ್ಕನ ಬೀಜದ ದೋಷಕ್ಕೆ = | ಕೂವೆಯ ನೀರು ಸೇವಿಸುವುದು. |
| ಭಂಗಿ ದೋಷಕ್ಕೆ = | ತೇಟಾಂಪರಳನ್ನು ಮಜ್ಜಿಗೆಯಲ್ಲಿ ಅರೆದು ಕುಡಿಯಬೇಕು. ತುಷಾ(ಉಮಿ)ಭಸ್ಮವನ್ನು ನೀರಿನಿಂದ ಸೇವಿಸುವುದು. |
| ಅಫಿಮು = | ಕಡಿರಬೇರಿನ ಮೇಲಿನ ಸಿಪ್ಪೆ ತೆಗೆದು ಮಜ್ಜಿಗೆಯಲ್ಲಿ ಅರೆದು ಕುಡಿಯುವುದು. |

इदमागमसिद्धत्वात्प्रत्यक्षफलदर्शनात् ।
मंत्रवत्संप्रयोक्तव्यं न मीमांस्यं कथंचन ॥
भिषजां साधुवृत्तानां भद्रमागमशालिनाम् ।
अभ्यस्तकर्मणां भद्रं भद्रं भद्राभिलाभिणाम् ॥

ಇದಮಾಗಮಸಿದ್ಧತ್ವಾತ್ ಪ್ರತ್ಯಕ್ಷಫಲದರ್ಶನಾತ್ ।
ಮಂತ್ರವತ್ಸಂಪ್ರಯೋಕ್ತವ್ಯಂ ನ ಮೀಮಾಂಸ್ಯಂ ಕಥಂಚನ ॥
ಭಿಷಜಾಂ ಸಾಧುವೃತ್ತಾನಾಂ ಭದ್ರಮಾಗಮಶಾಲಿನಾಂ ।
ಅಭ್ಯಸ್ತಕರ್ಮಣಾಂ ಭದ್ರಂ ಭದ್ರಂ ಭದ್ರಾಭಿಲಾಭಿಣಾಂ ॥ – ॥

ಇತಿ ಆಯುರ್ವೇದ ವೈದ್ಯಶಾಸ್ತ್ರಿ ಎಂ. ಎಂ. ಆಳ್ವರಿಂದ ರಚಿತವಾದ 'ಲಘುದೀಪಿಕಾ', ಎಂಬ ಕರ್ಣಾಟಕ ವ್ಯಾಖ್ಯೆಯೊಳ್ ಪ್ರತ್ಯೌಷಧವಿಧಿ ಪ್ರಕರಣವು ಸಮಾಪ್ತವಾದುದು.




ಸಂಪೂರ್ಣಂ.

LB
N37

3568

